

M. D. ALASINGARA CHARYA

Author of Three Great Hindu Epics
Ramayana, Bharatha and Bhagavatha
in Kanarese.

ಶ್ರೀ

ಶ್ರೀ ವ್ಯಾಸಮಹರ್ಷಿಪ್ರಣೀತ

# ಶ್ರೀ ಮಹಾಭಾರತವು

ಕರ್ಣಾಟಕ ವಚನ.

## ಆದಿಪರ್ವವು.

(ಪ್ರಥಮ ಭಾಗ)

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯವಿರಚಿತವು.



ಪ್ರಕಾಶಕರು :

**ಕರ್ಣಾಟಕ ಡಿಪೋ,**

**1/59 ಸನ್ನಿಧಿ ಬೀದಿ, ತಿರುವಲ್ಲಿಕ್ಕೇಣಿ, ಮದರಾಸು.**

**1932**

[ಬೆಲೆ ೧-೧೦-೦.

ಕಾಪಿರೈಟ್, ೧೯೩೨—ಈ ಪುಸ್ತಕದ ಸರ್ವಸ್ವಾತಂತ್ರ್ಯವೂ ಇದರ ಗ್ರಂಥಕರ್ತರಿಗೆ ಸೇರಿದೆ. ಈ ಪುಸ್ತಕವನ್ನು ಸಂಪೂರ್ಣವಾಗಿಯಾಗಲಿ ಅಥವಾ ಇದರ ಯಾವುದಾದರೂ ಭಾಗವನ್ನಾಗಲಿ, ಪ್ರತ್ಯೇಕವಾಗಿ ಪ್ರಕಟಿಸುವುದಕ್ಕೂ, ಭಾಷಾಂತರಿಸಿ ವಿಕ್ರಯಿಸುವುದಕ್ಕೂ ಬೇರೊಬ್ಬರಿಗೂ ಬಾಧ್ಯತೆಯಿಲ್ಲ. ಈ ಪುಸ್ತಕದೊಳಗಿನ ಭಾವಗಳನ್ನಾಗಲಿ, ಪದಗಳನ್ನಾಗಲಿ, ಚಿತ್ರಪಟಗಳನ್ನಾಗಲಿ ಇತರರು ಕಾಪಿಮಾಡಿದಪಕ್ಷದಲ್ಲಿ, ಅಂತವರು ಕಾಪೀರೈಟನ್ನು ಉಲ್ಲಂಘಿಸಿದಂತಾಗುವುದು. ಆದುದರಿಂದ ಯಾವ ಭಾಗದಲ್ಲಿಯಾದರೂ ಈ ಕಾಪಿರೈಟನ್ನು ಉಲ್ಲಂಘಿಸಿದವರು, ನಷ್ಟದ ದಾವೆಗೆ ಗುರಿಯಾಗುವರೆಂದು ಇದರಿಂದ ತಿಳಿಸಲಾಗಿದೆ.



# ವಿಷಯಾನುಕ್ರಮಣಿಕೆ.

## ಆಸ್ತೀಕಪರ್ವವು.

## ಅಂಶಾವತರಣಪರ್ವವು.

# ಚಿತ್ರಪಟಗಳ ಪಟ್ಟಿ.







ऐष नारायणः श्रीमान् क्षीरार्णवनिकेतनः ।
नागपर्यंकमुत्सृज्य ह्यागतो मधुरां पुरीम् ॥



# ಶ್ರೀ ಮಹಾಭಾರತವು

## ಆದಿಪರ್ವವು.

---

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

### ಅನುಕ್ರಮಣಿಕಾಪರ್ವವು

ಮಂಗಳಾಚರಣೆ. ಸೂತಪೌರಾಣಿಕನು ನೈಮಿಶಾರಣ್ಯಕ್ಕೆ ಬಂದುದು. ಅಲ್ಲಿ ಸತ್ರಯಾಗವನ್ನು ನಡೆಸುತಿದ್ದ ಶೌನಕಾದಿಗಳು ಭಾರತಕಥೆಯನ್ನು ಹೇಳಬೇಕೆಂದು ಸೂತಪೌರಾಣಿಕನನ್ನು ಕೇಳಿಕೊಂಡುದು. ಸೂತಪೌರಾಣಿಕನು ಶ್ರೀಮನ್ನಾರಾಯಣನನ್ನು ನಮಸ್ಕರಿಸಿ, ಮೊದಲು ವ್ಯಾಸಮಹರ್ಷಿಯು ಭಾರತವನ್ನು ರಚಿಸಿದ ರೀತಿಯನ್ನು ತಿಳಿಸಿದುದು. ಭಾರತದಲ್ಲಿರುವ ಪರ್ವಾನುಕ್ರಮಣಿಕೆ

ಪುರುಷೋತ್ತಮನಾದ ನಾರಾಯಣನನ್ನೂ, ನರನನ್ನೂ (ನರನಾರಾಯಣಮಹರ್ಷಿಗಳನ್ನೂ) ಸರಸ್ವತೀದೇವಿಯನ್ನೂ, ವ್ಯಾಸಮುನಿಯನ್ನೂ ನಮಸ್ಕರಿಸಿ, ಆಮೇಲೆ (1) ಶ್ರೀ ಮಹಾಭಾರತವೆಂಬ ಇತಿಹಾಸವನ್ನು ನುಡಿಯಬೇಕು.

---

(1) " ಅಷ್ಟಾದಶ ಪುರಾಣಾನಿ ರಾಮಸ್ಯ ಚರಿತಂ ತಥಾ । ಕಾರ್ಷ್ಣಂ ವೇದಃ ಪಂಚಮಶ್ಚ ಯಂ ಮಹಾಭಾರತಂ ವಿದುಃ ॥ ಜಯೇತಿ ನಾಮ್ನಾ ತ್ವೇತಾಂಸ್ತು ಪ್ರವದಂತಿ

(1) ನಾರಾಯಣಂ ಸುರಗುರುಂ ಜಗದೇಕನಾಥಂ |
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ||
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ |
ವನ್ದೇ ಭವಘ್ನಮಮರಾಸುರಸಿದ್ಧವನ್ದ್ಯಂ ||

ದೇವಗುರುವಾಗಿ, ಲೋಕೈಕನಾಥನಾಗಿ, ಭಕ್ತಪ್ರಿಯನಾಗಿ, ಸರ್ವಲೋಕನಮಸ್ಕೃತನಾಗಿ, ಸತ್ವರಜಸ್ತಮೋಗುಣಗಳಿಲ್ಲದವನಾಗಿ, ಜನ್ಮರಹಿತನಾಗಿ, ವಿಭುವಾಗಿ, ಆದಿಪುರುಷನಾಗಿ, ಸರ್ವೇಶ್ವರನಾಗಿ, ಸಂಸಾರತಾರಕನಾಗಿ, ದೇವಾಸುರಸಿದ್ಧರಿಂದ ವಂದಿತನಾದ ಶ್ರೀಮನ್ನಾರಾಯಣನನ್ನು ವಂದಿಸುವೆನು.

(2) ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ |
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ||

ಉತ್ತಮವಾದ ಧರ್ಮಕ್ಕೂ, ಶ್ರೀಕೃಷ್ಣನಿಗೂ, ಬ್ರಹ್ಮನಿಗೂ, ಬ್ರಾಹ್ಮಣರಿಗೂ ನಮಸ್ಕರಿಸಿ, ಈ ಗ್ರಂಥದಮೂಲಕವಾಗಿ ಶಾಶ್ವತಗಳಾದ ಅನೇಕ ಧರ್ಮಗಳನ್ನು ನಿರೂಪಿಸುವೆನು.

ಓಂ ನಮಃ ಪಿತಾಮಹಾಯ, ಓಂ ನಮಃ ಪ್ರಜಾಪತಿಭ್ಯಃ, ಓಂ ನಮಃ ಕೃಷ್ಣದ್ವೈಪಾಯನಾಯ, ಓಂ ನಮಃ ಸರ್ವವಿಘ್ನವಿನಾಯಕೇಭ್ಯಃ ||

ಪಿತಾಮಹನಿಗೂ, ಸೃಷ್ಟಿಕರ್ತರಾದ ಪ್ರಜಾಧಿಪತಿಗಳಿಗೂ, ವ್ಯಾಸಮುನಿಗೂ, ವಿಘ್ನದೇವತೆಗಳಿಗೂ ನಮಸ್ಕಾರವು.

---

ಮನೀಷಿಣಃ '' ಎಂದು ಭವಿಷ್ಯತ್ಪುರಾಣವಚನವಿರುವುದರಿಂದಲೂ, '' ಚತುರ್ಣಾಂ ಪುರುಷಾರ್ಥಾನಾಮಪಿ ಹೇತೌ ಜಯೋ ಮತಃ '' ಚತುರ್ವಿಧ ಪುರುಷಾರ್ಥಗಳಿಗೆ ಕಾರಣಭೂತವಾದುದರಲ್ಲಿಯೂ ಜಯಶಬ್ದಪ್ರಯೋಗವುಂಟೆಂಬ ಕೋಶವಚನದಿಂದಲೂ, ಇಲ್ಲಿ ಜಯವೆಂಬ ಪದಕ್ಕೆ ಭಾರತವೆಂದೇ ಅರ್ಥವನ್ನು ಗ್ರಹಿಸಬೇಕು.

(1) ಇದು ಮಧ್ವಸಂಪ್ರದಾಯದಲ್ಲಿಮಾತ್ರ ಅನುಸಂಧಿಸಲ್ಪಡುವ ಪ್ರಾರ್ಥನಾ ಶ್ಲೋಕವು.

(2) ಕೆಲವು ಕೋಶಗಳ ರೀತಿಯಾಗಿ ಇದೇ ಭಾರತದ ಮೊದಲನೆಯ ಶ್ಲೋಕವು.

(1) ನೈಮಿಶಾರಣ್ಯದಲ್ಲಿ ಶೌನಕನೆಂಬ (2) ಕುಲಪತಿಯು, ಹನ್ನೆರಡು ವರ್ಷಕಾಲದವರೆಗೆ ನಡೆಸತಕ್ಕ (3) ದೀರ್ಘಸತ್ರವೆಂಬ ಒಂದು ಯಾಗವನ್ನು ಮಾಡುತಿದ್ದನು. ಅಲ್ಲಿ ವ್ರತನಿಷ್ಠರಾದ ಬ್ರಹ್ಮರ್ಷಿಗಳೆಲ್ಲರೂ ತಮ್ಮ ತಮ್ಮ ಕಾರ್ಯಗಳನ್ನು ತೀರಿಸಿಕೊಂಡು ಸುಖವಾಗಿ ಕುಳಿತಿದ್ದಾಗ, ಒಮ್ಮೆ (4) ರೋಮಹರ್ಷಣನ ಮಗನಾದ, (5) ಉಗ್ರಶ್ರವನೆಂಬ (6) ಸೂತಪೌರಾಣಿಕನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು, ಅಲ್ಲಿದ್ದ ಮಹರ್ಷಿಗಳನ್ನು ಕಂಡೊಡನೆ ವಿನಯದಿಂದ ನಮಸ್ಕರಿಸಿದನು.

ಅಲ್ಲಿದ್ದ ಋಷಿಗಳೆಲ್ಲರೂ ಆ ಸೂತನಿಂದ ವಿಚಿತ್ರಕಥೆಗಳನ್ನು ಕೇಳಬೇಕೆಂಬ ಆತುರದಿಂದ ಅವನ ಮುಂದೆ ಬಂದು ನಿಂತರು. ಆಗ ಸೂತನು ಆ ಋಷಿಗಳೆಲ್ಲರಿಗೂ ಕೈಮುಗಿದು ನಮಸ್ಕರಿಸಿ, “ಓ ಮಹಾತ್ಮರೆ! ನಿಮ್ಮ

---

(1) ಬ್ರಹ್ಮನು ತನ್ನ ಮನಸ್ಸಿನಿಂದ ಸೂರ್ಯತೇಜಸ್ಸುಳ್ಳ ಒಂದು ಚಕ್ರವನ್ನು ನಿರ್ಮಿಸಿ, ಅದರ ನೇಮಿಯು (ಬಳೆಯು) ಎಲ್ಲಿ ಕದಲ ಬೀಳುವುದೋ, ಆ ಸ್ಥಳವು ತಪಸ್ಸಿಗೆ ಯೋಗ್ಯವಾದುದೆಂದು ಬ್ರಾಹ್ಮಣರಿಗೆ ಹೇಳಿ ಆ ಚಕ್ರವನ್ನು ಪ್ರೇರಿಸಿದನು. ಅದೇ ಚಕ್ರದ ನೇಮಿಯು ಕಳಚಿ ಬಿದ್ದ ಸ್ಥಳವಾದುದರಿಂದ, ನೈಮಿಶಾರಣ್ಯವೆಂದು ಹೆಸರಾಯಿತು. ಇದಕ್ಕೆ ವರಾಹಪುರಾಣದಲ್ಲಿ “ನೈಮಿಷಾರಣ್ಯವೆಂಬ ಹೆಸರಿದೆ. ನಿಮಿಷಮಾತ್ರದಲ್ಲಿ ಆ ಸ್ಥಳದಲ್ಲಿ ಅನೇಕ ದಾನವಸೈನ್ಯವು ಹತವಾದುದರಿಂದ ಆ ಹೆಸರು ಬಂತೆಂದು ಹೇಳಿದೆ.

(2) ಕುಲಪತಿಯೆಂದರೆ “ಏಕೋ ದಶಸಹಸ್ರಾಣಿ ಯೋಽನ್ನದಾನಾದಿನಾ ಭರೇತ್ | ಸ ವೈ ಕುಲಪತಿಃ” ಹತ್ತು ಸಾವಿರಮಂದಿ ಶಿಷ್ಯರನ್ನು ತಾನೊಬ್ಬನೇ ಅನ್ನದಾನಾದಿಗಳಿಂದ ಭರಿಸತಕ್ಕವನು ಕುಲಪತಿಯೆನಿಸುವನು.

(3) ದೀರ್ಘಸತ್ರವೆಂದರೆ, ಯಜಮಾನರೇ ಋತ್ವಿಕ್ಕುಗಳಾಗಿದ್ದು, ಅನೇಕರು ಸೇರಿ ನಡೆಸತಕ್ಕ ಒಂದು ವಿಧವಾದ ಯಜ್ಞವು.

(4) ರೋಮಹರ್ಷಣನೆಂದರೆ ರಸಭರಿತವಾದ ತನ್ನ ಮಾತಿನಿಂದ ಕೇಳುವವರಿಗೆ ರೋಮಾಂಚವನ್ನು ಹುಟ್ಟಿಸತಕ್ಕವನೆಂದರ್ಥವು.

(5) ಉಗ್ರಶ್ರವಸ್ಸೆಂಬುದರಲ್ಲಿ ಉಗ್ರವೆಂದರೆ ನೃಸಿಂಹನು. ಅವನ ಕಥಾಶ್ರವಣವುಳ್ಳವನೆಂದು ವ್ಯುತ್ಪತ್ತಿಯು.

(6) ಸೂತಕುಲವೆಂದರೆ, ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯಬೀಜಕ್ಕೆ ಹುಟ್ಟಿದ ಸಂತಾನವೆಂದು ಯಾಜ್ಞವಲ್ಕ್ಯಸ್ಮೃತಿ. ಆದರೆ ವಾಯುಪುರಾಣದಲ್ಲಿ, ಪೃಥುಚಕ್ರವರ್ತಿಯು ಯಾಗಮಾಡುವಾಗ ಇಂದ್ರನಿಗಾಗಿ ಕೊಟ್ಟ ಹವಿಸ್ಸೂ, ಬೃಹಸ್ಪತಿಗಾಗಿ ಕೊಟ್ಟ ಹವಿಸ್ಸೂ ಸೇರಿ ಹೋಮಮಾಡಲ್ಪಟ್ಟುದರಿಂದ, ಸೂತಕುಲವುಂಟಾಯಿತೆಂದು ಹೇಳಿದೆ.

ತಪಸ್ಸುಗಳೆಲ್ಲವೂ ನಿರ್ವಿಘ್ನವಾಗಿ ನೆರವೇರುತ್ತಿರುವುವಷ್ಟೆ?" ಎಂದು ಕುಶಲಪ್ರಶ್ನವನ್ನು ಮಾಡಿದನು. ಋಷಿಗಳೂ ಅವನನ್ನು ಯಥೋಚಿತವಾಗಿ ಸತ್ಕರಿಸಿದರು. ಆಮೇಲೆ ಅಲ್ಲಿದ್ದ ಮಹರ್ಷಿಗಳೆಲ್ಲರೂ ತಮ್ಮತಮ್ಮ ಆಸನದಲ್ಲಿ ಸುಖವಾಗಿ ಕುಳಿತಮೇಲೆ, ಸೂತಪೌರಾಣಿಕನೂ ಕೂಡ, ಅವರು ತನಗೆ ತೋರಿಸಿದ ಒಂದಾಸನದಲ್ಲಿ ವಿನಯನಮ್ರನಾಗಿ ಕುಳಿತುಕೊಂಡನು. ಹೀಗೆ ಸೂತಪೌರಾಣಿಕನು ಸುಖೋಪವಿಷ್ಟನಾಗಿ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ಹೊಂದಿದಮೇಲೆ, ಆ ಮಹರ್ಷಿಗಳಲ್ಲಿ ಒಬ್ಬನು (ಆತನು ಮುಂದೆ ಹೇಳಬೇಕಾದ ಕಥೆಗಳಿಗೆ ಪ್ರಸ್ತಾವನೆಯಾಗಿ) ಅವನನ್ನು ಕುರಿತು ಹೀಗೆಂದು ಪ್ರಶ್ನೆಮಾಡುವನು. "ಓ ಸೂತಕುಮಾರಾ! ಈಗ ನೀನು ಎಲ್ಲಿಂದ ಬರುತ್ತಿರುವೆ? ಇದುವರೆಗೆ ನೀನು ವಾಸಮಾಡುತ್ತಿದ್ದ ಸ್ಥಳವಾವುದು?" ಎಂದನು. ಆಗ ಪ್ರಶಸ್ತವಾಕ್ಯಳ್ಳ ಸೂತಪೌರಾಣಿಕನು, ಆ ಮಹರ್ಷಿಯ ಪ್ರಶ್ನೆಗೆ ಉತ್ತರವನ್ನು ಹೇಳುವ ನೆವದಿಂದ, ಅನೇಕ ಮಹರ್ಷಿಗಳ ಮತ್ತು ಅನೇಕರಾಜರ ಚರಿತ್ರಗಳೆಲ್ಲವನ್ನೂ ತಿಳಿಸುವುದಕ್ಕಾಗಿ, ಆ ಸದಸ್ಸಿನಲ್ಲಿ ನೆರೆದಿದ್ದ ಶುದ್ಧಮನಸ್ಕರಾದ ಋಷಿಗಳನ್ನು ಕುರಿತು ಹೀಗೆಂದು ಹೇಳುವನು.

"ಓ ಮಹರ್ಷಿಗಳಿರಾ! ಪರೀಕ್ಷಿದ್ರಾಜನ ಮಗನಾಗಿ, ಮಹಾತ್ಮನಾಗಿ, ರಾಜರ್ಷಿಯೆನಿಸಿಕೊಂಡ ಜನಮೇಜಯನು ಸರ್ಪಯಾಗವನ್ನು ಮಾಡಿದಾಗ, ವೈಶಂಪಾಯನಮಹರ್ಷಿಯು ವೇದವ್ಯಾಸಪ್ರೋಕ್ತಗಳಾದ ಅತಿವಿಚಿತ್ರಕಥೆಗಳನ್ನು ಆ ರಾಜನಿಗೆ ವಿವರಿಸಿರುವನು. ಅವೆಲ್ಲವೂ ಶ್ರೀಮಹಾಭಾರತಕ್ಕೆ ಸಂಬಂಧಿಸಿದ ಪುಣ್ಯಕಥೆಗಳು. ನಾನೂ ಆ ಯಾಗಕಾಲದಲ್ಲಿ ಅಲ್ಲಿಗೆ ಹೋಗಿದ್ದೆನು. ಆ ಕಥೆಗಳೆಲ್ಲವನ್ನೂ ಕೇಳಿದೆನು. ಆಮೇಲೆ ನಾನು ಅನೇಕಕ್ಷೇತ್ರಗಳನ್ನೂ, ತೀರ್ಥಗಳನ್ನೂ ಯಾತ್ರೆಮಾಡಿಕೊಂಡು, ಪರಮಪವಿತ್ರವಾಗಿಯೂ, ಅನೇಕ ಬ್ರಾಹ್ಮಣರಿಂದ ಸೇವಿತವಾಗಿಯೂ ಇರುವ (1) ಸಮಂತಪಂಚಕಕ್ಷೇತ್ರಕ್ಕೆ ಹೋದೆನು. ಮೊದಲು

(1) ಸ್ಯಮಂತಕಪಂಚಕವೆಂದರೆ, ಪರಶುರಾಮನು ಕ್ಷತ್ರಿಯರ ರಕ್ತಪ್ರವಾಹದಿಂದ ಮಾಡಿದ ಐದು ಮಡುಗಳನ್ನೊಳಕೊಂಡ ಪ್ರದೇಶವೆಂದರ್ಥವು.

ಕೌರವ ಪಾಂಡವರಿಗೂ, ಅವರ ಪಕ್ಷಕ್ಕೆ ಸೇರಿದ್ದ ಅನೇಕರಾಜರಿಗೂ ದೊಡ್ಡ ಯುದ್ಧವು ನಡೆದ ಸ್ಥಳವೇ ಅದು! ನಾನು ಅಲ್ಲಿಂದ ಈಗಲೇ ಹೊರಟು ತಮ್ಮ ದರ್ಶನಾರ್ಥವಾಗಿ ಇಲ್ಲಿಗೆ ಬಂದೆನು. ಓ ಮಹಾತ್ಮರೇ! ಆಯುಷ್ಮಂತರಾದ ನೀವೆಲ್ಲರೂ ಉತ್ತಮವಾದ ಬ್ರಹ್ಮಕುಲದಲ್ಲಿ ಹುಟ್ಟಿದವರು. ನನಗೆ ಪರಮಪ್ರಿಯರು! ಸೂರ್ಯಾಗ್ನಿಗಳಂತೆ ಮಹಾತೇಜಸ್ಸುಳ್ಳ ನೀವೆಲ್ಲರೂ ಈ ಯಜ್ಞದಲ್ಲಿ ಸೇರಿರುವುದನ್ನು ಕೇಳಿಯೇ ನಾನೂ ಇಲ್ಲಿಗೆ ಬಂದೆನು. ನೀವೆಲ್ಲರೂ ಸ್ನಾನಮಾಡಿ ಅಗ್ನಿಹೋತ್ರ ಜಪಾದಿ ಕಾರ್ಯಗಳೆಲ್ಲವನ್ನೂ ತೀರಿಸಿಕೊಂಡು ಈಗ ಸುಖವಾಗಿ ಕುಳಿತಿರುವ ಕಾಲವಲ್ಲವೆ? ಓ ಬ್ರಾಹ್ಮಣೋತ್ತಮರೇ! ಈಗ ನಾನು ನಿಮ್ಮ ಮುಂದೆ ಯಾವ ಕಥೆಯನ್ನು ಉಪಕ್ರಮಿಸಲಿ? ಧರ್ಮಾರ್ಥಗಳನ್ನು ಪ್ರತಿಪಾದಿಸತಕ್ಕ ಪುರಾಣಸಂಹಿತೆಗಳನ್ನು ಹೇಳಲೆ? ಅಥವಾ ಅನೇಕರಾಜೇಂದ್ರರ ಚರಿತ್ರರೂಪವಾದ ಇತಿಹಾಸವನ್ನು ಹೇಳಲೆ? ಇಲ್ಲವೇ ಮಹಾತ್ಮರಾದ ಋಷಿಗಳ ಚರಿತ್ರಗಳನ್ನು ವಿವರಿಸಲೆ? ಈ ವಿಚಾರವನ್ನು ತಾವೇ ಆಜ್ಞಾಪಿಸಬೇಕು" ಎಂದನು.

ಅದಕ್ಕಾ ಮಹರ್ಷಿಗಳು "ಓ ಸೂತಾ! ಮಹಾತ್ಮಾ! ವೇದವ್ಯಾಸಮಹರ್ಷಿಯಿಂದ ರಚಿತವಾದ ಮಹಾಭಾರತವೆಂಬ ಇತಿಹಾಸವುಂಟಲ್ಲವೆ? ಅದು ಪುರಾತನವಾಗಿ, ದೇವತೆಗಳಿಂದಲೂ, ಬ್ರಹ್ಮರ್ಷಿಗಳಿಂದಲೂ ಆದರಿಸಲ್ಪಟ್ಟಿರುವುದು. ಮತ್ತು ಅದು ವಿಚಿತ್ರಪದಸಂದರ್ಭಗಳಿಂದಲೂ, ಪರ್ವಗಳೆಂಬ ವಿಭಾಗಗಳಿಂದಲೂ, ಸೂಕ್ಷ್ಮಾರ್ಥಗಳಿಂದಲೂ, ನ್ಯಾಯನೀತಿಗಳಿಂದಲೂ ಕೂಡಿ, ಉಪಾಖ್ಯಾನಗಳಲ್ಲಿ ರತ್ನಪ್ರಾಯವೆನಿಸಿರುವುದು. ಅದರ ವಾಕ್ಯಗಳು ಸುಸಂಸ್ಕೃತಗಳಾಗಿ, ವಿಷಯಗಳೆಲ್ಲ ಗ್ರಂಥರೂಪದಲ್ಲಿರುವುವು. ಮತ್ತು ಅದು ವೇದಾರ್ಥಗಳಿಂದಲೂ, ಅನೇಕ ಶಾಸ್ತ್ರಾರ್ಥಗಳಿಂದಲೂ ಗರ್ಭಿತವಾಗಿರುವುದು. ಅದರಲ್ಲಿ ಚತುರ್ವೇದಗಳೂ ಪ್ರತಿಪಾದಿಸಲ್ಪಡುವುವು. ಜನಮೇಜಯನು ಸರ್ಪಯಾಗವನ್ನು ನಡೆಸಿದಾಗ ವೈಶಂಪಾಯನಮುನಿಯು ವ್ಯಾಸಾಜ್ಞೆಯಿಂದ ಅದನ್ನು ಯಥಾವಸ್ಥಿತವಾಗಿ (ಇದ್ದುದಿದ್ದಂತೆ) ತಿಳಿಸಿರುವನು. ಹೀಗೆ ಅದ್ಭುತಕವಿಯಾದ ವ್ಯಾಸಮುನಿಯಿಂದ ರಚಿತವಾಗಿ, ಪರಮಪಾವನವಾಗಿ, ಪಾಪಭಯನಿವಾರಕವಾದ

ಆ ಮಹಾಭಾರತಸಂಹಿತೆಯನ್ನೇ ನಿನ್ನಿಂದ ನಾವು ಕೇಳಬೇಕೆಂದಿರುವೆವು" ಎಂದರು.

ಆಗ ಸೂತನು "ಓ ಮಹರ್ಷಿಗಳಿರಾ! ಮೊದಲು ಆದಿಪುರುಷನಾದ ಭಗವಂತನಿಗೆ ನಮಸ್ಕರಿಸುವೆನು. ಆ ಭಗವಂತನು ಅನೇಕ ಯಾಗಾರಾಧ್ಯನು. ಅನೇಕರಿಂದ ಸ್ತುತಿಸಲ್ಪಡತಕ್ಕವನು. ಸರ್ವೇಶ್ವರನು. ಸರ್ವಸ್ವರೂಪನು. ಅದ್ವಿತೀಯವೆನಿಸಿಕೊಂಡ ನಾಶರಹಿತವಾದ ಬ್ರಹ್ಮವೇ ಅವನು. (ಏಕಾಕ್ಷರವುಳ್ಳ ಪ್ರಣವಸ್ವರೂಪನು.) ಅವನು ರಾಮಕೃಷ್ಣಾದ್ಯವತಾರಗಳಿಂದ ವ್ಯಕ್ತನೂ, ಜ್ಞಾನಾನಂದಾದಿ ರೂಪಗಳಿಂದ ಅವ್ಯಕ್ತನೂ ಆಗಿರುವನು. ಸದಸದ್ರೂಪವಾದ ಪ್ರಪಂಚವೇ ತಾನಾಗಿದ್ದರೂ, ಅವೆರಡಕ್ಕಿಂತಲೂ ಬೇರೆಯಾಗಿರುವನು. ಉಚ್ಚನೀಚಗಳಾದ ಪ್ರಪಂಚಕ್ಕೆಲ್ಲ ಆತನೇ ಸೃಷ್ಟಿಕರ್ತನು. ಪುರಾಣಪುರುಷನು. ಪರಾವರನು. ಅವ್ಯಯನು. ಮಂಗಳಪ್ರದನು. ಮಂಗಳಸ್ವರೂಪನು. ಸರ್ವಲೋಕವ್ಯಾಪಿಯಾದುದರಿಂದ ವಿಷ್ಣುವೆನಿಸುವನು. ಸರ್ವಶ್ರೇಷ್ಠನು. ಪಾಪವಿದೂರನು. ಶುದ್ಧನು. ಸರ್ವೇಂದ್ರಿಯಗಳಿಗೂ ನಿಯಾಮಕನು. ಚರಾಚರಗಳಿಗೆಲ್ಲ ಗುರುವೆನಿಸಿದವನು. ಇಂತಹ ಶ್ರೀಹರಿಗೆ ನಮಸ್ಕರಿಸಿ, ಲೋಕಪೂಜಿತನಾಗಿಯೂ, ಮಹಾತ್ಮನಾಗಿಯೂ, ಆಶ್ಚರ್ಯಚರಿತವುಳ್ಳವನಾಗಿಯೂ ಇರುವ ವೇದವ್ಯಾಸಮಹಾಮುನಿಯ ಪವಿತ್ರವಾದ ಮತವನ್ನು ಇಲ್ಲಿ ವಿವರಿಸುವೆನು.

ಯಾವನ ಅನುಗ್ರಹಬಲದಿಂದಲೇ ಈಗ ನಾನು ಆ ಭಗವತ್ಕಥೆಯನ್ನು ವಿವರಿಸಬೇಕೆಂದಿರುವೆನೋ ಅಮಿತತೇಜಸ್ಸುಳ್ಳ ಆ ವೇದವ್ಯಾಸನಿಗೆ ವಂದನವು. ಸಮಸ್ತ ವರ್ಣಾಶ್ರಮಧರ್ಮಗಳೂ, ಸಮಸ್ತ ತೀರ್ಥಸ್ನಾನಗಳೂ ಭಗವತ್ಕಥೆಗಳಂತೆ ಫಲಪ್ರದವಾಗಲಾರವು. ಆ ಶ್ರೀಮನ್ನಾರಾಯಣನಿಗೆ ಸಮವಾದ ದೈವವು ಹಿಂದೆಯೂ ಇಲ್ಲ! ಮುಂದೆಯೂ ಇಲ್ಲ! "ನಾಸ್ತಿ ನಾರಾಯಣಸಮಂ ನಭೂತಂ ನಭವಿಷ್ಯತಿ" ಎಂಬ ಈ ಸತ್ಯವಾಕ್ಯವನ್ನು ಹಿಡಿದೇ ನಾನು ಸರ್ವಾರ್ಥಗಳನ್ನೂ ಸಾಧಿಸುವೆನು. ಓ ಮಹರ್ಷಿಗಳಿರಾ! ಈ ಇತಿಹಾಸವನ್ನು ಭೂಮಿಯಲ್ಲಿ ಹಿಂದೆಯೂ ಕೆಲವು ವಿದ್ವಾಂಸರು ನಿರೂಪಿಸಿರುವರು. ಈಗಲೂ ಕೆಲವರು ಅನು

ಸಂಧಿಸುತ್ತಿರುವರು. ಮತ್ತೆ ಕೆಲವರು ಮುಂದೆಯೂ ಹೇಳುವರು. ಮಹಾಜ್ಞಾನಸಾಧನವಾದ ಈ ಸಚ್ಚರಿತ್ರವು ಮೂರುಲೋಕಗಳನ್ನೂ ವ್ಯಾಪಿಸಿರುವುದು. ದ್ವಿಜರೆಲ್ಲರೂ ಈ ಆಖ್ಯಾನವನ್ನು ವಿಸ್ತರವಾಗಿಯೂ, ಸಂಗ್ರಹವಾಗಿಯೂ ಮನಸ್ಸಿನಲ್ಲಿ ಧಾರಣಮಾಡುತ್ತಿರುವರು. ಈ ಗ್ರಂಥವು ಅಂದವಾದ ಶಬ್ದಗಳಿಂದಲೂ, ದೈವಮಾನುಷಾದಿ ವ್ಯವಹಾರಗಳಿಂದಲೂ, ನಾನಾಬಗೆಯ ಛಂದೋವೃತ್ತಿಗಳಿಂದಲೂ, ಅತಿರಮ್ಯವಾಗಿರುವುದರಿಂದ ವಿದ್ವಾಂಸರೆಲ್ಲರಿಗೂ ಅತಿಪ್ರಿಯವಾಗಿರುವುದು. ಸತ್ಯವತೀಪುತ್ರನಾದ ವ್ಯಾಸಮಹಾಮುನಿಯು, ಸ್ನಾನಮಾಡಿ ಶುಚಿಯಾಗಿ, ಹಿಮವತ್ಪರ್ವತದ ತಳದಲ್ಲಿದ್ದ ಪರಿಶುದ್ಧವಾದ ಒಂದಾನೊಂದು ಗುಹೆಯಲ್ಲಿ, ದರ್ಭಾಸ್ತರಣದ ಮೇಲೆ ಕುಳಿತು, ಮನಸ್ಸನ್ನು ನಿಗ್ರಹಿಸಿ, ತಪೋನಿಷ್ಠನಾಗಿ, ಆ ತಪಶ್ಶಕ್ತಿಯಿಂದ ಜ್ಞಾನಯೋಗವನ್ನು ಹಿಡಿದು, ಆ ಧ್ಯಾನದೃಷ್ಟಿಯಿಂದಲೇ ಈ ಭಾರತವೆಂಬ ಇತಿಹಾಸದ ವೃತ್ತಾಂತಗಳನ್ನೆಲ್ಲ ಸಂಪೂರ್ಣವಾಗಿ ಕಂಡುಕೊಂಡನು. ಆಗ ಆ ವ್ಯಾಸಮುನಿಯು ಧ್ಯಾನಯೋಗದಿಂದ ಕಂಡುಕೊಂಡ ವಿಷಯಗಳಾವುವೆಂದರೆ:—ಪ್ರಕಾಶವಾಗಲಿ, ಜ್ಞಾನವಿಕಾಸವಾಗಲಿ ಇಲ್ಲದೆ, ಲೋಕವೆಲ್ಲವೂ ತಮಸ್ಸಿನಿಂದ ಆವೃತವಾಗಿದ್ದಾಗ, ಪ್ರಜೆಗಳಿಗೆಲ್ಲಕ್ಕೂ ಬೀಜಭೂತವಾದ ಅಂಡವೊಂದು ಉದ್ಭವಿಸಿತು. ಮಹತ್ತಾಗಿಯೂ, ದಿವ್ಯವಾಗಿಯೂ ಇದ್ದ ಆ ಅಂಡವನ್ನೇ ಯುಗಕ್ಕೆ ಆದಿನಿಮಿತ್ತವೆಂದು ಹೇಳುವರು. ಯಾವುದನ್ನು ಶ್ರುತಿಗಳು ಸತ್ಯವೆಂದೂ, ಜ್ಯೋತಿಸ್ಸ್ವರೂಪವೆಂದೂ, ಸನಾತನವೆಂದೂ, ಅದ್ಭುತವೆಂದೂ, ಅಚಿಂತ್ಯವೆಂದೂ, ಎಲ್ಲವುಗಳಲ್ಲಿಯೂ ಏಕರೂಪವಾಗಿರತಕ್ಕುದೆಂದೂ, ಅವ್ಯಕ್ತವೆಂದೂ, ಸರ್ವಕಾರಣವೆಂದೂ, ಸೂಕ್ಷ್ಮವೆಂದೂ, ಸದಸದಾತ್ಮಕವೆಂದೂ ಪ್ರತಿಪಾದಿಸುವುವೋ ಆ ಬ್ರಹ್ಮವೇ ಹಾಗೆ ಅಂಡರೂಪವಾಗಿದ್ದಿತು. ಆ ಅಂಡದಿಂದ ಮೊದಲು ಪ್ರಜಾಪತಿಯೂ ಪ್ರಭುವೂ ಆದ ಪಿತಾಮಹನೊಬ್ಬನುಮಾತ್ರ ಹುಟ್ಟಿದನು. ಆ ಅಂಡದಿಂದಲೇ ದೇವಗುರುವಾದ ಬ್ರಹ್ಮನೂ, ಸ್ಥಾಣುವೂ, ಮನುವೂ, (ಕ ಶಬ್ದವಾಚ್ಯನಾದ) ಪರಮೇಷ್ಠಿಯೂ, ಪ್ರಚೇತಸ್ಸಿನ ಮಗನಾದ ದಕ್ಷನೂ, ಏಳು ಮಂದಿ ದಕ್ಷಪುತ್ರರೂ, ಆಮೇಲೆ ಇಪ್ಪತ್ತೊಂದು ಮಂದಿ ಪ್ರಜಾಧಿಪತಿಗಳೂ ಕ್ರಮವಾಗಿ ಹುಟ್ಟಿದರು. ಮತ್ತು ಆ ಅಂಡದಿಂದಲೇ ಅಪ್ರ

ಮೋಘಪ್ರಭಾವವುಳ್ಳ ಮತ್ತು ಸಮಸ್ತ ಋಷಿಗಳಿಂದ ವೇದ್ಯನಾದ ವಿರಾಟ್ಪುರುಷನೂ, ವಿಶ್ವೇದೇವತೆಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ ಅಶ್ವಿನೀದೇವತೆಗಳೂ, ಯಕ್ಷರೂ, ಸಾಧ್ಯರೂ, ಪಿಶಾಚರೂ, ಗುಹ್ಯಕರೂ, ಪಿತೃದೇವತೆಗಳೂ ಹುಟ್ಟಿದರು. ಹಾಗೆಯೇ ವಿದ್ವಾಂಸರೂ ಶಿಷ್ಟರೂ ಆದ ಬ್ರಹ್ಮರ್ಷಿಗಳೂ, ಸಕಲಗುಣಸಂಪೂರ್ಣರಾದ ಅನೇಕಮಹರ್ಷಿಗಳೂ ಉದ್ಭವಿಸಿದರು. ಮತ್ತು ಜಲವೂ, ಭೂಮ್ಯಾಕಾಶಗಳೂ, ಅಂತರಿಕ್ಷವೂ, ದ್ಯುಲೋಕವೂ, ವಾಯುವೂ, ದಿಕ್ಕುಗಳೂ ಹುಟ್ಟಿದುವು. ಹಾಗೆಯೇ ಕ್ರಮವಾಗಿ ಸಂವತ್ಸರಗಳೂ, ಋತುಗಳೂ, ಮಾಸಗಳೂ, ಪಕ್ಷಗಳೂ, ಹಗಲುರಾತ್ರಿಗಳೂ ಉಂಟಾದುವು. ಮತ್ತು ಈ ಲೋಕದಲ್ಲಿ ಸ್ಥಾವರ ಜಂಗಮಾತ್ಮಕವಾಗಿ ಕಾಣಿಸುತ್ತಿರುವ ಯಾವಯಾವ ವಸ್ತುಗಳುಂಟೋ, ಅವೆಲ್ಲವೂ ಉಂಟಾದುವು. ಪರಂಪರೆಯಾಗಿ ಉದ್ಭವಿಸಿದ ಈ ವಸ್ತುಗಳೆಲ್ಲವೂ ಯುಗಾಂತದಲ್ಲಿ ತಿರುಗಿ ಲಯಹೊಂದತಕ್ಕವುಗಳು. ಆಯಾ ಋತುಗಳಲ್ಲಿ ಕಾಣಿಸುವ ನಾನಾಬಗೆಯ ಚಿಹ್ನಗಳೆಲ್ಲವೂ ಆ ಋತುಕಾಲವು ಕಳೆದಮೇಲೆ ಅಗೋಚರವಾಗಿ, ತಿರುಗಿ ಮತ್ತೊಮ್ಮೆ ಅದೇ ಋತುವು ಆರಂಭಿಸಿದಾಗ, ಆ ಮೊದಲಿನ ಚಿಹ್ನಗಳೇ ಕಾಣಿಸುವಂತೆ, ಆಯಾ ಯುಗಪ್ರಳಯಕ್ಕೆ ಮೊದಲಿದ್ದ ಆಯಾ ಪದಾರ್ಥಗಳೇ ತಿರುಗಿ ಮತ್ತೊಮ್ಮೆ ಯುಗಾರಂಭವಾದಾಗ ತಪ್ಪದೆ ಗೋಚರಿಸುವುವು. ಹೀಗೆ ಭೂತಸೃಷ್ಟಿಗೆ ಕಾರಣವೆನಿಸಿಕೊಂಡ ಕಾಲಚಕ್ರವು ಕೊನೆಮೊದಲಿಲ್ಲದೆ ಸುತ್ತುತ್ತಲೇ ಇರುವುದು. ಪ್ರತಿಕಲ್ಪದಲ್ಲಿಯೂ ನಡೆಯುವ ಈ ವಿಧವಾದ ಸೃಷ್ಟಿಯಲ್ಲಿ, ದೇವವರ್ಗದ ಸೃಷ್ಟಿಯನ್ನು ಮೂವತ್ತುಮೂರುಸಾವಿರದ ಮೂವತ್ತುಮೂರು ನೂರ ಮೂವತ್ತುಮೂರೆಂದು ಸಂಕ್ಷೇಪಿಸಿ ಲೆಕ್ಕಿಸುವರು. ಈ ದೇವಸೃಷ್ಟಿಯಲ್ಲಿ ಸೂರ್ಯನಿಗೆ ದಿವಃಪುತ್ರ, ಬೃಹದ್ಭಾನು, ಚಕ್ಷುಸ್ಸು, ಆತ್ಮ, ವಿಭಾವಸು, ಸವಿತೃ, ಋಚೀಕ, ಅರ್ಕ, ಭಾನು, ಆಶಾವಹ, ರವಿಯೆಂಬ ಅನೇಕಪುತ್ರರು ಜನಿಸಿದರು. ಈ ಮಕ್ಕಳಲ್ಲಿ ಮನುವೆಂಬವನು ಕೊನೆಯವನು. ಆ ಮನುವಿಗೆ ದೇವಭ್ರಾಟ್ ಎಂಬ ಮಗನಾದನು. ಅವನಿಂದ ಸುಭ್ರಾಟ್ ಎಂಬವನು ಜನಿಸಿದನು. ಈ ಸುಭ್ರಾಟ್ಟಿಗೆ, ದಶಜ್ಯೋತಿಯೆಂದೂ, ಶತಜ್ಯೋತಿಯೆಂದೂ, ಸಹಸ್ರಜ್ಯೋತಿಯೆಂದೂ ಮೂರುಮಂದಿ ಪುತ್ರರಾದರು.

ಈ ಮೂವರೂ ಬಹಳ ವಿದ್ಯಾವಂತರಾಗಿ ತಮ್ಮಲ್ಲಿ ಅನೇಕಸಂತತಿಗಳನ್ನು ಪಡೆದರು. ಇವರಲ್ಲಿ ಮಹಾತ್ಮನಾದ ದಶಜ್ಯೋತಿಯಿಂದ ಹತ್ತುಸಾವಿರ, ಶತಜ್ಯೋತಿಯಿಂದ ನೂರುಸಾವಿರ, ಸಹಸ್ರಜ್ಯೋತಿಯಿಂದ ಹತ್ತುಲಕ್ಷ ಸಂತಾನಗಳು ಜನಿಸಿದುವು. ಈ ಪುತ್ರಪರಂಪರೆಯಿಂದಲೇ ಈಗಿನ ಕುರುವಂಶವೂ, ಯದುವಂಶವೂ, ಭರತವಂಶವೂ, ಇಕ್ಷ್ವಾಕು ಯಯಾತಿವಂಶಗಳೂ, ಇನ್ನೂ ಬೇರೆ ಅನೇಕರಾಜರ್ಷಿಗಳ ವಂಶಗಳೂ ಹರಡಿದುವು. ಹೀಗೆಯೇ ಅನೇಕ ಪ್ರಾಣಿವರ್ಗಗಳ ಸೃಷ್ಟಿಯು ಪ್ರಪಂಚದಲ್ಲಿ ವಿಸ್ತಾರವಾಗಿ ಹರಡಿತು. ವ್ಯಾಸಮಹರ್ಷಿಯು ತನ್ನ ಧ್ಯಾನದೃಷ್ಟಿಯಿಂದ ಈ ಸೃಷ್ಟಿಕ್ರಮವೆಲ್ಲವನ್ನೂ ಕಂಡುಕೊಂಡನು. ಮತ್ತು ಪ್ರಪಂಚದಲ್ಲಿ ಮನುಷ್ಯರೇ ಮೊದಲಾದ ಪ್ರಾಣಿಗಳಿಗೆ ವಾಸಸ್ಥಾನಗಳಾದ ಗ್ರಾಮನಗರಾದಿಗಳೂ, ಆ ಪ್ರಾಣಿಗಳ ಜನನ ಮರಣ ಫಲಾಫಲಗಳೆಂಬ ಮೂರು ಬಗೆಯ ರಹಸ್ಯಗಳೂ, ಚತುರ್ವೇದಗಳೂ, ಯೋಗಗಳೂ, ಶಾಸ್ತ್ರಜ್ಞಾನವೂ, ಧರ್ಮಾರ್ಥಕಾಮಗಳೂ, ಆ ಧರ್ಮಾರ್ಥಕಾಮಗಳನ್ನು ಬೋಧಿಸತಕ್ಕ ವಿವಿಧಶಾಸ್ತ್ರಗಳೂ, ಲೋಕಯಾತ್ರಾವಿಧಿಯೂ, ಇವೆಲ್ಲವೂ ಆ ಮಹರ್ಷಿಗೆ ಧ್ಯಾನದಿಂದಲೇ ಕಂಡುಬಂದುವು. ಹೀಗೆ ವ್ಯಾಸಮಹರ್ಷಿಯು ಈ ಸಮಸ್ತವಿಷಯಗಳನ್ನೂ ಕಂಡುಕೊಂಡಮೇಲೆ, ಈ ಭಾರತಗ್ರಂಥವನ್ನು ರಚಿಸಲಾರಂಭಿಸಿದನು. ಇದರ ಮೊದಲನೆಯ ಅಧ್ಯಾಯದಲ್ಲಿ ಭರತವಂಶದ ರಾಜನೀತಿ, ಆ ವಂಶದ ವಿಸ್ತಾರ, ಪೂರ್ವಚರಿತ್ರಗಳು, ಅದರ ವಿವರಣೆಗಳು, ನಾನಾವಿಧಗಳಾದ ಶ್ರುತಿವಿಷಯಗಳು, ಇವೇ ಮೊದಲಾಗಿ ಇತಿಹಾಸಗ್ರಂಥಲಕ್ಷಣಗಳೆಲ್ಲವೂ ಸಂಕ್ಷೇಪವಾಗಿ ತಿಳಿಸಲ್ಪಟ್ಟಿರುವುವು. ಇವುಗಳೇ ಮುಂದೆ ವಿಸ್ತಾರವಾಗಿಯೂ ಹೇಳಲ್ಪಡುವುವು. ಯಾವ ವಿಷಯವನ್ನಾದರೂ ಮೊದಲು ಸಂಗ್ರಹವಾಗಿಯೂ, ಆಮೇಲೆ ಸವಿಸ್ತರವಾಗಿಯೂ ಮನಸ್ಸಿಗೆ ತಂದುಕೊಂಡು ಧಾರಣಮಾಡುವುದು ವಿದ್ವಾಂಸರಿಗೆ ಮತವಾದುದರಿಂದ, ವ್ಯಾಸಮಹರ್ಷಿಯೂಕೂಡ ಮಹಾಜ್ಞಾನಸಾಧನವಾದ ಈ ಗ್ರಂಥವನ್ನು ಮೊದಲು ಸಂಗ್ರಹವಾಗಿ ಹೇಳಿ, ಆಮೇಲೆ ವಿಸ್ತರಿಸಿ ಹೇಳಿರುವನು. ಈ ಭಾರತಗ್ರಂಥಕ್ಕೆ "ನಾರಾಯಣಂ ನಮಸ್ಕೃತ್ಯ" ಎಂಬೀ ಮಂತ್ರಶ್ಲೋಕವೇ ಆದಿಯೆಂದು ಕೆಲವರ ಅಭಿ

ಪ್ರಾಯವು. ಬೇರೆ ಕೆಲವರು ಆಸ್ತೀಕನ ಚರಿತ್ರದಿಂದ ಮೊದಲುಮಾಡುವರು. ಬೇರೆ ಕೆಲವರು ಉಪರಿಚರನೆಂಬ ವಸುವಿನ ಚರಿತ್ರದಿಂದ ಆರಂಭಿಸುವರು. ಹೀಗೆ ಈ ಭಾರತಪಠನದಲ್ಲಿ ಅನೇಕಮತಭೇದಗಳುಂಟು. ಈ ಗ್ರಂಥವು ಅನೇಕ ವಿಶೇಷಾರ್ಥಗಳನ್ನೊಳಕೊಂಡಿರುವುದು. ಬುದ್ಧಿಶಾಲಿಗಳಾದ ಕೆಲವು ವ್ಯಾಖ್ಯಾನಕರ್ತರು, ಅದರ ಅರ್ಥವಿಶೇಷಗಳೆಲ್ಲವನ್ನೂ ತಿಳಿದು ಅವನ್ನೆಲ್ಲ ತಮ್ಮ ವಿವರಣಚಾತುರ್ಯದಿಂದ ಲೋಕಕ್ಕೆ ಪ್ರಕಾಶಗೊಳಿಸುವರು. ಕೆಲವರು ಆ ವಿಷಯಗಳನ್ನು ತಮ್ಮ ಮನಸ್ಸಿನಲ್ಲಿ ಮಾತ್ರ ಧಾರಣಮಾಡುವುದಕ್ಕೆ ಸಮರ್ಥರಾಗಿರುವರು. ಸತ್ಯವತೀಪುತ್ರನಾದ ವ್ಯಾಸಮುನಿಯು ತನ್ನ ತಪಶ್ಶಕ್ತಿಯಿಂದಲೂ, ಬ್ರಹ್ಮಚರ್ಯದಿಂದಲೂ ಅಖಂಡವಾದ ವೇದವನ್ನು ನಾಲ್ಕಾಗಿ ವಿಭಾಗಿಸಿದಮೇಲೆ ಪವಿತ್ರವಾದ ಈ ಇತಿಹಾಸವನ್ನು ರಚಿಸಿದನು. ಅವನು ಮಹಾತ್ಮನಾದ ಪರಾಶರಮಹರ್ಷಿಯ ಪುತ್ರನು. ಅನೇಕವಿಷಯಗಳನ್ನು ಬಲ್ಲವನು. ತೀಕ್ಷ್ಣವಾದ ವ್ರತವನ್ನು ಹಿಡಿದವನು. ಬ್ರಹ್ಮರ್ಷಿಗಳಲ್ಲ ಮೇಲೆನಿಸಿದವನು. ಇಂತಹ ಧರ್ಮಾತ್ಮನಾದ ಮಹರ್ಷಿಯು, ತನ್ನ ತಾಯಿಯ ಮತ್ತು ಭೀಷ್ಮಾಚಾರ್ಯನ ಪ್ರೇರಣೆಯಿಂದ, ವಿಚಿತ್ರವೀರ್ಯನ ಪತ್ನಿಯಲ್ಲಿ ಮೊದಲು ತ್ರೇತಾಗ್ನಿಗಳಂತೆ ಪವಿತ್ರರಾದ ಧೃತರಾಷ್ಟ್ರ, ಪಾಂಡು, ವಿದುರರೆಂಬ ಮೂರುಮಂದಿ ಮಕ್ಕಳನ್ನು ಹುಟ್ಟಿಸಿ, ತಪಸ್ಸನ್ನು ಮಾಡುವುದಕ್ಕಾಗಿ ತಿರುಗಿ ತನ್ನ ಆಶ್ರಮಕ್ಕೆ ಹೋದನು. ಆ ಮೂರುಮಂದಿ ಮಕ್ಕಳೂ ಹುಟ್ಟಿ ಬೆಳೆದು, ಮುದುಕರಾಗಿ, ಮರಣವನ್ನೂ ಹೊಂದಿದಮೇಲೆ, ಅವರ ವಂಶದ ಚರಿತ್ರೆಯನ್ನು ಭೂಲೋಕದಲ್ಲಿ ವಿಸ್ತರಿಸುವುದಕ್ಕಾಗಿ ಈ ಭಾರತವೆಂಬ ಗ್ರಂಥವನ್ನು ರಚಿಸಿದನು ಈ ಗ್ರಂಥರಚನೆಗೆ ಮೊದಲೇ ಜನಮೇಜಯನು ಯಾಗಮಾಡುತಿದ್ದಾಗ, ಅಲ್ಲಿ ಸೇರಿದ್ದ ಅನೇಕಬ್ರಾಹ್ಮಣರು ತಮಗೆ ಭಾರತಕಥೆಯನ್ನು ತಿಳಿಸಬೇಕೆಂದು ವ್ಯಾಸಮಹರ್ಷಿಯನ್ನು ಪ್ರಾರ್ಥಿಸಿಕೊಂಡರು. ಆಗ ಆ ಋಷಿಯು ತನ್ನ ಸಮೀಪದಲ್ಲಿ ಕುಳಿತಿದ್ದ ತನ್ನ ಶಿಷ್ಯನಾದ ವೈಶಂಪಾಯನನನ್ನು ಕುರಿತು, ಅವರೆಲ್ಲರಿಗೂ ಭಾರತವನ್ನು ಹೇಳುವಂತೆ ಆಜ್ಞಾಪಿಸಿದನು. ಇದರಮೇಲೆ ವೈಶಂಪಾಯನನು ಆ ಯಜ್ಞದಿನಗಳಲ್ಲಿ ನಡುನಡುವೆ ಅವಕಾಶವಿದ್ದಹೊತ್ತಿನಲ್ಲೆಲ್ಲ, ಆ

ಬ್ರಾಹ್ಮಣಸಭೆಯಲ್ಲಿ ಕುಳಿತು, ಆಗಾಗ ಆ ಸದಸ್ಯರು ಕೇಳಿದ ಪ್ರಶ್ನೆಗಳೆಲ್ಲಾ ಸಮಾಧಾನವನ್ನು ಹೇಳುತ್ತ, ಸಂಪೂರ್ಣವಾಗಿ ಈ ಭಾರತಕಥೆಯನ್ನು ವಿವರಿಸಿದನು.

ಈ ಭಾರತಗ್ರಂಥದಲ್ಲಿ ವ್ಯಾಸಮಹರ್ಷಿಯು ಕುರುವಂಶದ ವಿಸ್ತಾರವನ್ನೂ, ಗಾಂಧಾರೀದೇವಿಯ ಧರ್ಮಶೀಲತೆಯನ್ನೂ, ವಿದುರನ ಪ್ರಜ್ಞೆಯನ್ನೂ, ಕುಂತಿಯ ಧೈರ್ಯವನ್ನೂ, ಶ್ರೀಕೃಷ್ಣನ ಮಹಾಮಹಿಮೆಯನ್ನೂ, ಪಾಂಡವರ ಸತ್ಯಸಂಧತೆಯನ್ನೂ, ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳ ದುಷ್ಟಸ್ವಭಾವವನ್ನೂ ಸ್ಪಷ್ಟವಾಗಿ ತೋರಿಸಿರುವನು. ಅನೇಕಪುಣ್ಯಕಥೆಗಳಿಂದ ಕೂಡಿದ ಈ ಉಪಾಖ್ಯಾನವು ನೂರುಸಾವಿರ ಗ್ರಂಥಗಳನ್ನೊಳಕೊಂಡಿರುವುದು. ಶ್ರವಣಮನನಗಳಿಗೆ ಯೋಗ್ಯವೆನಿಸಿದ ಚರಿತ್ರೆಗಳಲ್ಲಿ ಈ ಭಾರತವೇ ಅತ್ಯುತ್ತಮವೆನಿಸಿರುವುದು. ನಡುನಡುವೆ ಕಾಣಿಸಿರುವ ಉಪಾಖ್ಯಾನಗಳನ್ನು ಬಿಟ್ಟರೆ, ಭಾರತಸಂಹಿತೆಯು ಇಪ್ಪತ್ತುನಾಲ್ಕುಸಾವಿರ ಗ್ರಂಥಗಳಲ್ಲಿಯೇ ಅಡಗುವುದು. ಬೇರೆಬೇರೆ ಎಷ್ಟೋ ಉಪಾಖ್ಯಾನಗಳು ಇದರಲ್ಲಿ ಸೇರಿದ್ದರೂ, ಆ ಇಪ್ಪತ್ತುನಾಲ್ಕುಸಾವಿರ ಗ್ರಂಥಗಳು ಮಾತ್ರವೇ ಭಾರತವೆನಿಸುವುದೆಂದು ಪಂಡಿತರ ಅಭಿಪ್ರಾಯವು. ಗ್ರಂಥಾದಿಯಲ್ಲಿ ವ್ಯಾಸಮಹರ್ಷಿಯು ಎಲ್ಲಾ ಪರ್ವಗಳ ವಿಷಯವನ್ನೂ ಸಂಗ್ರಹಿಸಿ, ನೂರೈವತ್ತು ಶ್ಲೋಕಗಳಿಂದ ಅನುಕ್ರಮಣಿಕಾಧ್ಯಾಯವೆಂಬ ಮೊದಲನೆಯ ಅಧ್ಯಾಯವನ್ನು ರಚಿಸಿದನು. ಹೀಗೆ ಭಾರತಗ್ರಂಥವೆಲ್ಲವನ್ನೂ ರಚಿಸಿ ಮುಗಿಸಿದಮೇಲೆ, ವ್ಯಾಸಮಹರ್ಷಿಯು ಆ ಗ್ರಂಥವನ್ನು ಶಿಷ್ಯರಿಗೆ ಯಾವ ವಿಧದಿಂದ ಉಪದೇಶಿಸುವುದೆಂದು ಚಿಂತಾಕುಲನಾಗಿದ್ದನು. ಆಗ ಲೋಕಗುರುವಾದ ಬ್ರಹ್ಮದೇವನು, ಆ ಋಷಿಗೆ ಸಂತೋಷವನ್ನೂ, ಲೋಕಕ್ಕೆ ಹಿತವನ್ನೂ ಉಂಟುಮಾಡಬೇಕೆಂಬ ಉದ್ದೇಶದಿಂದ ತಾನಾಗಿಬಂದು, ಅವನಮುಂದೆ ಗೋಚರಿಸಿದನು. ಹೀಗೆ ಬ್ರಹ್ಮದೇವನು ತನ್ನ ಕಣ್ಣಮುಂದೆ ಗೋಚರಿಸಲು, ವ್ಯಾಸಮುನಿಯು ತನ್ನ ಶಿಷ್ಯವರ್ಗದೊಡನೆ ಥಟ್ಟನೆ ಇದಿರೆದ್ದು, ಆಶ್ಚರ್ಯವಶನಾಗಿ ಕೈಮುಗಿದು,

ಅತಿ ನಮ್ರನಾಗಿ ಸ್ವಲ್ಪಹೊತ್ತು ಏನೂ ತೋರದಂತೆ ನಿಂತಿದ್ದನು. ಆಮೇಲೆ ಆ ಬ್ರಹ್ಮದೇವನಿಗೆ ಆಸನವನ್ನು ಸಮರ್ಪಿಸಿದನು. ಬ್ರಹ್ಮನು ಪೀಠವನ್ನು ಅಲಂಕರಿದಮೇಲೆ, ವ್ಯಾಸಮಹರ್ಷಿಯು ಅವನಿಗೆ ಪ್ರದಕ್ಷಿಣೆಯನ್ನು ಮಾಡಿ ಕೈಮುಗಿದು, ಪಕ್ಕದಲ್ಲಿ ಸುಮ್ಮನೆ ನಿಂತಿದ್ದನು. ಆಗ ಬ್ರಹ್ಮದೇವನು ಪ್ರೀತಿಯಿಂದ ಆ ಋಷಿಯನ್ನು ಕರೆದು, ತನ್ನ ಪಕ್ಕದಲ್ಲಿದ್ದ ಆಸನದಮೇಲೆ ಕುಳಿತುಕೊಳ್ಳುವಂತೆ ಅನುಜ್ಞೆಯನ್ನು ಕೊಡಲು, ವ್ಯಾಸಮಹರ್ಷಿಯು ಆ ಪೀಠದಮೇಲೆ ಕುಳಿತು, ಲೋಕಪಿತಾಮಹನಾದ ಬ್ರಹ್ಮನನ್ನು ಕುರಿತು ಹೀಗೆಂದು ವಿಜ್ಞಾಪಿಸುವನು. "ಓ ಮಹಾತ್ಮಾ! ನಾನು ಅತ್ಯಂತ ಪುಣ್ಯಕರವಾದ ಒಂದು ಇತಿಹಾಸವನ್ನು ರಚಿಸಿರುವೆನು. ಇದರಲ್ಲಿ ಅನೇಕವೇದರಹಸ್ಯಗಳೂ, ಅದರಮೇಲೆ ನಾನು ನಿರ್ಧರಿಸಿರುವ ಸಿದ್ಧಾಂತಗಳೂ, ಷಡಂಗಗಳಿಂದಲೂ, ಉಪನಿಷತ್ತುಗಳಿಂದಲೂ ಕೂಡಿದ ವೇದಗಳ ವಿವರಣೆಗಳೂ, ಕಾಲತ್ರಯ ವಿಚಾರಗಳೂ, ಜರೆ, ಮರಣ, ಭಯ, ವ್ಯಾಧಿ, ಇವುಗಳ ಉತ್ಪತ್ತಿವಿನಾಶಗಳ ಸ್ವರೂಪನಿರ್ಣಯವೂ, ಬೇರೆಬೇರೆ ವರ್ಣಾಶ್ರಮಧರ್ಮಲಕ್ಷಣಗಳೂ, ತಪಸ್ಸಿನ ಮತ್ತು ಬ್ರಹ್ಮಚರ್ಯೆಯ ವಿಧಾನಗಳೂ, ಭೂಮಿಯ ಮತ್ತು ಚಂದ್ರಸೂರ್ಯರ ಗತಿಗಳೂ, ಗ್ರಹನಕ್ಷತ್ರತಾರೆಗಳ ವಿವಿಧಗತಿಗಳೂ, ಯುಗಪ್ರಮಾಣಗಳೂ, ಋಗ್ಯಜುಸ್ಸಾಮಗಳೆಂಬ ವೇದತ್ರಯದಲ್ಲಿ ಪ್ರತಿಪಾದಿತವಾದ ಅಧ್ಯಾತ್ಮಜ್ಞಾನವೂ, ನ್ಯಾಯವೈದ್ಯಶಾಸ್ತ್ರಗಳೂ, ಜ್ಞಾನಸ್ವರೂಪವೂ, ಪಾಶುಪತಮತವೂ ದೇವಮನುಷ್ಯಜಾತಿಗಳೂ, ಅವುಗಳಿಂದ ಪಡೆಯತಕ್ಕ ಆಯಾ ಪ್ರಯೋಜನಗಳೂ, ಪುಣ್ಯಕರಗಳಾದ ತೀರ್ಥಕ್ಷೇತ್ರಗಳೂ, ನದೀನದಸಮುದ್ರಪರ್ವತಾರಣ್ಯಗಳೂ, ನಗರಗಳೂ, ಕಲ್ಪಭೇದಗಳೂ, ಯುದ್ಧಕೌಶಲಗಳೂ, ವಾಕ್ಯಜಾತಿವಿಶೇಷಗಳೂ, ಲೋಕಯಾತ್ರಾಕ್ರಮವೂ, ಸರ್ವವ್ಯಾಪಿಯೆಂದು ಪ್ರಸಿದ್ಧವಾದ ಯಾವ ವಸ್ತುವುಂಟೋ ಅದೂ (ಬ್ರಹ್ಮವೆಂಬ) ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಆದರೆ ನನ್ನಿಂದ ರಚಿತವಾದ ಈ ಗ್ರಂಥವನ್ನು ಬರೆದಿಡುವುದಕ್ಕೆ ಈ ಭೂಮಿಯಲ್ಲಿ ಶಕ್ತನಾವನೆಂದು ನನಗೆ ತೋರಲಿಲ್ಲ. ಅದಕ್ಕಾಗಿ ಚಿಂತಿಸುವೆನು" ಎಂದನು.

ಅದಕ್ಕಾ ಬ್ರಹ್ಮನು “ ಓ ಮಹರ್ಷೀ ! ರಹಸ್ಯವಾದ ಅಧ್ಯಾತ್ಮಜ್ಞಾನವನ್ನು ನೀನು ವಿಮರ್ಶಿಸಿ ತಿಳಿದು, ಇತರರಿಗೂ ತಿಳಿಯಪಡಿಸತಕ್ಕವನಾದುದರಿಂದ, ಕೇವಲತಪಸ್ಸಿನಿಂದಮಾತ್ರ ಪ್ರಸಿದ್ಧನಾದ ವಸಿಷ್ಠಮಹರ್ಷಿಗಿಂತಲೂ ನಿನ್ನನ್ನೇ ಮೇಲೆಂದು ಭಾವಿಸುವೆನು. ನೀನು ಹುಟ್ಟಿದುದು ಮೊದಲು ನಿನ್ನ ಬಾಯಿಂದ ಹೊರಟ ಒಂದೊಂದು ಮಾತೂ ಆ ಪರಬ್ರಹ್ಮಸ್ವರೂಪವನ್ನು ಪ್ರತಿಪಾದಿಸುತ್ತಿರುವುದೆಂಬುದನ್ನೂ ಬಲ್ಲೆನು. ಈಗ ನೀನು ರಚಿಸಿರುವ ಗ್ರಂಥವು ಕೇವಲ ವೇದಸಮಾನವಾಗಿದ್ದರೂ, ನೀನೇ ಇದನ್ನು ಕಾವ್ಯವೆಂದು ಹೇಳಿದುದರಿಂದ ಇದು ಲೋಕದಲ್ಲಿ ಕಾವ್ಯವೆಂದೇ ಪ್ರಸಿದ್ಧವಾಗಲಿ! ಶಾಸ್ತ್ರಸಮ್ಮತವಾದ ಗೃಹಸ್ಥಧರ್ಮವನ್ನು ಬೇರೆ ಮೂರುಬಗೆಯ ಆಶ್ರಮಧರ್ಮಗಳು ಹೇಗೆ ಅತಿಶಯಿಸಲಾರವೋ, ಹಾಗೆಯೇ ಕಾವ್ಯರಚನೆಯಲ್ಲಿ ಬೇರೆ ಯಾವ ಕವಿತ್ವಗಳೂ ನಿನ್ನ ಈ ಕಾವ್ಯವನ್ನು ಅತಿಶಯಿಸಲಾರವು. ಓ ಮಹರ್ಷೀ ! ನೀನು ಜ್ಞಾನಬೋಧೆಯೆಂಬ ಅಗ್ನಿಪ್ರಕಾಶದಿಂದ ಜಗತ್ತನ್ನು ಬೆಳಗದಿದ್ದರೆ, ಜಗತ್ತೆಲ್ಲವೂ ಅಜ್ಞಾನವೆಂಬ ಅಂಧಕಾರದಿಂದ ತುಂಬಿ ಮನುಷ್ಯರೆಲ್ಲರೂ ಮಂಕರಂತೆಯೂ, ಕುರುಡರಂತೆಯೂ, ಕಿವುಡರಂತೆಯೂ, ಜಡರಂತೆಯೂ ಆಗುತಿದ್ದರು. ಅನಾದಿಕರ್ಮಗಳಿಂದ ಕಟ್ಟಲ್ಪಟ್ಟು, ಅಜ್ಞಾನವೆಂಬ ತಪಸ್ಸಿನಲ್ಲಿ ಕಣ್ಣುಕಾಣದೆ ಕಳವಳಿಸುತಿದ್ದ ಲೋಕಕ್ಕೆಲ್ಲ, ನೀನು ಜ್ಞಾನವೆಂಬ ಅಂಜನಶಲಾಕೆಯಿಂದ ಬುದ್ಧಿಯೆಂಬ ಕಣ್ಣು ತೆರೆಯುವಂತೆ ಮಾಡಿದೆ. ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕುಬಗೆಯ ಪುರುಷಾರ್ಥಗಳನ್ನೂ, ಸಂಗ್ರಹವಾಗಿಯೂ, ವಿಸ್ತಾರವಾಗಿಯೂ ವಿವರಿಸಿ ನೀನು ಈ ಭಾರತವೆಂಬ ಸೂರ್ಯನಿಂದ ಮನುಷ್ಯರ ಅಜ್ಞಾನಾಂಧಕಾರವನ್ನು ನೀಗಿಸಿದೆ. ಈ ನಿನ್ನ ಪುರಾಣವೆಂಬ ಪೂರ್ಣಚಂದ್ರನು, ವೇದಾರ್ಥಗಳೆಂಬ ಚಂದ್ರಿಕೆಯಿಂದ ಮನುಷ್ಯರ ಬುದ್ಧಿಯೆಂಬ ನೈದಿಲೆಗಳನ್ನು ವಿಕಾಸಗೊಳಿಸುತ್ತಿರುವುದು. ಈ ನಿನ್ನ ಇತಿಹಾಸವೆಂಬ ದೀಪವು ಈ ಪ್ರಪಂಚವೆಂಬ ಮನೆಯಲ್ಲಿರುವ ಮೋಹವೆಂಬ ಕತ್ತಲೆಯನ್ನೆಲ್ಲ ನೀಗಿಸುತ್ತಿರುವುದು. ಓ ಮಹರ್ಷೀ! ನಿನ್ನಿಂದ ರಚಿತವಾದ ಈ ಭಾರತವೆಂಬುದು ಒಂದು ಮಹಾವೃಕ್ಷವು. ಅದಕ್ಕೆ ಕಥಾಸಂಗ್ರಹರೂಪವಾದ ಈ ಅನುಕ್ರಮಣಿಕಾಪರ್ವವೇ ಬೀಜವು. ಪೌಲೋಮಪರ್ವ, ಆಸ್ತೀ

ಕಪರ್ವಗಳೆರಡೂ ಬೇರುಗಳು. ಸಂಭವಪರ್ವವೇ ಅದರ ಸ್ತಂಭವು. (ಅಡಿದಿಂಡು ಅಥವಾ ತಾಳು). ಸಭಾಪರ್ವವೇ ಪಕ್ಷಿಗಳಿಗೆ ನಿವಾಸಸ್ಥಾನವಾದ ಅದರ ಪೊಟ್ಟರೆ! ಅರಣ್ಯಪರ್ವವೇ ಕವಲು! ವಿರಾಟೋದ್ಯೋಗ ಪರ್ವಗಳೆರಡೂ ಆ ವೃಕ್ಷದ ನಾರು! ಭೀಷ್ಮಪರ್ವವೆಂಬುದು ಅದರ ದೊಡ್ಡ ಕೊಂಬೆ! ದ್ರೋಣಪರ್ವವು ಅದರ ಎಲೆ! ಕರ್ಣಪರ್ವವೇ ಅದರ ಬಿಳೀ ಹೂಗಳು. ಶಲ್ಯಪರ್ವವೆಂಬುದು ಅದರ ಸುವಾಸನೆ. ಸ್ತ್ರೀಪರ್ವ ಮತ್ತು ಐಷೀಕಪರ್ವಗಳೆರಡೂ ಅದರ ತುದಿ. ಶಾಂತಿಪರ್ವವೇ ಅದರ ಸರ್ವೋತ್ತಮವಾದ ಫಲಗಳು. ಅಶ್ವಮೇಧಪರ್ವವೇ ಅದರಿಂದ ಸೋರತಕ್ಕ ಅಮೃತರಸವು. ಆಶ್ರಮವಾಸಪರ್ವವೇ ಪಕ್ಷಿಗಳು ಸೇರತಕ್ಕ ಸ್ಥಳವು. ಮೌಸಲಾದಿಪರ್ವಗಳು ಕವಿಗಳಂತೆ ಹೊರಟಿರುವ ಕವಲುಗೊಂಬೆಗಳು. (ಅಥವಾ ಪಕ್ಷಿಗಳ ಧ್ವನಿ) ಶಿಷ್ಟರೆಲ್ಲರೂ ಈ ವೃಕ್ಷದಲ್ಲಿ ವಿಹರಿಸತಕ್ಕ ಪಕ್ಷಿಗಳು. ಸಮಸ್ತ ಭೂತಗಳಿಗೂ ಪರ್ಜನ್ಯನು (ಮೇಘವು) ಹೇಗೆ ಜೀವನಾಶ್ರಯವೋ, ಅದರಂತೆ ಈ ಭಾರತವೆಂಬ ವೃಕ್ಷವು ಕವಿಗಳೆಂಬ ಪಕ್ಷಿಗಳಿಗೆ ಮುಖ್ಯಾಶ್ರಯವಾಗಿರುವುದು ಓ ಮಹರ್ಷಿೀ! ನಿನ್ನಿಂದ ರಚಿತವಾದ ಈ ಕಾವ್ಯವನ್ನು ಬರೆಯುವುದಕ್ಕಾಗಿ ಗಣಪತಿಯನ್ನು ಪ್ರಾರ್ಥಿಸು" ಎಂದನು.

ಸೃಷ್ಟಿಕರ್ತನಾದ ಬ್ರಹ್ಮನು ಹೀಗೆ ಹೇಳಿ, ದೇವರ್ಷಿಗಣದೊಡನೆ ತನ್ನ ನಿಜಸ್ಥಾನಕ್ಕೆ ಹಿಂತಿರುಗಿಬಿಟ್ಟನು. ಒಡನೆಯೇ ಇತ್ತಲಾಗಿ ವ್ಯಾಸ ಮಹರ್ಷಿಯು ತನ್ನ ಮನಸ್ಸಿನಲ್ಲಿ ವಿಘ್ನೇಶ್ವರನನ್ನು ಸ್ಮರಿಸಿದನು. ಈ ಮಹರ್ಷಿಯು ಮನಸ್ಸಿನಲ್ಲಿ ನೆನೆಸಿದಮಾತ್ರಕ್ಕೆ ಭಕ್ತವತ್ಸಲನಾದ ವಿಘ್ನೇಶ್ವರನು ಪ್ರತ್ಯಕ್ಷನಾಗಿ ಗೋಚರಿಸಿದನು. ಆಗ ವ್ಯಾಸಮುನಿಯು ಆತನನ್ನು ಯಥೋಚಿತವಾಗಿ ಪೂಜಿಸಿ, ಸುಖಾಸನವನ್ನು ಕೊಟ್ಟು ಕುಳ್ಳಿರಿಸಿ, ಆತನನ್ನು ಕುರಿತು "ಓ ಗಣಾಧಿಪತೀ! ನಾನು ಭಾರತವೆಂಬ ಕಾವ್ಯವನ್ನು ಮನಸ್ಸಿನಲ್ಲಿಯೇ ರಚಿಸಿರುವೆನು. ಅದನ್ನು ನಾನು ಬಾಯಿಂದ ಹೇಳುತ್ತಹೋಗುವೆನು. ನಾನು ಹೇಳಿದಹಾಗೆ ನೀನು ಬರೆಯುತ್ತಬರ ಬೇಕು" ಎಂದನು. ಅದಕ್ಕಾ ವಿಘ್ನೇಶ್ವರನು "ಓ ಮಹರ್ಷಿೀ! ಹಾಗೆ



ಪುಟ ೧೫. ಬ್ರಹ್ಮದೇವನ ಸೂಚನೆಯಂತೆ ವಿಘ್ನೇಶ್ವರನಿಂದ ವ್ಯಾಸಮುನಿಯು ಭಾರತವನ್ನು ಬರೆಯಿಸಿದುದು.

ಯೇ ಆಗಲಿ! ಆದರೆ, ನಾನು ಬರೆಯುವುದಕ್ಕೆ ಆರಂಭಿಸಿದಮೇಲೆ ಒಂದು ನಿಮಿಷಮಾತ್ರವೂ ನನ್ನ ಲೇಖನಿಗೆ ವಿರಾಮವಿರಕೂಡದು. ಹಾಗಿದ್ದರೆ ಮಾತ್ರ ನಾನು ಬರೆಯುವೆನು" ಎಂದನು. ಅದಕ್ಕಾ ವ್ಯಾಸಮುನಿಯು "ವಿಘ್ನೇಶ್ವರಾ! ಹಾಗೆಯೇ ಆಗಲಿ! ಆದರೆ ನಾನು ಹೇಳಿದ ಶ್ಲೋಕಗಳಲ್ಲಿ ಯಾವುದಕ್ಕೂ ನೀನು ಅರ್ಥವನ್ನು ತಿಳಿದುಕೊಳ್ಳದೆ ಮುಂದೆ ಬರೆಯಕೂಡದು ಶ್ಲೋಕಾರ್ಥವನ್ನು ತಿಳಿದುಕೊಂಡೇ ಮುಂದುವರಿಯಬೇಕು" ಎಂದನು. ವಿಘ್ನೇಶ್ವರನು ಅದರಂತೆಯೇ ಒಪ್ಪಿಕೊಂಡು ಬರೆಯುವುದಕ್ಕೆ ತೊಡದನು. ವ್ಯಾಸಮಹರ್ಷಿಯೂ ಕೂಡ ಗ್ರಂಥವನ್ನು ಹೇಳುತ್ತ ಹೋಗುವಾಗ, ನಡುನಡುವೆ ವಿನೋದಕ್ಕಾಗಿ ಆ ವಿಘ್ನೇಶ್ವರನಿಗೂ ಸುಲಭವಾಗಿ ಅರ್ಥವಾಗದ ಕೆಲವು ಶ್ಲೋಕಗಳನ್ನು ಸೇರಿಸಿ ಹೇಳುತ್ತಹೋದನು. ಈ ಶ್ಲೋಕಗಳನ್ನೇ 'ವ್ಯಾಸರ ಗಂಟ್ಟೆ'ಂದು ಹೇಳುವರು. ಈ ವಿಧವಾಗಿ ವ್ಯಾಸಮಹರ್ಷಿಯು ಎಂಟುಸ್ಸಾವಿರದ ಎಂಟುನೂರು ಶ್ಲೋಕಗಳನ್ನು ರಚಿಸಿರುವನು. ಓ ಶೌನಕಾದಿಗಳೇ! ಆ ಶ್ಲೋಕಗಳ ಅರ್ಥವನ್ನು ನಾನೊಬ್ಬನು ಬಲ್ಲೆನು! ಶುಕಮುನಿಯು ಬಲ್ಲನು! ಸಂಜಯನು ಬಲ್ಲನೋ ಇಲ್ಲವೋ ಎಂಬುದುಕೂಡ ಸಂದೇಹವೇ! ಆ ಶ್ಲೋಕಗಳೆಲ್ಲವೂ ಬಹಳ ಗೂಢಾರ್ಥಗಳುಳ್ಳವುಗಳಾದುದರಿಂದ, ಈಗಲೂ ಅದರ ಅರ್ಥವನ್ನು ಸ್ಪಷ್ಟವಾಗಿ ತಿಳಿಯುವುದು ಸಾಧ್ಯವಲ್ಲ! ಸರ್ವಜ್ಞನಾಗಿದ್ದ ವಿಘ್ನೇಶ್ವರನೂಕೂಡ ಆ ಶ್ಲೋಕಗಳ ಅರ್ಥವನ್ನು ಬೇಗನೆ ತಿಳಿದುಕೊಳ್ಳಲಾರದೆ, ಕ್ಷಣಕಾಲದವರೆಗೆ ಅದರ ಅರ್ಥವನ್ನು ಮನಸ್ಸಿನಲ್ಲಿ ಯೋಚಿಸುತ್ತ ಬರವಣಿಗೆಯನ್ನು ನಿಲ್ಲಿಸುತಿದ್ದನು. ಇಷ್ಟರೊಳಗಾಗಿ ವ್ಯಾಸಮಹರ್ಷಿಯು ಮುಂದಿನ ಅನೇಕ ಶ್ಲೋಕಗಳನ್ನು ಹೇಳುತ್ತ ಬಹುದೂರಕ್ಕೆ ಸಾಗುತಿದ್ದನು. ಓ ಮಹರ್ಷಿಗಳೇ! ಆ ಭಾರತವೆಂಬ ವೃಕ್ಷದ ಶಾಖೆಗಳ ಮತ್ತು ಪುಷ್ಪಫಲಗಳ ವಿಸ್ತಾರವನ್ನು ನಿಮಗೆ ತಿಳಿಸುವೆನು. ಅದರ ರಸವು ಬಹುರುಚಿಯಾಗಿ ಅತಿಪವಿತ್ರವೆನಿಸಿರುವುದು. ಆ ವೃಕ್ಷವು ದೇವತೆಗಳಿಗೂ ದುರ್ಭೇದ್ಯವಾದುದು. ಈಗ ನಾನು ಹೇಳುವ ಮೊದಲನೆಯ ಅಧ್ಯಾಯಕ್ಕೆ ಅನುಕ್ರಮಣಿಕಾಧ್ಯಾಯವೆಂದು ಹೆಸರು. ಎಲ್ಲಾ ಪರ್ವಗಳ ವೃತ್ತಾಂತವೂ ಇದರಲ್ಲಿ ಸಂಗ್ರಹವಾಗಿ ಸೂಚಿಸಲ್ಪಡುವುದು. ಇದನ್ನು ವ್ಯಾಸಮುನಿಯು ಮೊದಲು ತನ್ನ

ಪುತ್ರನಾದ ಶುಕಮುನಿಗೆ ಉಪದೇಶಿಸಿದನು. ಆಮೇಲೆ ತನ್ನ ಬೇರೆ ಶಿಷ್ಯ ರಿಗೂ ಉಪದೇಶಿಸಿದನು. ಆಮೇಲೆ ಆ ಮಹಾಮುನಿಯು ಸಂಗ್ರಹವಾಗಿ ಹೇಳಿದ್ದ ಆ ಕಥೆಯನ್ನೇ ಅರುವತ್ತುಲಕ್ಷ ಗ್ರಂಥಗಳುಳ್ಳ ಬೇರೆ ಸಂಹಿತೆಯು ನ್ನಾಗಿ ರಚಿಸಿದನು. ಅವುಗಳಲ್ಲಿ ಮೂವತ್ತುಲಕ್ಷ ಗ್ರಂಥಗಳು ದೇವಲೋ ಕದಲ್ಲಿ ನೆಲೆಗೊಂಡುವು. ಹದಿನೈದುಲಕ್ಷ ಗ್ರಂಥಗಳು ಪಿತೃಲೋಕದಲ್ಲಿ ಯೂ, ಹದಿನಾಲ್ಕುಲಕ್ಷ ಗ್ರಂಥಗಳು ಯಕ್ಷರಾಕ್ಷಸಲೋಕಗಳಲ್ಲಿಯೂ ನಿಂತಿರುವುವು. ಉಳಿದ ಒಂದುಲಕ್ಷ ಗ್ರಂಥಗಳು ಮಾತ್ರವೇ ಈಗ ಮನು ಷ್ಯಲೋಕದಲ್ಲಿ ನೆಲೆಗೊಂಡಿವೆ. ಇದನ್ನು ದೇವತೆಗಳಿಗೆ ನಾರದನೂ, ಪಿತೃಗಳಿಗೆ ಅಸಿತನೆಂಬ ದೇವಲನೂ, ಯಕ್ಷರಾಕ್ಷಸಗಂಧರ್ವರಿಗೆ ಶುಕಮು ನಿಯೂ ಬೋಧಿಸಿದರು. ಈ ಮನುಷ್ಯಲೋಕದಲ್ಲಿ, ವ್ಯಾಸಶಿಷ್ಯನೂ, ಧರ್ಮಾತ್ಮನೂ, ಸರ್ವವೇದಜ್ಞನೂ ಆದ ವೈಶಂಪಾಯನನೆಂಬ ಬ್ರಹ್ಮ ರ್ಷಿಯು, ಪರೀಕ್ಷಿದ್ರಾಜನ ಮಗನಾದ ಜನಮೇಜಯನಿಗೆ ಇದನ್ನು ಮೊದ ಲು ವಿವರಿಸಿದನು. ಹೀಗೆ ವೈಶಂಪಾಯನನು ಜನಮೇಜಯನಿಗೆ ಹೇಳಿದ ಆ ಲಕ್ಷಶ್ಲೋಕಗಳನ್ನೇ ಈಗ ನಾನು ನಿಮಗೆ ಹೇಳುವೆನು.

ಓ ಮಹರ್ಷಿಗಳೇ! ಈ ಭಾರತಕಥೆಯನ್ನು ಎರಡು ವೃಕ್ಷಗಳಾಗಿ ನಿರೂಪಿಸಬಹುದು. ಅವುಗಳಲ್ಲಿ ದುರ್ಯೋಧನನೆಂಬವನು ಕೋಪಮಯ ವಾದ ಒಂದು ಮಹಾವೃಕ್ಷವು. ಕರ್ಣನೇ ಅದರ ಅಡಿದಿಂಡು (ಸ್ಕಂಧವು). ಶಕುನಿಯೆಂಬವನು ಅದರ ಶಾಖೆಗಳು. ದುಶ್ಯಾಸನನೆಂಬವನು ಅದರ ಫಲಪುಷ್ಪಗಳು. ಚಂಚಲಬುದ್ಧಿಯುಳ್ಳ ಧೃತರಾಷ್ಟ್ರನೇ ಅದರ ಬೇರು.

ಮತ್ತೊಂದು ಕಡೆಯಲ್ಲಿ ಯುಧಿಷ್ಠಿರನು (ಧರ್ಮರಾಜನು) ಧರ್ಮ ಮಯವಾದ ಒಂದು ಮಹಾವೃಕ್ಷವು. ಅರ್ಜುನನೇ ಅದರ ಸ್ಕಂಧವು. ಭೀಮಸೇನನು ಅದರ ಶಾಖೆಗಳು. ಮಾದ್ರೀಪುತ್ರರಾದ ನಕುಲಸಹದೇವ ರಿಬ್ಬರೂ ಫಲಪುಷ್ಪಗಳು. ಕೃಷ್ಣನೇ ಅದರ ತಾಯಿಬೇರು. ವೇದಗಳೂ, ಬ್ರಾಹ್ಮಣರೂ ಕವಲುಬೇರುಗಳು. ಇನ್ನು ಕಥಾಸಂಗ್ರಹವನ್ನು ತಿಳಿಸು ವೆನು ಕೇಳಿರಿ. ಪಾಂಡುರಾಜನು ರಾಜ್ಯಕ್ಕೆ ಬಂದಮೇಲೆ, ತನ್ನ ಪರಾ ಕ್ರಮದಿಂದ ಅನೇಕ ದೇಶಗಳನ್ನು ಜಯಿಸಿ, ಒಮ್ಮೆ ಬೇಟೆಗಾಗಿ ತನ್ನ

ಪರಿವಾರಗಳೊಡನೆ ಹೊರಟು ಕಾಡಿನಲ್ಲಿ ಸಂಚರಿಸುತಿದ್ದನು. ಆಗ ಒಂದಾನೊಂದು ಜಿಂಕೆಯು ಹೆಣ್ಣುಜಿಂಕೆಯೊಡನೆ ರಮಿಸುತಿದ್ದುದನ್ನು ಕಂಡು, ಅದನ್ನು ಕೊಂದುದರಿಂದ ಅವನಿಗೂ ರತಿಸಮಯದಲ್ಲಿ ಮರಣವು ಸಂಭವಿಸುವಂತೆ ಶಾಪವುಂಟಾಯಿತು. ಈ ಕ್ರೂರಶಾಪದಿಂದ ಅವನಿಗೆ ಸ್ತ್ರೀಸಂಗಮಕ್ಕೆ ಅವಕಾಶವಿಲ್ಲದಿದ್ದರೂ, ಪಾಂಡವರ ಜನನಾದಿಗಳು ಶಾಸ್ತ್ರವಿರೋಧವಿಲ್ಲದೆ ಕ್ರಮವಾಗಿ ನಡೆದುವು. ಹೇಗೆಂದರೆ, ಆಪತ್ಕಾಲದಲ್ಲಿ ಸಂತಾನಾರ್ಥವಾಗಿ ಸ್ತ್ರೀಯರು ಶಿಷ್ಟನಾದ ಇತರಪುರುಷನನ್ನು ಪ್ರಾರ್ಥಿಸಬಹುದೆಂಬ ಧರ್ಮರಹಸ್ಯವುಂಟು. ಆ ಧರ್ಮವನ್ನನುಸರಿಸಿ, ಪಾಂಡುಪತ್ನಿಯರಾದ ಕುಂತಿ, ಮತ್ತು ಮಾದ್ರಿಯೆಂಬವರಿಬ್ಬರೂ, ತಮ್ಮಲ್ಲಿ ಪುತ್ರಸಂತಾನಾರ್ಥವಾಗಿ, ಯಮನನ್ನೂ, ವಾಯುವನ್ನೂ, ಇಂದ್ರನನ್ನೂ, ಅಶ್ವಿನೀದೇವತೆಗಳನ್ನೂ ಸಂತಾನಾರ್ಥವಾಗಿ ಅಂಗೀಕರಿಸಿದರು. ಪತಿಪರಾಯಣೆಯಾಗಿದ್ದ ಕುಂತಿಯು, ದೂರ್ವಾಸನಿಂದ ತನಗೆ ಉಪದೇಶಿಸಲ್ಪಟ್ಟಿದ್ದ ಮಂತ್ರಗಳಿಂದ ಯಮನನ್ನೂ, ವಾಯುವನ್ನೂ, ಇಂದ್ರನನ್ನೂ ಆಹ್ವಾನಮಾಡಿದಳು. ಮಾದ್ರೀದೇವಿಯು, ತನಗೆ ಕುಂತಿಯು ಉಪದೇಶಿಸಿದ ಒಂದು ಮಂತ್ರದಿಂದ ಅಶ್ವಿನೀದೇವತೆಗಳನ್ನು ಕರೆದಳು. ಈ ಮಂತ್ರಬಲದಿಂದ ಅವರಿಬ್ಬರ ಗರ್ಭಗಳಲ್ಲಿಯೂ ಮಕ್ಕಳು ಜನಿಸಿದರು. ಕುಂತೀಮಾದ್ರಿಯರಿಬ್ಬರೂ, ಆ ಮಕ್ಕಳನ್ನು ಮಹರ್ಷಿಗಳ ಪುಣ್ಯಾಶ್ರಮಗಳಲ್ಲಿಯೂ, ತಪೋವನಗಳಲ್ಲಿಯೂ ಪೋಷಿಸುತ್ತ ಬಂದುದರಿಂದ, ಆ ಮಕ್ಕಳು ಋಷಿಕುಮಾರರಂತೆ ಬೆಳೆಯುತ್ತ ಬಂದರು. ಪಾಂಡವರು ಹುಟ್ಟಿದಮೇಲೆ ಪಾಂಡುರಾಜನು ಒಮ್ಮೆ ತನ್ನ ಕಿರಿಯಹೆಂಡತಿಯಾದ ಮಾದ್ರಿಯೊಡನೆ ಸಂಗಮಿಸಿ, ಹಿಂದೆ ಜಿಂಕೆಯ ರೂಪದಲ್ಲಿದ್ದ ಋಷಿಯು ತನಗೆ ಕೊಟ್ಟಿದ್ದ ಶಾಪದಿಂದ ಮೃತಿಹೊಂದಿದನು. ಇವನು ಹೀಗೆ ಮೃತಿಹೊಂದಿದಾಗ, ತನ್ನ ಪತ್ನಿಯರೊಡನೆಯೂ, ಶಿಶುಗಳೊಡನೆಯೂ, ಪವಿತ್ರವಾದ ಶತಶೃಂಗವೆಂಬ ಪರ್ವತದಲ್ಲಿ ತಪೋನಿರತನಾಗಿ ವಾಸಮಾಡುತಿದ್ದನು. ಪಾಂಡುರಾಜನು ಮೃತನಾದಮೇಲೆ, ಶಿಶುಗಳಾಗಿದ್ದ ಪಾಂಡವರನ್ನು ಅಲ್ಲಿದ್ದ ಋಷಿಗಳೇ ಕಾಪಾಡುತಿದ್ದರು. ಬಹಳ ರೂಪವಂತರಾಗಿಯೂ, ಜಡೆಗಳನ್ನು ಧರಿಸಿ ಬ್ರಹ್ಮಚಾರಿಗಳಾಗಿಯೂ ಇದ್ದ ಆ ಶಿಶು

ಗಳನ್ನು ಅಲ್ಲಿದ್ದ ಋಷಿಗಳು, ಪುತ್ರಮಿತ್ರರೊಡನೆ ಧೃತರಾಷ್ಟ್ರನು ಕುಳಿತಿದ್ದ ಸಭಾಸ್ಥಾನಕ್ಕೆ ಕರೆತಂದು "ಎಲೈ! ಇವರು ಪಾಂಡುರಾಜನ ಮಕ್ಕಳು! ನಿಮಗೆ ಪುತ್ರರೂ, ಒಡಹುಟ್ಟಿದವರೂ, ಶಿಷ್ಯರೂ, ಮಿತ್ರರೂ ಆಗಿರುವರು. ಆದುದರಿಂದ ಇವರನ್ನು ನಿಮ್ಮ ವಶಕ್ಕೆ ಒಪ್ಪಿಸಿರುವೆವು" ಎಂದು ಹೇಳಿ, ಅವರ ವಶದಲ್ಲಿ ಬಿಟ್ಟು ಹಿಂತಿರುಗಿ ಹೊರಟುಹೋದರು. ಹೀಗೆ ಋಷಿಗಳು ಪಾಂಡುವಿನ ಮಕ್ಕಳೆಂದು ಹೇಳಿ ಬಿಟ್ಟುಹೋದ ಆ ಮಕ್ಕಳನ್ನು ಕಂಡು, ಅಲ್ಲಿದ್ದ ಕೌರವರೂ, ನಾನಾವರ್ಣದವರೂ, ಪಟ್ಟಣವಾಸಿಗಳೂ, ಸಂತೋಷದಿಂದ ಕೋಲಾಹಲಗಳನ್ನು ಮಾಡಿದರು. ಆಗ ಸಭೆಯಲ್ಲಿ "ಇವರು ಪಾಂಡುವಿನ ಮಕ್ಕಳ ಹಾಗಿಲ್ಲ"ವೆಂದು ಕೆಲವರು, "ಪಾಂಡುರಾಜನ ಮಕ್ಕಳೇ ಇವ"ರೆಂದು ಮತ್ತೆ ಕೆಲವರೂ, "ಆಗಲೇ ಪಾಂಡುವು ಶಾಪದಿಂದ ಮೃತನಾದನು. ಅವನಿಗೆ ಮಕ್ಕಳಾದುದು ಹೇಗೆ?" ಎಂದು ಬೇರೆ ಕೆಲವರೂ, "ಹೇಗಾದರೂ ನಮಗೆ ಇದೊಂದು ಶುಭವೃತ್ತಾಂತವು. ಭಾಗ್ಯವಶದಿಂದ ನಾವು ಪಾಂಡುರಾಜನ ಸಂತಾನವನ್ನು ಕಣ್ಣಾರೆ ನೋಡುವಂತಾಯಿತು" ಎಂದು ಕೆಲವರೂ ಮಾತಾಡಿಕೊಳ್ಳುತಿದ್ದರು. "ಈ ಮಕ್ಕಳಿಗೆ ಸ್ವಾಗತವನ್ನು ಹೇಳಿರಿ" ಎಂಬ ಮಾತೇ ಆ ಸಭೆಯಲ್ಲಿ ವಿಶೇಷವಾಗಿ ಕೇಳಿಸುತಿತ್ತು. ಈ ಕೋಲಾಹಲವು ತಗ್ಗಿದಮೇಲೆ, ಕಣ್ಮರೆಯಾಗಿದ್ದ ಭೂತಗಳಿಂದ "ಇವರು ಪಾಂಡುವಿನ ಮಕ್ಕಳೇ ನಿಜವು!" ಎಂಬ ಅಶರೀರವಾಣಿಯೊಂದು ಹೊರಟು, ದಿಕ್ಕುಗಳೆಲ್ಲವೂ ಮೊಳಗುವಂತೆ ಕೇಳಿಸಿತು. ಇದಲ್ಲದೆ ಆ ರಾಜಕುಮಾರರನ್ನು ಒಳಕ್ಕೆ ಕರೆತರುವಾಗಲೇ ಆಕಾಶದಿಂದ ಪುಷ್ಪವೃಷ್ಟಿ ಸುರಿಯಿತು. ಸುಗಂಧವಾಯುವು ಬೀಸಿತು. ಶಂಖ ದುಂದುಭಿ ಧ್ವನಿಗಳು ಕೇಳಿಸಿದುವು. ಇದು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವಂತಾಯಿತು. ಆಗ ಪುರಜನರು ಆ ಮಕ್ಕಳಲ್ಲಿ ತಮಗುಂಟಾದ ಪ್ರೇಮದಿಂದ ಮಾಡುತಿದ್ದ ಕೋಲಾಹಲಧ್ವನಿಗಳು ಬಹಳ ಪ್ರಬಲವಾಗಿ, ಆ ರಾಜಕುಮಾರರ ಕೀರ್ತಿಯನ್ನು ಸಾರುವಂತೆ ಆಕಾಶವನ್ನೆಲ್ಲಾ ವ್ಯಾಪಿಸಿದುವು. ಆ ಮಕ್ಕಳೆಲ್ಲರೂ ಧೃತರಾಷ್ಟ್ರನ ಪೋಷಣೆಯಲ್ಲಿರುತ್ತ, ಸಕಲ ವೇದಗಳನ್ನೂ, ಶಾಸ್ತ್ರಗಳನ್ನೂ ಅಭ್ಯಸಿಸಿ, ಎಲ್ಲರ ಗೌರವಕ್ಕೂ ಪಾತ್ರರಾಗಿ, ಎಂತವರಿಗೂ ಭಯಪಡದ ವೀರ್ಯೋತ್ಸಾಹ

ದಿಂದ ಅಲ್ಲಿಯೇ ವಾಸಮಾಡುತ್ತಿದ್ದರು. ಅದರಲ್ಲಿ ಧರ್ಮರಾಜನ ನಿಷ್ಕಲ್ಮಷವಾದ ಹೃದಯವೂ, ಭೀಮನ ಧೈರ್ಯವೂ, ಅರ್ಜುನನ ವೀರ್ಯವೂ, ನಕುಲಸಹದೇವರ ವಿನಯವೂ, ಕುಂತೀದೇವಿಯ ಗುರುಶುಶ್ರೂಷೆಯೂ, ಅಲ್ಲಿನ ಸಮಸ್ತಪ್ರಜೆಗಳಿಗೂ ಸಂತೋಷವನ್ನುಂಟುಮಾಡಿದುವು. ಆ ಪಂಚಪಾಂಡವರ ಶೌರ್ಯಾದಿಗುಣಗಳನ್ನು ಲೋಕವೆಲ್ಲ ಕೊಂಡಾಡುತಿದ್ದಿತು. ಆಮೇಲೆ ಸ್ವಲ್ಪಕಾಲದೊಳಗಾಗಿ ದ್ರೌಪದಿಯ ಸ್ವಯಂವರಕ್ಕಾಗಿ ಅನೇಕರಾಜರು ನೆರೆದಿದ್ದಾಗ, ಅಲ್ಲಿ ಅರ್ಜುನನು ಬೇರೆ ಯಾವರಾಜರಿಗೂ ಸಾಧ್ಯವಲ್ಲದ ಧನುರ್ವಿದ್ಯಾಚಾತುರ್ಯವನ್ನು ತೋರಿಸಿ ಆ ಕನ್ಯೆಯನ್ನು ಪಡೆದನು. ಅದುಮೊದಲು ಆತನು ಈ ಜಗತ್ತಿನಲ್ಲಿರುವ ಧನುರ್ಧಾರಿಗಳೊಳಗೆಲ್ಲ ತಾನೇ ಅಗ್ರಗಣ್ಯನೆಂಬ ಖ್ಯಾತಿಯನ್ನೂ ಹೊಂದಿದನು. ಆತನು ಯುದ್ಧಕಾಲಗಳಲ್ಲಿ ತನ್ನ ಪ್ರತಾಪದಿಂದ ಸೂರ್ಯನಂತೆ ದುರ್ನಿರೀಕ್ಷ್ಯನಾಗಿದ್ದನು. ಮತ್ತು ತನ್ನಣ್ಣನಾದ ಯುಧಿಷ್ಠಿರನು ರಾಜಸೂಯವನ್ನಾರಂಭಿಸಿದಾಗ, ಅನೇಕರಾಜರನ್ನು ಜಯಿಸಿ ಅವರಿಂದ ವಿಶೇಷವಾದ ಕಪ್ಪಕಾಣಿಕೆಗಳನ್ನು ತಂದೊಪ್ಪಿಸಿದನು. ಆಗ ಧರ್ಮರಾಜನು ಶ್ರೀಕೃಷ್ಣನ ಮಂತ್ರಬಲದಿಂದಲೂ, ಭೀಮಾರ್ಜುನರ ಅಸಮಾನಪರಾಕ್ರಮದಿಂದಲೂ ಜರಾಸಂಧನನ್ನು ಕೊಲ್ಲಿಸಿ, ಬಲಗರ್ವಿತನಾದ ಶಿಶುಪಾಲನನ್ನೂ ಧ್ವಂಸಮಾಡಿಸಿ, ಸಮೃದ್ಧವಾದ ಅನ್ನದಾನಗಳಿಂದಲೂ, ಭೂರಿದಕ್ಷಿಣೆಗಳಿಂದಲೂ ಮಹಾವೈಭವದೊಡನೆ ಆ ಯಾಗವನ್ನು ಪೂರ್ತಿಗೊಳಿಸಿದನು. ಧರ್ಮರಾಜನ ಈ ರಾಜಸೂಯಮಹಾಯಜ್ಞವು ನಡೆಯುವಾಗ, ಅಲ್ಲಿನ ಬೊಕ್ಕಸದ ಮತ್ತು ಉಗ್ರಾಣದ ಅಧಿಕಾರವು ದುರ್ಯೋಧನನಿಗೆ ವಹಿಸಲ್ಪಟ್ಟಿತ್ತು. ಆಗ ನಾನಾದೇಶಗಳಿಂದ ಮಣಿಗಳೂ, ರತ್ನಗಳೂ, ಬೆಳ್ಳಿಬಂಗಾರಗಳೂ, ಗೋವುಗಳೂ, ಆನೆಗಳೂ, ಕುದುರೆಗಳೂ, ಚಿತ್ರವಿಚಿತ್ರಗಳಾದ ವಸ್ತ್ರಗಳೂ, ದುಪ್ಪಟಿಗಳೂ, ಕಂಬಳಿಗಳೂ, ಉತ್ತಮವಾದ ಕೃಷ್ಣಾಜಿನಗಳೂ, ಹುಲ್ಲೆಯ ಚರ್ಮದ ಆಸ್ತರಣಗಳೂ ಅಪರಿಮಿತವಾಗಿ ಧರ್ಮರಾಜನ ಬೊಕ್ಕಸಕ್ಕೆ ಬಂದುಬೀಳುತಿದ್ದುವು. ಪಾಂಡವರ ಈ ಐಶ್ವರ್ಯಸಮೃದ್ಧಿಯನ್ನು ನೋಡಿ ದುರ್ಯೋಧನನ ಮನಸ್ಸಿನಲ್ಲಿ ಮಹತ್ತಾದ ಅಸೂಯೆ ಹುಟ್ಟಿ, ಅದರಮೇಲೆ ಪಾಂಡವರಲ್ಲಿ ದ್ವೇಷವು ಅಂಕುರಿ

ಸುತ್ತ ಬಂದಿತು. ಇದಲ್ಲದೆ ಮಯನು ದೇವಸಭೆಯಂತೆ ಮಹಾದ್ಭುತವಾದ ಒಂದು ಸಭೆಯನ್ನು ಆ ಯಜ್ಞಕಾಲದಲ್ಲಿ ಪಾಂಡವರಿಗಾಗಿ ನಿರ್ಮಿಸಿಕೊಟ್ಟನು. ಅದರ ವೈಭವವನ್ನು ನೋಡಿ ದುರ್ಯೋಧನನಿಗೆ ಮತ್ತಷ್ಟು ಸಂಕಟವುಂಟಾಯಿತು. ಮಯನ ಶಿಲ್ಪಚಾತುರ್ಯದಿಂದ ಆ ಸಭಾಮಂಟಪವು ಎಲ್ಲರನ್ನೂ ಭ್ರಮೆಗೊಳಿಸುವಂತಿದ್ದಿತು. ಒಮ್ಮೆ ದುರ್ಯೋಧನನು ಆ ಸಭಾಮಂಟಪದಲ್ಲಿ ಹೋಗುತ್ತ, ನೀರೆಂದೂ, ನೆಲವೆಂದೂ ತಿಳಿಯದೆ ಭ್ರಮಿಸಿ, ತಬ್ಬಿಬ್ಬಾಗಿ ಕಾಲುಜಾರಿ ತಡಬಡಿಸುತ್ತಿರಲು, ಆಗ ಭೀಮನು ಶ್ರೀಕೃಷ್ಣನಿಗಿದಿರಾಗಿ ಅವನನ್ನು ನೋಡಿ ಆ ದುರ್ಯೋಧನನು ಕೇವಲ ಅನಾಗರಿಕನೆಂಬ ಭಾವವು ತೋರುವಂತೆ ಘಕಘಕನೆ ನಕ್ಕುಬಿಟ್ಟನು. ಆಗ ದುರ್ಯೋಧನನಿಗೆ ಈ ಅವಮಾನದಿಂದ ಪಾಂಡವರಮೇಲಿದ್ದ ಕೋಪವು ಮಿತಿಮೀರಿತು. ದುರ್ಯೋಧನನು ನಾನಾವಿಧ ಭೋಗಗಳನ್ನೂ, ಉತ್ತಮಪದಾರ್ಥಗಳನ್ನೂ ಅನುಭವಿಸುತಲಿದ್ದರೂ, ದಿನದಿನಕ್ಕೆ ಅವನ ಮುಖವು ದುಃಖದಿಂದ ಬಣ್ಣಗೆಟ್ಟಿತು. ಅವನಿಗೆ ಇಷ್ಟರಾದ ಕೆಲವರು ಈ ವಿಷಯವನ್ನು ಧೃತರಾಷ್ಟ್ರನಿಗೆ ತಿಳಿಸಿದರು. ಧೃತರಾಷ್ಟ್ರನಿಗಾದರೋ ತನ್ನ ಮಕ್ಕಳೆಂದರೆ ಬಹಳ ಪ್ರೀತಿ. ಅದರಲ್ಲಿಯೂ ದುರ್ಯೋಧನನ ಮಾತಿಗೆ ಮೀರುವವನಲ್ಲ. ಇಷ್ಟರಲ್ಲಿ ದುರ್ಯೋಧನಾದಿಗಳೆಲ್ಲರೂ ಪಾಂಡವರನ್ನು ಹೇಗಾದರೂ ಕೆಡಿಸಬೇಕೆಂಬ ದುರುದ್ದೇಶದಿಂದ, ಅವರೊಡನೆ ಜೂಜಾಡಿ ಸೋಲಿಸಬೇಕೆಂದು ಯೋಚಿಸಿ, ಧೃತರಾಷ್ಟ್ರನಿಗೆ ಆ ವಿಷಯವನ್ನು ತಿಳಿಸಲು,ಧೃತರಾಷ್ಟ್ರನು ಅದು ಪಾಪಕಾರ್ಯವೆಂದು ತಿಳಿದಿದ್ದರೂ ಮಕ್ಕಳ ಮೇಲಿನ ಪ್ರೇಮದಿಂದ ಆ ಅಕಾರ್ಯಕ್ಕಾಗಿ ಅನುಮತಿಸಿಬಿಟ್ಟನು. ಇದಲ್ಲದೆ ತನ್ನ ಮಕ್ಕಳು ಪಾಂಡವರೊಡನೆ ಜಗಳವಾಡುತ್ತಿರುವಾಗಲೂ ಈ ಜಗಳವನ್ನು ತೀರಿಸುವುದಕ್ಕೆ ಯತ್ನಿಸದೆ ಅನುಮೋದಿಸುತಿದ್ದನು. ವಿದುರನೂ, ಭೀಷ್ಮನೂ, ದ್ರೋಣನೂ, ಕೃಪಾಚಾರ್ಯನೂ ಇದೇ ವಿಚಾರವಾಗಿ ಆಗಾಗ ಅವನಿಗೆ ಹಿತವನ್ನು ಹೇಳುತಿದ್ದರೂ, ಅವರ ಮಾತನ್ನೂ ಲಕ್ಷ್ಯದಲ್ಲಿಡದೆ, ತನ್ನ ಮಕ್ಕಳ ದುರಾಗತಗಳನ್ನೂ ತಡೆಯದೆ, ಉದಾಸೀನನಾಗಿರುವುದನ್ನು ನೋಡಿ ಶ್ರೀಕೃಷ್ಣನಿಗೆ ಮಹತ್ತಾದ ಕೋಪವುಂಟಾಯಿತು. ಆತನಿಗೆ ಧೃತರಾಷ್ಟ್ರಾದಿಗಳಲ್ಲಿ ಮೊದಲಿದ್ದ ಪ್ರೀತಿಯು ಸಂಪೂರ್ಣವಾಗಿ ಬಿಟ್ಟು

ಹೋಯಿತು. ಧೃತರಾಷ್ಟ್ರನು ಹೀಗೆ ತನ್ನ ಮಕ್ಕಳ ದುರ್ನಯಗಳೊಂದನ್ನೂ ತಡೆಯದೆ, ಜೂಜು ಮೊದಲಾದ ಅವರ ಅಕೃತ್ಯಗಳನ್ನೂ ಉಪೇಕ್ಷಿಸುತ್ತಿದ್ದುದರಿಂದ ಕೌರವಪಾಂಡವರಿಬ್ಬರಿಗೂ ಮೇಲೆಮೇಲೆ ವೈರವು ಹೆಚ್ಚಿ ಘೋರಯುದ್ಧಕ್ಕೆ ಆರಂಭವಾಯಿತು. ಈ ಯುದ್ಧದಲ್ಲಿ ಅನೇಕ ಕ್ಷತ್ರಿಯಸಮೂಹವು ಹೊಡೆದಾಡಿ ಸತ್ತಿತು. ಪಾಂಡವರು ಜಯಶೀಲರಾದರು. ಹೀಗೆ ಪಾಂಡವರಿಗೆ ಉಂಟಾದ ಜಯವನ್ನು ನೋಡಿ, ಧೃತರಾಷ್ಟ್ರನಿಗೂ ಮನಸ್ಸಿನಲ್ಲಿ ಬಹಳ ಖೇದವುಂಟಾಯಿತು. ತನ್ನ ಮಗನಾದ ದುರ್ಯೋಧನನ ಮತ್ತು ಅವನ ಸ್ನೇಹಿತರಾದ ಕರ್ಣಶಕುನಿಗಳ ದುರ್ಬೋಧನೆಗಳ ಫಲವನ್ನೆಲ್ಲಾ ಮನಸ್ಸಿನಲ್ಲಿ ಬಹಳಹೊತ್ತು ಚಿಂತಿಸಿ, ಸಂಜಯನನ್ನು ಕುರಿತು ಹೀಗೆಂದು ಹೇಳುವನು.

“ ಸಂಜಯಾ! ನನ್ನ ಮಾತನ್ನು ಸಾವಧಾನದಿಂದ ಕೇಳು! ಆದರೆ ಅದಕ್ಕಾಗಿ ನೀನು ಕೋಪಿಸಕೂಡದು. ನೀನು ಅನೇಕವಿಷಯಗಳನ್ನು ಕೇಳಿಬಲ್ಲವನು. ಮಹಾಬುದ್ಧಿವಂತನು! ವಿದ್ವಾಂಸರೆಲ್ಲರೂ ನಿನ್ನ ನಡತೆಯನ್ನು ಆದರಿಸುವರು. ಪ್ರಕೃತದಲ್ಲಿ ನಿನಗೆ ತಿಳಿಯದ ಸಂಗತಿಯೇನೂ ಇಲ್ಲದಿದ್ದರೂ, ನಾನು ನಿನ್ನೊಡನೆ ಕೆಲವು ವಿಷಯಗಳನ್ನು ಹೇಳುವೆನು. ನಿಜವಾಗಿಯೂ ನನಗೆ ಯುದ್ಧದಲ್ಲಿ ಮನಸ್ಸಿಲ್ಲ! ನಮ್ಮ ಭರತಕುಲಕ್ಕೆ ಹಾನಿಯುಂಟಾಗುವುದೂ ನನಗೆ ಪ್ರಿಯವಲ್ಲ. ಪಾಂಡುವಿನ ಮಕ್ಕಳೆಂದು ನನಗೆ ಭೇದಬುದ್ಧಿಯೂ ಇಲ್ಲ. ನನ್ನ ಮಕ್ಕಳಾದರೋ ಕೇವಲಕೋಪಸ್ವಭಾವವುಳ್ಳವರು. ಮುದುಕನಾದ ನನ್ನ ಮಾತನ್ನು ಸ್ವಲ್ಪಮಾತ್ರವೂ ಲಕ್ಷ್ಯಮಾಡುವವರಲ್ಲ. ನಾನಾದರೋ ಕಣ್ಣಿಲ್ಲದ ಕುರುಡನು. ಮುದಿತನದಿಂದ ನನ್ನ ಬುದ್ಧಿಯೂ, ನನ್ನ ಮನಸ್ಸೂ ಸ್ಥಿರವಿಲ್ಲದೆ ಕಳವಳಿಸುತ್ತಿರುವುದು. ಮಕ್ಕಳಮೇಲಿನ ಪ್ರೇಮದಿಂದ ಅವರು ಮಾಡುವ ಅಕೃತ್ಯಗಳನ್ನೆಲ್ಲ ಸಹಿಸಿಕೊಂಡು ಸುಮ್ಮನಿರಬೇಕಾಗಿ ಬಂದಿತು. ಆ ದುರ್ಯೋಧನನಾದರೋ ಸ್ವಲ್ಪವಾದರೂ ತಿಳುವಳಿಕೆಯಿಲ್ಲದವನು. ಅವನಲ್ಲಿ ನನಗಿರುವ ಮೋಹಕ್ಕಾಗಿ, ಅವನ ಮೂಢತನಕ್ಕೆ ತಕ್ಕಂತೆ ನಾನೂ ಮೂಢನಾಗಿಯೇ ನಡೆಯಬೇಕಾಯಿತು. ಹಿಂದೆ ಮಹಾತೇಜಸ್ವಿಯಾದ ಧರ್ಮ

ರಾಜನ ರಾಜಸೂಯಯಾಗದಲ್ಲಿ ಆತನ ಐಶ್ವರ್ಯಸಮೃದ್ಧಿಯನ್ನೂ, ಸಭಾಮಂಟಪದಲ್ಲಿ ಭೀಮನು ಪರಿಹಾಸ್ಯಮಾಡಿದುದನ್ನೂ ನೋಡಿ ಸಹಿಸಲಾರದೆ, ನನ್ನ ಮಗನು ಪಾಂಡವರಮೇಲೆ ಬದ್ಧದ್ವೇಷವನ್ನಿಟ್ಟನು. ಆದರೇನು? ಆ ಪಾಂಡವರನ್ನು ಯುದ್ಧದಲ್ಲಿ ಜಯಿಸಬೇಕೆಂದರೆ ಅವನಿಂದೇನೂ ಸಾಗಲಿಲ್ಲ! ಅವನು ಕ್ಷತ್ರಿಯನಾಗಿದ್ದರೂ ಪಾಂಡವರಂತೆ ಸ್ವಪ್ರಯತ್ನದಿಂದ ಐಶ್ವರ್ಯವನ್ನು ಸಂಪಾದಿಸಲು ಅವನಿಗೆ ಶಕ್ತಿಯಿಲ್ಲ! ಹೀಗಿರುವಾಗ ಅವನೇನು ಮಾಡಬಲ್ಲನು? ಯಾವುದೋ ಒಂದು ವಿಧದಿಂದ ಪಾಂಡವರಮೇಲೆ ತನ್ನ ಹಗೆಯನ್ನು ತೀರಿಸಿಕೊಳ್ಳಬೇಕೆಂದು, ನನ್ನ ಮೈದುನನಾದ ಶಕುನಿಯು ದುರ್ಯೋಧನನೆಯಮೇಲೆ, ಪಾಂಡವರೊಡನೆ ಕಪಟದ್ಯೂತವನ್ನಾಡುವುದಕ್ಕೆ ಎತ್ತುಗಡೆಯನ್ನು ಮಾಡಿದನು. ಓ ಸಂಜಯಾ! ಈ ವಿಷಯದಲ್ಲಿ ನನಗೆ ತೋರಿದ ಸಂಗತಿಯನ್ನೆಲ್ಲಾ ಯಥಾವತ್ತಾಗಿ ತಿಳಿಸುವೆನು ಕೇಳು. ನನ್ನ ಬುದ್ಧಿಗೆ ತೋರಿದಮಟ್ಟಿಗೆ ಈಗ ನಾನು ಹೇಳುವ ವಿಷಯಗಳನ್ನೆಲ್ಲ ಲಾಲಿಸು! ಅದರಮೇಲೆ ನಿನ್ನ ಆಲೋಚನೆಯನ್ನು ತಿಳಿಸು. ಕಣ್ಣಿಲ್ಲದ ಕುರುಡನಾಗಿದ್ದರೂ, ಈಗ ನಾನು ಹೇಳತಕ್ಕ ಮಾತುಗಳನ್ನು ಕೇಳಿದರೆ, ನಾನು ಪ್ರಜ್ಞೆಯೆಂಬ ಕಣ್ಣಿನಿಂದಲೇ ಎಲ್ಲವನ್ನೂ ತಿಳಿಯಬಲ್ಲೆನೆಂದು ನಿನಗೇ ಗೊತ್ತಾಗುವುದು. ಓ ಸೂತಾ! ಅರ್ಜುನನು ದ್ರುಪದಸಭೆಯಲ್ಲಿ ಬಿಲ್ಲಿಗೆ ನಾಣೇರಿಸಿ ಬೇರೆಯಾರಿಗೂ ಅಸಾಧ್ಯವಾದ ಮತ್ಸ್ಯಯಂತ್ರವನ್ನು ಭೇದಿಸಿ, ಎಲ್ಲಾ ರಾಜರಿಗೂ ಅವಮಾನವುಂಟಾಗುವಹಾಗೆ ದ್ರೌಪದಿಯನ್ನು ಪಡೆದನೆಂದು ನನ್ನ ಕಿವಿಗೆ ಯಾವಾಗ ಬಿದ್ದಿತೋ, ಆಗಲೇ ನನಗೆ ನನ್ನ ಮಕ್ಕಳು ಜಯಿಸುವರೆಂಬ ಆಸೆಯು ಬಿಟ್ಟುಹೋಯಿತು. ಅದರಮೇಲೆ ಅದೇ ಅರ್ಜುನನು, ದ್ವಾರಕೆಯಲ್ಲಿ ಕೃಷ್ಣನ ತಂಗಿಯಾದ ಸುಭದ್ರೆಯನ್ನು ಬಲಾತ್ಕಾರದಿಂದ ವಿವಾಹಮಾಡಿಕೊಂಡುದನ್ನೂ, ಅರ್ಜುನನ ಆ ಅಕೃತ್ಯವನ್ನು ನೋಡಿಯೂ ಕೃಷ್ಣ ಬಲರಾಮರಿಬ್ಬರೂ ಅದಕ್ಕಾಗಿ ಕೋಪಿಸದೆ ಪಾಂಡವರಮೇಲೆ ಪ್ರೀತಿಯನ್ನೇ ತೋರಿಸುತ್ತ, ಅವರೊಡನೆ ಇಂದ್ರಪ್ರಸ್ಥಕ್ಕೆ ಹೋದರೆಂಬುದನ್ನೂ ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ದೇವರಾಜನಾದ ಇಂದ್ರನು ಖಾಂಡವ

ವನವನ್ನು ದಹಿಸುತ್ತಿದ್ದ ಅಗ್ನಿಯನ್ನು ಶಮನಮಾಡುವುದಕ್ಕಾಗಿ ದೊಡ್ಡ ಮಳೆಯನ್ನು ಕರೆದಾಗ, ಅರ್ಜುನನು ತನ್ನ ದಿವ್ಯಬಾಣಗಳಿಂದ ಆ ಮಳೆಯನ್ನು ತಡೆದು, ಅಗ್ನಿಗೆ ತೃಪ್ತಿಯನ್ನುಂಟುಮಾಡಿದನೆಂದು ನಾನು ಯಾವಾಗ ಕೇಳಿದೆನೋ, ಆಗಲೇ ನಾವು ಗೆಲ್ಲುವೆವೆಂಬ ಆಸೆಯನ್ನು ಬಿಟ್ಟುಬಿಟ್ಟೆನು. ಪಂಚಪಾಂಡವರೂ, ಕುಂತಿಯೂ ಅರಗಿನಮನೆಯಿಂದ ತಪ್ಪಿಸಿಕೊಂಡು ಹೋದರೆಂದೂ, ಅವರ ಕಾರ್ಯಗಳಿಗೆ ವಿದುರನು ಸಹಾಯಕನಾಗಿದ್ದನೆಂದೂ ಯಾವಾಗ ನನ್ನ ಕಿವಿಗೆ ಬಿದ್ದಿತೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ದ್ರೌಪದಿಯ ಸ್ವಯಂವರವಾದಮೇಲೆ ಮಹಾಶೂರರಾದ ಪಾಂಚಾಲರೂ, ಪಾಂಡವರೂ ಬಹಳ ಅನುಕೂಲಭಾವದಿಂದ ಸೇರಿರುವರೆಂಬುದನ್ನು ಯಾವಾಗ ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಮಗಧೇಶ್ವರನಾಗಿಯೂ, ಮಹಾತೇಜಸ್ವಿಯಾಗಿಯೂ ಇದ್ದ ಜರಾಸಂಧನನ್ನು ಭೀಮನು ತನ್ನ ಬರೀ ತೋಳುಗಳಿಂದಲೇ ವಧಿಸಿದನೆಂಬ ಸುದ್ದಿಯು ನನ್ನ ಕಿವಿಗೆ ಯಾವಾಗ ಬಿದ್ದಿತೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಪಾಂಡವರು ದಿಗ್ವಿಜಯದಲ್ಲಿ ಅನೇಕಕ್ಷತ್ರಿಯರನ್ನು ವಶಮಾಡಿಕೊಂಡು, ಮಹಾವೈಭವದಿಂದ ರಾಜಸೂಯಯಜ್ಞವನ್ನು ನಡೆಸಿದರೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಸಂಜಯಾ! ರಜಸ್ವಲೆಯಾಗಿ ಒಂದೇ ಬಟ್ಟೆಯನ್ನುಟ್ಟಿದ್ದ ದ್ರೌಪದಿಯನ್ನು ಸಭಾಸ್ಥಾನಕ್ಕೆ ಎಳೆತರುವಂತೆ ನನ್ನ ಮಗನು ಆಜ್ಞಾಪಿಸಲು, ಆಕೆಯು ಸನಾಥೆಯಾಗಿದ್ದರೂ ಅನಾಥೆಯಂತೆ ಗೋಳಿಡುತ್ತ, ಕಣ್ಣುಗಳಲ್ಲಿ ಧಾರೆಧಾರೆಯಾಗಿ ನೀರನ್ನು ಸುರಿಸುತ್ತಿರುವಾಗಲೂ, ಆಕೆಯನ್ನು ಬಲಾತ್ಕಾರದಿಂದ ಎಳೆದು ತರಿಸಿದರೆಂದು ನಾನು ಯಾವಾಗ ಕೇಳಿದೆನೋ, ಆಗಲೇ ವನಗೆ ನಮ್ಮ ಜಯದಾಸೆ ಬಿಟ್ಟುಹೋಯಿತು. ಪರಮನೀಚನಾದ ದುಶ್ಶಾಸನನು, ಬುದ್ಧಿಯಿಲ್ಲದೆ ಆ ಸಭಾಮಧ್ಯದಲ್ಲಿ ದ್ರೌಪದಿಯ ನಡುಬಟ್ಟೆಯನ್ನು ಎಳೆದೆಳೆದು ರಾಶಿಹಾಕುತಿದ್ದಾಗಲೂ, ಆ ವಸ್ತ್ರದ ಕೊನೆಯೇ ಕಾಣಿಸದೆ ಹೋಯಿತೆಂಬ ಆಶ್ಚರ್ಯವೃತ್ತಾಂತವು ನನ್ನ ಕಿವಿಗೆ ಯಾವಾಗ ಬಿದ್ದಿತೋ, ಆಗಲೇ ನನಗೆ ನಾವು ಜಯಿಸುವೆವೆಂಬ ಆಶೋತ್ತರವು ಬಿಟ್ಟುಹೋಯಿತು!

ಧರ್ಮರಾಜನು ಶಕುನಿಯ ಕಪಟದಿಂದ ರಾಜ್ಯವನ್ನು ಕಳೆದುಕೊಂಡು ದೇಶಭ್ರಷ್ಟನಾಗಿ ಹೋದಾಗ, ಅಸಮಾನಪರಾಕ್ರಮವುಳ್ಳ ಅವನ ತಮ್ಮಂದಿರೆಲ್ಲರೂ ಆಗಲೂ ಆತನನ್ನು ಬಿಡದೆ, ಅವನನ್ನು ಹಿಂಬಾಲಿಸಿ ಹೋದರೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟು ಹೋಯಿತು. ಭೀಮಾರ್ಜುನಾದಿಗಳು, ತಮ್ಮ ಅಣ್ಣನಾದ ಧರ್ಮರಾಜನಲ್ಲಿರುವ ಪ್ರೀತಿಯಿಂದ, ಅವನನ್ನು ಹಿಂಬಾಲಿಸಿ ಕಾಡಿಗೆ ಹೊರಟಾಗ, ಭುಜಾಸ್ಫಾಲನ (ತೋಳುತಟ್ಟುವುದು) ಮುಂತಾದ ನಾನಾಚೇಷ್ಟೆಗಳನ್ನು ಮಾಡಿಹೋದರೆಂದು ನಾನು ಯಾವಾಗ ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಧರ್ಮರಾಜನು ವನದಲ್ಲಿದ್ದಾಗ, ಸ್ನಾತಕರಾಗಿಯೂ, ಬ್ರಹ್ಮಚಾರಿಗಳಾಗಿಯೂ, ಸನ್ಯಾಸಿಗಳಾಗಿಯೂ ಇದ್ದ ಮಹಾತ್ಮರಾದ ಅನೇಕಮಂದಿ ಬ್ರಾಹ್ಮಣರು ಅವನನ್ನು ಬಿಡದೆ ಹಿಂಬಾಲಿಸುತ್ತಿದ್ದರೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ನಮ್ಮ ಜಯದಾಸೆಯು ಬಿಟ್ಟುಹೋಯಿತು. ರುದ್ರನು ಬೇಡನ ವೇಷದಿಂದ ಬಂದು ತನ್ನೊಡನೆ ಯುದ್ಧಕ್ಕೆ ನಿಂತಾಗ, ಅರ್ಜುನನು ಆ ಯುದ್ಧದಲ್ಲಿ ತನ್ನ ಪರಾಕ್ರಮದಿಂದ ಅವನನ್ನು ಸಂತೋಷಪಡಿಸಿ, ಅವನಿಂದ ಅತ್ಯುತ್ತಮವಾದ ಪಾಶುಪತಾಸ್ತ್ರವನ್ನು ಪಡೆದನೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಪಾಂಡವರು ವನವಾಸದಲ್ಲಿದ್ದಾಗ ವೃದ್ಧರಾದ ಅನೇಕಮಹರ್ಷಿಗಳು ಅವರಬಳಿಗೆ ಬಂದು, ತಮ್ಮ ಶಿಷ್ಯಗಣದೊಡನೆ ಅವರಿಗೆ ಬೇಕಾದ ಉಪಚಾರಗಳನ್ನು ನಡೆಸುತಿದ್ದರೆಂದು ಯಾವಾಗ ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಅರ್ಜುನನು ದೇವಲೋಕಕ್ಕೆ ಹೋಗಿ, ಅಲ್ಲಿ ದೇವೇಂದ್ರನಿಂದ ಅನೇಕದಿವ್ಯಾಸ್ತ್ರಮಂತ್ರಗಳನ್ನು ಉಪದೇಶಹೊಂದಿ ಬಂದಿರುವನೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಮತ್ತು ಬ್ರಹ್ಮನ ವರಬಲದಿಂದ ಗರ್ವಿತರಾಗಿ ದೇವತೆಗಳಿಗೂ ದುರ್ಜಯರಾದ ಕಾಲಕೇಯರೆಂಬ ರಾಕ್ಷಸರನ್ನು ಅರ್ಜುನನು ಜಯಿಸಿಬಂದನೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಅದಲ್ಲದೆ ಇನ್ನೂ ಅನೇಕಯುದ್ಧಗಳಲ್ಲಿ ಅರ್ಜುನನು ದೇವತೆಗಳ ಸಹಾ

ಯುಕ್ಕಾಗಿ ದೇವಲೋಕಕ್ಕೆ ಹೋಗಿ, ಅವರ ಕಾರ್ಯವನ್ನು ತೀರಿಸಿ ಬರುತ್ತಿದ್ದನೆಂದೂ ಕೇಳಿದೆನು. ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಧರ್ಮರಾಜನು ತೀರ್ಥಯಾತ್ರೆಗೆ ಹೋದಾಗ, ಅವನಿಗೆ ಲೋಮಶ ಮಹರ್ಷಿಯ ಸಮಾಗಮವುಂಟಾದುದನ್ನೂ, ಬೃಹದಶ್ವನಿಂದ ಅವನಿಗೆ ಅಕ್ಷಹೃದಯವೆಂಬ ದ್ಯೂತಶಾಸ್ತ್ರದ ತಿಳುವಳಿಕೆಯುಂಟಾದುದನ್ನೂ ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಭೀಮನೂ, ಇತರ ಪಾಂಡವರೂ ಮನುಷ್ಯರಿಗೆ ಹೋಗಲಸಾಧ್ಯವಾದ ಗಂಧಮಾಧನ ಪರ್ವತಕ್ಕೆ ಹೋಗಿ, ಅಲ್ಲಿ ಕುಬೇರನನ್ನು ಸಂಧಿಸಿದರೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಘೋಷಯಾತ್ರೆಗೆ ಹೋಗಿದ್ದ ನನ್ನ ಮಗನನ್ನು ಗಂಧರ್ವರು ಜಯಿಸಿ ಹಿಂಗಟ್ಟು ಕಟ್ಟಿದಾಗ, ಅರ್ಜುನನೇ ಬಂದು ಆ ಗಂಧರ್ವರನ್ನು ಜಯಿಸಿ ನನ್ನ ಮಗನನ್ನು ಬಿಡಿಸಿದನೆಂದೂ, ನನ್ನ ಮಕ್ಕಳು ಆಗಲೂ ಕರ್ಣನ ದುರ್ಬೋಧನೆಯಲ್ಲಿಯೇ ಪ್ರವರ್ತಿಸುತ್ತಿದ್ದರೆಂದೂ ಯಾವಾಗ ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಯಮಧರ್ಮರಾಜನು ಯಕ್ಷರೂಪದಿಂದ ಬಂದು ಧರ್ಮರಾಜನನ್ನು ಕೇಳಿದ ಕೆಲವು ಪ್ರಶ್ನೆಗಳಿಗೆ ಆತನು ಸಮಂಜಸವಾದ ಉತ್ತರವನ್ನು ಹೇಳಿದನೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಪಾಂಡವರು ದ್ರೌಪದಿಯೊಡನೆ ವೇಷಾಂತರವನ್ನು ಧರಿಸಿ ವಿರಾಟನಗರದಲ್ಲಿದ್ದಾಗ, ನನ್ನ ಮಕ್ಕಳು ಅವರನ್ನು ಕಂಡುಹಿಡಿಯಲಾರದೆಹೋದರೆಂದು ಯಾವಾಗ ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಆ ವಿರಾಟನಗರದಲ್ಲಿ ಭೀಮಸೇನನು ದ್ರೌಪದಿಯ ಮನಸ್ತೃಪ್ತಿಗಾಗಿ, ಕೀಚಕನನ್ನೂ, ಅವನ ನೂರುಮಂದಿ ತಮ್ಮಂದಿರನ್ನೂ ಯಾರಿಗೂ ತಿಳಿಯದಂತೆ ಕೊಂದನೆಂಬ ವೃತ್ತಾಂತವನ್ನು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಅರ್ಜುನನು ವಿರಾಟರಾಜ್ಯದಲ್ಲಿದ್ದಾಗ, ತಾನೊಬ್ಬನೇ ರಥಿಕನಾಗಿ ನಿಂತು, ಅಲ್ಲಿ ಗೋಗ್ರಹಣಕ್ಕಾಗಿ ಹೋದ ನಮ್ಮ ಕಡೆಯುವರೆಲ್ಲರನ್ನೂ ಜಯಿಸಿ ಓಡಿಸಿದನೆಂದು ಯಾವಾಗ ಕೇಳಿದೆನೋ ಆಗಲೇ ನನಗೆ ಜಯಯದಾಸೆಯು ಬಿಟ್ಟುಹೋಯಿತು. ಮತ್ಸ್ಯರಾಜ್ಯ

ನಾದ ವಿರಾಟನು ತನ್ನ ಪ್ರಿಯಪುತ್ರಿಯಾದ ಉತ್ತರೆಯನ್ನು ಅರ್ಜುನನಿಗೆ ಕೊಡುವುದಾಗಿ ಹೇಳಿದಮೇಲೆ, ಆ ಅರ್ಜುನನು ಆಕೆಯನ್ನು ತನ್ನ ಮಗ ನಾದ ಅಭಿಮನ್ಯುವಿಗೆ ವಿವಾಹಮಾಡಿದನೆಂದು ನಾನು ಕೇಳಿದಾಗಲೇ ನನಗೆ ಜಯದಮೇಲಿನ ಆಸೆಯು ಬಿಟ್ಟುಹೋಯಿತು. ದ್ಯೂತದಲ್ಲಿ ಸೋತು, ರಾಜ್ಯಭ್ರಷ್ಟನಾಗಿ, ಸ್ವಜನರನ್ನೆಲ್ಲಾ ಅಗಲಿ, ಕಾಡಿನಲ್ಲಿ ನಿರ್ಧನ ನಾಗಿ ಅಲೆಯುತ್ತಿದ್ದಾಗಲೂ ಯುಧಿಷ್ಠಿರನಿಗೆ ಏಳು ಅಕ್ಷೌಹಿಣೀ ಸೇನೆಗಳು ಬೆಂಬಲವಾಗಿ ಬಂದುವೆಂದು ಕೇಳಿದಾಗಲೇ ನನಗೆ ನಮ್ಮ ಜಯದಲ್ಲಿ ಆಸೆ ಯು ಬಿಟ್ಟುಹೋಯಿತು. ಈ ಭೂಮಂಡಲವೆಲ್ಲವನ್ನೂ ಯಾವನು ಒಂದೇ ಹೆಜ್ಜೆಯಲ್ಲಿ ಅಳೆದುದಾಗಿ ಹೇಳುವರೋ, ಅಂತಹ ಮಹಾತ್ಮನಾದ ಶ್ರಿಯಃಪತಿಯೇ ಸರ್ವವಿಧದಿಂದಲೂ ಆ ಪಾಂಡವರ ಕಾರ್ಯಗಳನ್ನು ತನ್ನದೆಂದೇ ಭಾವಿಸಿ ನಡೆಸುತ್ತಿರುವುದಾಗಿ ಯಾವಾಗ ನನ್ನ ಕಿವಿಗೆ ಬಿದ್ದಿ ತೋ, ಆಗಲೇ ನನ್ನ ಜಯದಾಸೆಯು ತಪ್ಪಿಹೋಯಿತು. ಆ ಕೃಷ್ಣಾ ರ್ಜುನರಿಬ್ಬರೂ ಸಾಕ್ಷಾನ್ನರನಾರಾಯಣರೆಂದೂ, ಅವರನ್ನು ತಾನು ಸಾ ಕ್ಷಾತ್ತಾಗಿ ಬಹ್ಮಲೋಕದಲ್ಲಿ ನೋಡಿಬಂದೆನೆಂದೂ, ನಾನು ನಾರದನ ಮುಖದಿಂದ ಯಾವಾಗ ಕೇಳಿದೆನೋ, ಆಗಲೇ ನನಗೆ ನನ್ನ ಮಕ್ಕಳು ಅವ ರನ್ನು ಜಯಿಸುವರೆಂಬ ಆಸೆಯು ಬಿಟ್ಟುಹೋಯಿತು. ಶ್ರೀಕೃಷ್ಣನು ಲೋಕಹಿತಾರ್ಥವಾಗಿ ಪಾಂಡವಕೌರವರಿಬ್ಬರಿಗೂ ಸಂಧಿಯನ್ನು ಮಾಡ ಬೇಕೆಂದುದ್ದೇಶಿಸಿ, ಆ ಕಾರ್ಯಕ್ಕೆ ತಾನೇ ರಾಯಭಾರಿಯಾಗಿ ದುರ್ಯೋ ಧನನ ಬಳಿಗೆ ಬಂದಾಗಲೂ, ನನ್ನ ಮಗನ ಮೂರ್ಖಸ್ವಭಾವದಿಂದ ಅವನ ಪ್ರಯತ್ನವು ಕೈಗೂಡಲಿಲ್ಲವೆಂದು ನಾನು ಯಾವಾಗ ಕೇಳಿದೆನೋ ಆಗಲೇ ನನಗೆ ನಮ್ಮ ಜಯದಾಸೆಯು ಬಿಟ್ಟುಹೋಯಿತು. ಕೃಷ್ಣನು ಸಂಧಿಗಾಗಿ ಬಂದಾಗ ಕರ್ಣದುರ್ಯೋಧನರಿಬ್ಬರೂ, ಅವನನ್ನು ಕಟ್ಟಬೇಕೆಂದು ಪ್ರಯ ತ್ನಿಸಿದುದೂ, ಆಗ ಕೃಷ್ಣನು ವಿಶ್ವರೂಪವನ್ನು ತೋರಿಸಿದುದೂ ನನ್ನ ಕಿವಿಗೆ ಯಾವಾಗ ಬಿದ್ದಿತೋ, ಆಗಲೇ ನನಗೆ ನಮ್ಮ ಜಯದಾಸೆಯು ಬಿಟ್ಟುಹೋಯಿತು. ವಾಸುದೇವನು ಅಲ್ಲಿಂದ ಪ್ರಯಾಣಮಾಡಿ ಹೊರಟು ಬರುವಾಗ, ಕುಂತೀದೇವಿಯೊಬ್ಬಳೇ ಏಕಾಂತವಾಗಿ ಬಂದು, ಆ ಕೃಷ್ಣನ ರಥವನ್ನು ಅಡ್ಡಗಟ್ಟಿ ನಿಂತು, ತನ್ನ ದುಃಖಗಳನ್ನೆಲ್ಲಾ ಆತನಿಗೆ ತಿಳಿಸಿದ

ಳೆಂದೂ, ಆಗ ಕೃಷ್ಣನು ಅವಳನ್ನು ಸಮಾಧಾನಪಡಿಸಿ ಅಭಯಪ್ರಧಾನ ಮಾಡಿದನೆಂದೂ ಯಾವಾಗ ನಾನು ಕೇಳಿದೆನೋ, ಆಗಲೇ ನನಗೆ ನಮ್ಮ ಜಯದಾಸೆಯು ಬಿಟ್ಟುಹೋಯಿತು. ಶ್ರೀಕೃಷ್ಣನೇ ಪಾಂಡವರಿಗೆ ಮಂತ್ರಿಯಾಗಿರುವನೆಂದೂ, ಶಂತನುಪುತ್ರನಾದ ಭೀಷ್ಮನೂ, ಭರದ್ವಾಜಪುತ್ರನಾದ ದ್ರೋಣನೂ, ಆ ಪಾಂಡವರಿಗೆ ಶ್ರೇಯಃಕಾಂಕ್ಷಿಗಳಾಗಿ ಆಶೀರ್ವದಿಸಿದರೆಂದೂ ನನ್ನ ಕಿವಿಗೆ ಬಿದ್ದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಸಂಜಯಾ! ಕರ್ಣನು ಭೀಷ್ಮನಮೇಲೆ ಅಸೂಯೆಯನ್ನಿಟ್ಟು, 'ನೀನು ಯುದ್ಧಮಾಡುವವರೆಗೆ ನಾನು ಶಸ್ತ್ರವನ್ನು ಹಿಡಿದು ಬರುವವನಲ್ಲ' ವೆಂದು ಹೇಳಿ, ತನ್ನ ಸೇನೆಗಳನ್ನು ಹಿಂತಿರುಗಿಸಿದುದಾಗಿ ಯಾವಾಗ ಕೇಳಿದೆನೋ, ಆಗಲೇ ನಾನು ನಮ್ಮ ಜಯದಾಸೆಯನ್ನು ಬಿಟ್ಟುಬಿಟ್ಟೆನು. ಮಹಾಮಹಿಮೆಯುಳ್ಳ ಶ್ರೀಕೃಷ್ಣನೂ, ಪ್ರಸಿದ್ಧನಾದ ಅರ್ಜುನನೂ, ಅವನ ಗಾಂಡೀವಧನುಸ್ಸೂ ಏಕೀಭವಿಸಿ ನಮಗೆ ವಿರುದ್ಧವಾಗಿ ನಿಂತಿರುವುದನ್ನು ಕೇಳಿದಾಗಲೇ, ನಾನು ನಮಗೆ ಜಯವುಂಟಾಗುವುದೆಂಬ ಆಸೆಯನ್ನು ತೊರೆದುಬಿಟ್ಟೆನು. ಅರ್ಜುನನು ಯುದ್ಧಸನ್ನದ್ಧನಾಗಿ ರಥದಲ್ಲಿ ಕುಳಿತು ಬಂದಮೇಲೆಯೂ, ಮೋಹಕಳಂಕದಿಂದ ತನ್ನ ಜ್ಞಾತಿಗಳಮೇಲೆ ಶಸ್ತ್ರವನ್ನೆತ್ತಲಾರದೆ, ರಥದಲ್ಲಿ ಸುಮ್ಮನೆ ಕುಳಿತುಬಿಟ್ಟಾಗ, ಕೃಷ್ಣನು ಅವನ ಮೋಹವನ್ನು ನೀಗಿಸುವುದಕ್ಕಾಗಿ ತನ್ನ ಶರೀರದಲ್ಲಿಯೇ ಸಮಸ್ತ ವಿಶ್ವಗಳನ್ನೂ ತೋರಿಸಿದುದಾಗಿ ಯಾವಾಗ ಕೇಳಿದೆನೋ, ಆಗಲೇ ನಾನು ಜಯದಾಸೆಯನ್ನು ಬಿಟ್ಟುಬಿಟ್ಟೆನು. ಭೀಷ್ಮನು ಯುದ್ಧರಂಗದಲ್ಲಿ ತನ್ನ ಪರಾಕ್ರಮದಿಂದ ಅನೇಕ ರಥಿಕರನ್ನು ಕೊಂದರೂ, ಪಾಂಡವರಲ್ಲಿ ಪ್ರಸಿದ್ಧನಾದವನೊಬ್ಬನಾದರೂ ಅವನಿಂದ ಹತನಾಗಲಿಲ್ಲವೆಂಬುದನ್ನು ಕೇಳಿದಾಗಲೇ ನನಗೆ ಜಯದಾಸೆಯು ತಪ್ಪಿಹೋಯಿತು. ಧರ್ಮಪಕ್ಷಪಾತಿಯಾದ ಭೀಷ್ಮನು ಪಾಂಡವರಲ್ಲಿರುವ ಪ್ರೇಮದಿಂದ ತನ್ನ ಮರಣಕ್ಕೆ ತಾನೇ ದಾರಿಯನ್ನು ಹೇಳಿಕೊಟ್ಟು, ಅವರಿಗೆ ಉತ್ಸಾಹವನ್ನು ಹುಟ್ಟಿಸಿದನೆಂಬ ಮಾತನ್ನು ಕೇಳಿದಾಗಲೇ ನನಗೆ ಜಯದಾಸೆಯು ತಪ್ಪಿಹೋಯಿತು. ಅರ್ಜುನನು ಶಿಖಂಡಿಯನ್ನು ಮುಂದಿಟ್ಟುಕೊಂಡು ಶೂರಾಗ್ರೇಸರನಾದ ಆ ಭೀಷ್ಮನನ್ನು ವಧಿಸಿದುದಾಗಿ ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟು

ಹೋಯಿತು. ವೃದ್ಧನಾಗಿಯೂ, ವೀರನಾಗಿಯೂ ಇದ್ದ ಆ ಭೀಷ್ಮನು, ಸೋಮಕರಲ್ಲಿ ಸ್ವಲ್ಪಮಂದಿ ಮಾತ್ರವೇ ಉಳಿಯುವಂತೆ ಅವರೆಲ್ಲರನ್ನೂ ಕೊಂದು, ಬೇರೆ ಯಾವ ಪ್ರಸಿದ್ಧವೀರರನ್ನೂ ಕೊಲ್ಲದೆ, ಅರ್ಜುನನ ಬಾಣಗಳಿಂದ ಪ್ರಹರಿಸಲ್ಪಟ್ಟು, ಶರತಲ್ಪದಲ್ಲಿ ಮಲಗಿದನೆಂದು ಕೇಳಿದಾಗಲೇ ನನಗೆ ಜಯದಾಸೆಯು ಹೋಯಿತು. ಆ ಭೀಷ್ಮನು ಶರತಲ್ಪದಲ್ಲಿ ಮಲಗಿದ್ದಾಗ ದಾಹಶಾಂತಿಗಾಗಿ ತನಗೆ ನೀರು ಬೇಕೆಂದು ಕೇಳಲು, ಆತನು ಮಲಗಿದ್ದ ಕಡೆಯಲ್ಲಿಯೇ ಅರ್ಜುನನು ತನ್ನ ಬಾಣಗಳಿಂದ ಭೂಮಿಯನ್ನು ಭೇದಿಸಿ, ನೀರನ್ನು ತರಿಸಿ ಆತನಿಗೆ ದಾಹಶಾಂತಿಯನ್ನುಂಟುಮಾಡಿದನೆಂದು ಯಾವಾಗ ಕೇಳಿದೆನೋ, ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಶುಕ್ರನೂ, ಸೂರ್ಯನೂ ಪಾಂಡವರ ಜಯಕ್ಕಾಗಿ ಅನುಕೂಲಗತಿಯಿಂದ ಸೇರಿದ್ದುದನ್ನೂ, ನಮ್ಮನ್ನು ಕಂಡಾಗಲೆಲ್ಲಾ ದುಷ್ಟಮೃಗಗಳು ಭಯಂಕರವಾಗಿ ಕೂಗುತಿದ್ದುದನ್ನೂ ನಾನು ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು.

ದ್ರೋಣನು ಯುದ್ಧದಲ್ಲಿ ಲೋಕಾದ್ಭುತ ವೀರ್ಯವುಳ್ಳವನಾಗಿದ್ದರೂ, ಅಸ್ತ್ರವಿದ್ಯೆಗಳಿಗೆಲ್ಲಾ ತಾನೇ ಆಚಾರ್ಯನಾಗಿದ್ದರೂ, ಪಾಂಡವರನ್ನು ಜಯಿಲಾರದೆ ಹೋದನೆಂದು ಕೇಳಿದಾಗಲೇ ನಾನು ಜಯದಾಸೆಯನ್ನು ಬಿಟ್ಟುಬಿಟ್ಟೆನು. ದ್ರೋಣಯುದ್ಧದಲ್ಲಿ ನಮ್ಮ ಪಕ್ಷಕ್ಕೆ ಸೇರಿದ್ದ ಮಹಾರಥರಾದ ಸಂಶಪ್ತಕರು ಅರ್ಜುನನನ್ನು ಕೊಂದೇ ಬರಬೇಕೆಂಬ ದೃಢಪ್ರತಿಜ್ಞೆಯಿಂದ ಹೊರಟಿದ್ದಾಗಲೂ, ಅವರೇ ಅರ್ಜುನನಿಂದ ಹತರಾದರೆಂದು ಯಾವಾಗ ಕೇಳಿದೆನೋ ಅಗಲೇ ನನ್ನ ಜಯದಾಸೆಯು ಬಿಟ್ಟುಹೋಯಿತು. ದ್ರೋಣನು ಎಂತವರಿಗೂ ದುರ್ಭೇದ್ಯವಾದ ಪದ್ಮವ್ಯೂಹವನ್ನು ಮಾಡಿ, ತಾನೇ ಶಸ್ತ್ರಧಾರಿಯಾಗಿ ಅದನ್ನು ಕಾಯುತ್ತಿದ್ದಾಗಲೂ, ಸುಭದ್ರಾಪುತ್ರನಾದ ಅಭಿಮನ್ಯುವೆಂಬ ಬಾಲಕನು, ತಾನೊಬ್ಬನೇ ಅದನ್ನು ಭೇದಿಸಿಕೊಂಡು ಹೋದನೆಂದು ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ನಮ್ಮವರೆಲ್ಲರೂ ಮಹಾರಥರೆನಿಸಿಕೊಂಡಿದ್ದರೂ, ಅರ್ಜುನನಮೇಲೆ ಪರಾಕ್ರಮವನ್ನು ತೋರಿಸಲಾರದೆ,

ಬಾಲನಾದ ಅಭಿಮನ್ಯುವನ್ನು ಸುತ್ತಿಮುತ್ತಿ ಎಲ್ಲರೂ ಒಂದಾಗಿ ಸೇರಿ ಅವನನ್ನು ಕೊಂದರೆಂದೂ, ಇಷ್ಟುಮಾತ್ರಕ್ಕೇ ನಮ್ಮವರೆಲ್ಲರೂ ಸಂತೋಷದಿಂದ ಕೋಲಾಹಲವನ್ನು ಮಾಡುತ್ತಿದ್ದರೆಂದೂ ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಅಭಿಮನ್ಯುವಧಕ್ಕಾಗಿ ಮೂಢರಾದ ನಮ್ಮ ಮಕ್ಕಳೆಲ್ಲರೂ ಸಂತೋಷಕೋಲಾಹಲಗಳನ್ನು ಮಾಡುತ್ತಿರುವಾಗ, ಸಿಂಧುರಾಜನಾದ ಜಯದ್ರಥನಮೇಲೆ ಕೋಪದಿಂದ ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ಕೇಳಿದಾಗಲೇ ನನಗೆ ಜಯದಾಸೆಯು ತಪ್ಪಿಹೋಯಿತು. ಅರ್ಜುನನು ಸೈಂಧವನನ್ನು ಕೊಲ್ಲುವುದಾಗಿ ಮಾಡಿದ ಪ್ರತಿಜ್ಞೆಯನ್ನು ಕೇಳಿ ಶತ್ರುರಾಜರೆಲ್ಲರೂ ಸುತ್ತಿಮುತ್ತಿ ಅವನನ್ನು ಕಾಯುತಿದ್ದರೂ, ಅರ್ಜುನನು ತನ್ನ ಪ್ರತಿಜ್ಞೆಯನ್ನು ಸಾಧಿಸಿದನೆಂದು ಕೇಳಿದಾಗಲೇ ನನಗೆ ಜಯದಾಸೆಯು ತಪ್ಪಿಹೋಯಿತು. ಸಂಜಯಾ! ಅರ್ಜುನನ ರಥಾಶ್ವಗಳು ಬಹಳವಾಗಿ ಆಯಾಸಪಟ್ಟಿರುವುದನ್ನು ನೋಡಿ ಶ್ರೀಕೃಷ್ಣನು ಆ ಕುದುರೆಗಳನ್ನು ಬಿಚ್ಚಿ, ತಾನೇ ಅವುಗಳಿಗೆ ನೀರನ್ನು ಕುಡಿಸಿ, ತಿರುಗಿ ಅವುಗಳನ್ನು ತಂದು ರಥಕ್ಕೆ ಕಟ್ಟಿ, ಯುದ್ಧಕ್ಕೆ ಹೋದನೆಂದು ಕೇಳಿದಾಗಲೇ ನನಗೆ ಜಯದಮೇಲಣ ಆಸೆಯು ಹೋಯಿತು. ಅರ್ಜುನನ ರಥಾಶ್ವಗಳು ಬಹಳವಾಗಿ ಬಳಲಿ ರಥವನ್ನೆಳೆಯಲಾರದೆ ನಿಂತುಹೋದಾಗ, ಇದೇ ಸಮಯವೆಂದು ನಮ್ಮವರೆಲ್ಲರೂ ಅರ್ಜುನನಮೇಲೆ ಬೀಳಲು, ಆಗಲೂ ಅವನು ರಥದಲ್ಲಿ ಕುಳಿತಂತೆಯೇ ಅವರೆಲ್ಲರನ್ನೂ ಸಮೀಪಕ್ಕೆ ಹೊದ್ದಿಸದೆ ನಿವಾರಿಸಿದನೆಂದು ಕೇಳಿದಾಗಲೇ ನನಗೆ ಜಯದಾಸೆಯು ತಪ್ಪಿಹೋಯಿತು. ಗಜಸೈನ್ಯದ ಪ್ರಾಬಲ್ಯದಿಂದ ದ್ರೋಣನ ಸೈನ್ಯವು ಎಂಥವರಿಗೂ ದುಸ್ಸಾಧ್ಯವಾಗಿದ್ದರೂ, ಸಾತ್ಯಕಿಯು ಆ ಸೈನ್ಯವನ್ನು ದಾಟಿ, ಅದರಲ್ಲಿ ಕೃಷ್ಣಾರ್ಜುನರಿದ್ದ ಸ್ಥಳವನ್ನು ಕಂಡುಹಿಡಿದು, ಅವರೊಡನೆ ಸೇರಿಕೊಂಡನೆಂದು ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ವೀರನಾದ ಭೀಮಸೇನನು ಕರ್ಣನ ಕೈಗೆ ಸಿಕ್ಕಿಬಿದ್ದಿದ್ದಾಗಲೂ, ಕರ್ಣನು ಅವನನ್ನು ಕೊಲ್ಲದೆ, ತನ್ನ ಬಿಲ್ಲಿನ ತುದಿಯಿಂದ ಅವನನ್ನು ಹೊಡೆದು, ಮಾತಿನಿಂದಮಾತ್ರ ಹಿಯ್ಯಾಳಿಸಿ ಬಿಟ್ಟುಬಿಟ್ಟನೆಂದು ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ದ್ರೋಣ, ಕೃತವರ್ಮ,

ಕೃಪ, ಕರ್ಣ, ಅಶ್ವತ್ಥಾಮ, ಶಲ್ಯರೆಂಬ ಇಷ್ಟುಮಂದಿ ಮಹಾರಥರಿದ್ದೂ, ಅರ್ಜುನನು ಸೈಂಧವನನ್ನು ಕೊಂದಾಗ ಅವರು ಸುಮ್ಮನೆ ನೋಡುತಿದ್ದ ರೆಂದು ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ದೇವೇಂ ದ್ರನು ಕರ್ಣನಿಗೆ ಕೊಟ್ಟ ದಿವ್ಯಶಕ್ತಿಯನ್ನು ಆತನು ಅರ್ಜುನನಮೇಲೆ ಪ್ರಯೋಗಿಸಬೇಕೆಂದು ಇಟ್ಟಿದ್ದಾಗ, ಶ್ರೀಕೃಷ್ಣನು ಅದನ್ನು ಘಟೋತ್ಕಚನ ಮೇಲೆ ಪ್ರಯೋಗಿಸುವಂತೆ ತಂತ್ರಮಾಡಿದನೆಂದು ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಕರ್ಣ ಘಟೋತ್ಕಚರಿಬ್ಬರೂ ಹೋರಾ ಡುತ್ತಿರುವಾಗ, ಕರ್ಣನು ಅರ್ಜುನನಮೇಲೆ ಪ್ರಯೋಗಿಸಬೇಕೆಂದು ಇಟ್ಟಿ ದ್ದ ಆ ಶಕ್ತಿಯನ್ನು ಘಟೋತ್ಕಚನಮೇಲೆ ಬಿಟ್ಟು ವ್ಯರ್ಥಮಾಡಿಸಿದ ನೆಂದು ಕೇಳಿದಾಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ದ್ರೋ ಣಾಚಾರ್ಯನು ಪುತ್ರಶೋಕದಿಂದ ತಾನೊಬ್ಬನೇ ರಥದಲ್ಲಿ ಪ್ರಾಯೋಪ ವಿಷ್ಟನಾಗಿ ಕುಳಿತಿದ್ದಾಗ, ದೃಷ್ಟದ್ಯುಮ್ನನು ಧರ್ಮವನ್ನು ವಿಚಾರಿ ಆತ ನನ್ನು ಕೊಂದನೆಂಬ ವಾರ್ತೆಯನ್ನು ಕೇಳಿದಾಗಲೇ ನನಗೆ ಜಯದಾಸೆಯು ತಪ್ಪಿಹೋಯಿತು. ಮಾದ್ರೀಪುತ್ರನಾದ ನಕುಲನು ಮಹಾವೀರನಾದ ಅಶ್ವತ್ಥಾಮನಿಗೆ ಇದಿರಾಗಿ, ಸೈನ್ಯದ ನಡುವೆ ಅವನಿಗೆ ಸಮಾನವಾದ ಮಂಡಲಗತಿಯಿಂದ ತಿರುಗುತಿದ್ದನೆಂದು ಕೇಳಿದಾಗಲೇ ನನಗೆ ಜಯ ದಾಸೆಯು ಬಿಟ್ಟುಹೋಯಿತು. ದ್ರೋಣನು ಹತನಾದಮೇಲೆ, ಅವನ ಮಗನಾದ ಅಶ್ವತ್ಥಾಮನು ಮಹಾಕೋಪದಿಂದ ನಾರಾಯಣಾಸ್ತ್ರವನ್ನು (ಕೈತಪ್ಪಿ) ಪ್ರಯೋಗಿಸಿಯೂ, ಪಾಂಡವರನ್ನು ಅದರಿಂದ ನಿಗ್ರಹಿಸಲಾರದೆ ಹೋದನೆಂದು ಕೇಳಿದಾಗಲೇ ನನಗೆ ನಮ್ಮವರು ಜಯಿಸುವರೆಂಬ ಆಸೆ ಯು ಬಿಟ್ಟುಹೋಯಿತು. ಭೀಮಸೇನನು ಯುದ್ಧದಲ್ಲಿ ದುಶ್ಶಾಸನನ ರಕ್ತವನ್ನು ಹೀರಿದನೆಂದೂ, ಆಗ ನನ್ನ ಮಕ್ಕಳಲ್ಲಿ ಯಾವನೊಬ್ಬನೂ ಅದ ನ್ನು ನಿವಾರಿಸಲಾರದೆ ಹೋದನೆಂದೂ ಯಾವಾಗ ನಾನು ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ದೇವಸಮಾನರಾದ ಆ ಪಾಂಡವಸಹೋದರರೊಡನೆ ಯುದ್ಧಮಾಡುವಾಗ, ಕರ್ಣನು ಮಹಾ ಶೂರನಾಗಿ, ಎಂತವರಿಗೂ ದುರ್ಜಯನೆನಿಸಿಕೊಂಡಿದ್ದರೂ, ಅರ್ಜುನನಿಂದ ಹತನಾದನೆಂದು ನಾನು ಕೇಳಿದಾಗಲೇ ನನಗೆ ನಮ್ಮವರ ಜಯದಾಸೆಯು

ಬಿಟ್ಟುಹೋಯಿತು. ಧರ್ಮರಾಜನು ಶೂರನಾದ ಅಶ್ವತ್ಥಾಮನನ್ನೂ, ಶತ್ರುದುರ್ದಮನಾದ ಕೃತವರ್ಮನನ್ನೂ ಯುದ್ಧದಲ್ಲಿ ಜಯಿಸಿಬಿಟ್ಟನೆಂದು ಯಾವಾಗ ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಯಾವಾಗಲೂ ಯುದ್ಧದಲ್ಲಿ ಕೃಷ್ಣನೊಡನೆ ಸ್ಪರ್ಧಿಸುತ್ತಿದ್ದ ಶಲ್ಯರಾಜನನ್ನು ಧರ್ಮರಾಜನು ವಧಿಸಿಬಿಟ್ಟನೆಂದು ಕೇಳಿದಾಗಲೇ ನನಗೆ ನಮ್ಮ ಜಯದಾಸೆಯು ಬಿಟ್ಟುಹೋಯಿತು. ಕೌರವಪಾಂಡವರಲ್ಲಿ ಕಲಹಕ್ಕೂ, ಕಪಟದ್ಯೂತಕ್ಕೂ ಮೂಲಕಾರಣನಾದ, ಮತ್ತು ಮಾಯಾಬಲವುಳ್ಳ ಪಾಪಿಯಾದ ಶಕುನಿಯನ್ನು ಸಹದೇವನು ಯುದ್ಧದಲ್ಲಿ ಕೊಂದುದಾಗಿ ಯಾವಾಗ ನನ್ನ ಕಿವಿಗೆ ಬಿದ್ದಿತೋ, ಆಗಲೇ ನನಗೆ ನಮ್ಮ ಜಯದಲ್ಲಿ ಆಸೆಯು ಬಿಟ್ಟುಹೋಯಿತು. ಮಹಾಶೂರನಾದ ನನ್ನ ಮಗನು ವಿರಥನಾಗಿ, ಶಕ್ತಿಗುಂದಿ, ಬಹಳವಾಗಿ ಬಳಲಿ, ಮುಂದೆ ಯುದ್ಧಮಾಡಲಾರದೆ ಏಕಾಕಿಯಾಗಿ ಹೊರಟು, ತನ್ನ ಜಲಸ್ತಂಭನವಿದ್ಯೆಯಿಂದ ಒಂದು ಮಡುವಿನಲ್ಲಿ ಮುಳುಗಿದುದಾಗಿ ಯಾವಾಗ ಕೇಳಿದೆನೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಪಾಂಡವರೆಲ್ಲರೂ ಶ್ರೀಕೃಷ್ಣನೊಡನೆ ಆ ಮಡುವಿಗೆ ಹೋಗಿ, ಅದರ ತೀರದಲ್ಲಿ ನಿಂತು, ಸ್ವಲ್ಪಮಾತ್ರವೂ ನಿಂದಾವಾಕ್ಯವನ್ನು ಸಹಿಸಲಾರದ ನನ್ನ ಮಗನನ್ನು ಬಾಯಿಗೆ ಬಂದಹಾಗೆ ಬೈಯುತಿದ್ದರೆಂದು ನಾನು ಕೇಳಿದಾಗಲೇ ನನಗೆ ನಮ್ಮ ಜಯದಾಸೆಯು ತಪ್ಪಿಹೋಯಿತು. ಭೀಮದುರ್ಯೋಧನರಿಗೆ ಗದಾಯುದ್ಧವು ಆರಂಭಿಸಿ, ನನ್ನ ಮಗನು ಅದರಲ್ಲಿ ಚಿತ್ರಗಳಾದ ಮಂಡಲಗತಿಗಳಿಂದ ತಿರುಗುತ್ತಿರುವಾಗ, ಶ್ರೀಕೃಷ್ಣನು ತೋರಿಸಿದ ತಂತ್ರಗಳಿಂದ ಭೀಮನು ಅಧರ್ಮರೀತಿಯಲ್ಲಿ ನನ್ನ ಮಗನನ್ನು ಹೊಡೆದನೆಂದು ಯಾವಾಗ ಕೇಳಿದೆನೋ, ಆಗ ನನಗೆ ಜಯದಾಸೆಯು ಪೂರ್ಣವಾಗಿ ಬಿಟ್ಟುಹೋಯಿತು. ಪಾಂಚಾಲರೂ, ದ್ರೌಪದಿಯ ಮಕ್ಕಳಾದ ಉಪಪಾಂಡವರೂ ಶಿಬಿರದಲ್ಲಿ ಮಲಗಿರುವಾಗ, ಅಶ್ವತ್ಥಾಮ ಮೊದಲಾದವರು ಅವರನ್ನು ಕೊಂದು, ಅಸಹ್ಯವೂ, ಘೋರವೂ ಆದ ಅಕೃತ್ಯವನ್ನು ನಡೆಸಿದರೆಂದು ಕೇಳಿದಾಗಲೇ ನನಗೆ ನಮ್ಮ ಜಯದಮೇಲಣ ಆಸೆಯು ಬಿಟ್ಟುಹೋಯಿತು. ಅನಂತರ ಭೀಮಸೇನನು ಕೋಪದಿಂದ ಬೆನ್ನಟ್ಟಿಬರುವಾಗ, ಅಶ್ವತ್ಥಾಮನು ಐಷೀಕ

ವೆಂಬ ಮಹಾಸ್ತ್ರವನ್ನು ಪ್ರಯೋಗಿಸಿ, ಉತ್ತರೆಯ ಗರ್ಭವನ್ನು ದಹಿಸುವುದಕ್ಕೆ ಯತ್ನಿಸಿದರೂ ಅದು ದಗ್ಧವಾಗಲಿಲ್ಲವೆಂದು ಕೇಳಿದಾಗಲೇ ನನಗೆ ನಮ್ಮ ಜಯದಾಸೆಯು ಬಿಟ್ಟುಹೋಯಿತು. ಆಮೇಲೆ ಅರ್ಜುನನು ಅಶ್ವತ್ಥಾಮನು ಪ್ರಯೋಗಿಸಿದ್ದ ಬ್ರಹ್ಮಶಿರೋಸ್ತ್ರವನ್ನು ಅಡಗಿಸುವುದಕ್ಕಾಗಿ "ಶುಭವಾಗಲಿ" ಎಂದು ಹೇಳಿ, ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದುದೂ, ಅಶ್ವತ್ಥಾಮನು ಅದಕ್ಕೆ ಭಯಪಟ್ಟು ಪಲಾಯನಮಾಡುತ್ತ, ತನ್ನ ತಲೆಯಲ್ಲಿದ್ದ ಮಣಿಯನ್ನು ಕೊಟ್ಟುದೂ ನನ್ನ ಕಿವಿಗೆ ಯಾವಾಗ ಬಿದ್ದಿತೋ ಆಗಲೇ ನನಗೆ ಜಯದಾಸೆಯು ಬಿಟ್ಟುಹೋಯಿತು. ಅಶ್ವತ್ಥಾಮನ ಮಹಾಸ್ತ್ರದಿಂದ ಉತ್ತರೆಯ ಗರ್ಭವು ದಗ್ಧವಾಗುವ ಸಂದರ್ಭದಲ್ಲಿ, ಶ್ರೀಕೃಷ್ಣನು ಅದನ್ನು ಬದುಕಿಸುವುದಾಗಿ ಪ್ರತಿಜ್ಞೆಮಾಡಿದನೆಂದು ಕೇಳಿದಾಗಲೇ ನನಗೆ ಜಯದಾಸೆಯು ತಪ್ಪಿಹೋಯಿತು. ಸಂಜಯಾ! ವ್ಯಾಸಮುನಿಯೂ, ಶ್ರೀಕೃಷ್ಣನೂ, ಇವರಿಬ್ಬರೂ ಅಶ್ವತ್ಥಾಮನ ಕ್ರೂರಕಾರ್ಯಕ್ಕಾಗಿ ಅವನನ್ನು ಶಪಿಸಿದರೆಂದು ಕೇಳಿದೆನು. ಇವೆಲ್ಲವನ್ನೂ ನಾನು ತಿಳಿದಿದ್ದರೂ ಬುದ್ಧಿಯಿಲ್ಲದೆ ನನ್ನ ಪುತ್ರರನ್ನೂ, ಪೌತ್ರರನ್ನೂ ಕಳೆದುಕೊಂಡು, ಅದಕ್ಕಾಗಿ ಈಗ ಪರಿತಪಿಸುತ್ತಿರುವೆನು. ಅಕಟಾ! ನನ್ನ ಪತ್ನಿಯಾದ ಗಾಂಧಾರಿಯು, ತನ್ನ ಮಕ್ಕಳನ್ನೂ, ಮೊಮ್ಮಕ್ಕಳನ್ನೂ, ಪಿತೃಕುಲದವರನ್ನೂ, ಸಹೋದರರನ್ನೂ ಕಳೆದುಕೊಂಡು ದುಃಖಿಸುತ್ತಿರುವಳು. ಇತರ ಸ್ತ್ರೀಯರೆಲ್ಲ ವಿಧವೆಯರಾಗಿ ದುಃಖಿಸುತ್ತಿರುವರು. ಇವರ ಸ್ಥಿತಿಯನ್ನು ಕಂಡು ನಾನು ಹೇಗೆ ಸಹಿಸಬಲ್ಲೆನು? ಪಾಂಡವರೋ ಅತಿದುಷ್ಕರವಾದ ಕಾರ್ಯಗಳನ್ನು ಮಾಡಿ ಜಯಹೊಂದಿದರು. ನಿಷ್ಕಂಟಕವಾದ ರಾಜ್ಯವನ್ನು ಅನುಭವಿಸುವ ಭಾಗ್ಯವೂ ಅವರಿಗೆ ಲಭಿಸಿತು. ಆಹಾ! ಏನು ಕಷ್ಟವಿದು? ಲೋಕಭಯಂಕರವಾದ ಆ ಮಹಾಯುದ್ಧದಲ್ಲಿ ಈಗ ಹತ್ತುಮಂದಿ ಮಾತ್ರವೇ ಉಳಿದಿರುವರೆಂದು ಕೇಳಿದೆನು. ಆ ಹತ್ತು ಮಂದಿಯಲ್ಲಿ ಮೂವರುಮಾತ್ರ ನಮ್ಮ ಕಡೆಯವರು. ಉಳಿದ ಏಳು ಮಂದಿಯೂ ಪಾಂಡವರ ಪಕ್ಷದವರು. ಎರಡು ಕಡಿಮೆಯಾಗಿ ಇಪ್ಪತ್ತು (ಎಂದರೆ ಹದಿನೆಂಟು) ಅಕ್ಷೌಹಿಣೀ ಸೈನ್ಯಗಳು ಹತವಾದುವಲ್ಲಾ! ಓ ಸೂತಾ! ನನ್ನ ಸುತ್ತಲೂ ಕತ್ತಲೆ ಕವಿದಂತಿದೆ! ಮೋಹವು ನನ್ನನ್ನು

ಆವರಿಸುವಂತಿದೆ. ನನ್ನ ಮನಸ್ಸಿಗೆ ತಿಳಿವೇ ಇಲ್ಲದೆ ಬುದ್ಧಿಯು ತಡಬಡಿಸುತ್ತಿದೆ'' ಎಂದನು. ಹೀಗೆ ಧೃತರಾಷ್ಟ್ರನು ಮಹತ್ತಾದ ವ್ಯಸನದಿಂದ ವಿಲಪಿಸುತ್ತ, ಹಾಗೆಯೇ ಮೂರ್ಛೆಹೊಂದಿದನು. ಸಂಜಯನು ಅವನಿಗೆ ಶೈತ್ಯೋಪಚಾರಗಳನ್ನು ಮಾಡಿ ಸಮಾಧಾನಪಡಿಸಿದಮೇಲೆ, ಧೃತರಾಷ್ಟ್ರನು ಚೇತರಿಸಿಕೊಂಡು, ತಿರುಗಿ ಅವನನ್ನು ಕುರಿತು, '' ಸಂಜಯಾ ! ಇಂತಹ ಸ್ಥಿತಿಯಲ್ಲಿ ನಾನು ಈ ಪ್ರಾಣಗಳನ್ನಿಟ್ಟುಕೊಂಡು ಬದುಕಿರಬಹುದೆ? ಇನ್ನುಮೇಲೆ ನಾನು ಬದುಕಿದ್ದು ಪ್ರಯೋಜನವೇನೂ ಕಾಣಲಿಲ್ಲ'' ಎಂದು ಹೇಳಿ, ದೈನ್ಯದಿಂದ ವಿಲಪಿಸುತ್ತ, ಆಗಾಗ ಹಾವಿನಂತೆ ನಿಟ್ಟುಸಿರನ್ನು ಬಿಟ್ಟು, ಬುದ್ಧಿಭ್ರಮೆಯಿಂದ ಕಳವಳಿಸುತ್ತಿದ್ದನು. ಆಗ ಸಂಜಯನು, '' ಓ ರಾಜಾ ! ಉತ್ತಮರಾಜವಂಶಗಳಲ್ಲಿ ಜನಿಸಿ, ಬಹಳ ಗುಣಾಢ್ಯರಾಗಿ, ಬಲದಿಂದಲೂ, ಉತ್ಸಾಹದಿಂದಲೂ, ಕಾರ್ಯಸಾಧನೆಯನ್ನು ಮಾಡುತಿದ್ದ ಅನೇಕರಾಜರ ಚರಿತ್ರೆಗಳನ್ನು ಧೀಮಂತನಾದ ವ್ಯಾಸಮುನಿಯೂ, ನಾರದನೂ, ಆಗಾಗ ಹೇಳಿದುದನ್ನು ನೀನೂ ಕೇಳಿಬಲ್ಲೆ. ಆ ಪೂರ್ವರಾಜರಾದರೂ ಸಾಮಾನ್ಯರಲ್ಲ. ದಿವ್ಯಾಸ್ತ್ರಗಳನ್ನು ತಿಳಿದವರು. ದೇವೇಂದ್ರನಿಗೆ ಸಮಾನವಾದ ತೇಜಸ್ಸುಳ್ಳವರು. ಧರ್ಮದಿಂದಲೇ ಶತ್ರುಗಳನ್ನು ಜಯಿಸಿ,ಅನೇಕ ರಾಜ್ಯಗಳನ್ನು ಸಾಧಿಸಿ, ಉಚಿತ ದಕ್ಷಿಣೆಗಳಿಂದ ಯಜ್ಞಗಳನ್ನು ಮಾಡಿ, ವಿಸ್ತಾರವಾದ ಕೀರ್ತಿಯನ್ನು ಹರಡಿ, ಕೊನೆಗೆ ಕಾಲಾಧೀನರಾಗಿರುವರು. ಅವರಲ್ಲಿ ಕೆಲವರ ಹೆಸರನ್ನು ಈಗ ಜ್ಞಾಪಿಸುವೆನು ಕೇಳು. ಮಹಾರಥನಾದ ಶೈಬ್ಯನು, ಸೃಂಜಯನು, ಸುಹೋತ್ರನು, ರಂತೀದೇವನು, ಕಾಕ್ಷೀವಂತನು, ಹೀಗೆಯೇ ಬಾಹ್ಲೀಕ, ದಮನ, ಚೈದ್ಯ, ಶರ್ಯಾತಿ, ಅಜಿತ, ನಲ, ವಿಶ್ವಾಮಿತ್ರ, ಅಂಬರೀಷ, ಮರುತ್ತ, ಮನು, ಇಕ್ಷ್ವಾಕು, ಗಯ, ಭರತ, ರಘುರಾಮ, ಶತಬಿಂದು, ಭಗೀರಥ, ಕೃತವೀರ್ಯ, ಜನಮೇಜಯ, ಯಯಾತಿ, ಎಂಬಿವರೆಲ್ಲರೂ ಲೋಕಪ್ರಸಿದ್ಧರು. ಯಯಾತಿಯೆಂಬವನು ಬಹಳ ಪುಣ್ಯಶೀಲನು. ದೇವತೆಗಳೇ ತಾವಾಗಿ ಬಂದು ಇವನ ಯಾಗವನ್ನು ನಡೆಸಿದರು. ಅವನ ರಾಜ್ಯದಲ್ಲಿ ಕಾಡುಗಳು, ಊರುಗಳು ಇವೆಲ್ಲ ಈಗ ಯೂಪಸ್ತಂಭದ ಚಿಹ್ನಗಳಿಂದ ಶೋಭಿಸುತ್ತಿವೆ. ಮುನ್ನೊಮ್ಮೆ ದೇವರ್ಷಿಯಾದ ನಾರದನು, ಪುತ್ರಶೋಕ

ದಿಂದ ಮರುಗುತಿದ್ದ ಶ್ವೈತ್ಯನೆಂಬವನಿಗೆ ಮೇಲೆ ಹೇಳಿದ ಇಪ್ಪತ್ತು ನಾಲ್ಕು ರಾಜರ ಚರಿತ್ರವನ್ನೂ ಸವಿಸ್ತರವಾಗಿ ತಿಳಿಸಿರುವನು. ಈ ರಾಜರಿಗೆ ಮೊದಲು ಕೂಡ, ಇವರಿಗಿಂತಲೂ ಬಲಾಢ್ಯರಾಗಿ ಮಹಾರಥರೆನಿಸಿಕೊಂಡು, ಸರ್ವಗುಣಸಂಪನ್ನರಾಗಿದ್ದ ಅನೇಕರಾಜರು ರಾಜ್ಯವನ್ನು ಪಾಲಿಸಿ ಕಾಲಗತಿಯನ್ನು ಹೊಂದಿದರು. ಅವರಲ್ಲಿಯೂ ಕೆಲವರ ಹೆಸರನ್ನು ತಿಳಿಸುವೆನು ಕೇಳು. ಪುರು, ಕುರು, ಯದು, ಶೂರ, ವಿಷ್ವಗಶ್ವ, ಅಣುಹ, ಯವನಾಶ್ವ, ಕಕುತ್ಸ್ಥ, ರಘು, ವಿಜಯ, ವೀತಿಹೋತ್ರ, ಅಂಗ, ಭವ, ಶ್ವೇತ, ಬೃಹದ್ಗುರು, ಉಶೀನರ, ಶತರಥ, ಕಂಕ, ದುಲಿದುಹ, ದ್ರುಮ, ದಂಭೋದ್ಭವ, ವರ, ವೇನ, ಸಗರ, ಸಂಕೃತಿ, ನಿಮಿ, ಅಜೇಯ, ಪರಶು, ಪುಂಡ್ರ, ಶಂಭು, ದೇವಾವೃಥ, ದೇವಾಹ್ವಯ, ಸುಪ್ರತಿಮ, ಸುಪ್ರತೀಕ, ಬೃಹದ್ರಥ, ವಿನೀತಾತ್ಮ, ಸುಕ್ರತು, ನೈಷಧ, ನಲ, ಸತ್ಯವ್ರತ, ಶಾಂತಭಯ, ಸುಮಿತ್ರ, ಸುಬಲ, ಜಾನುಜಂಘ, ಅನರಣ್ಯಕ, ಅರ್ಕ, ಪ್ರಿಯಭೃತ್ಯ, ಶುಚಿವ್ರತ, ಬಲಬಂಧು, ನಿರಾಮರ್ದ, ಕೇತುಶೃಂಗ, ಬೃಹದ್ಬಲ, ಧೃಷ್ಟಕೇತು, ಬೃಹತ್ಕೇತು, ದೀಪ್ತಕೇತು, ನಿರಾಮಯ, ಅಭಿಕ್ಷಿತ್ತು, ಚಪಲ, ಧೂರ್ತ, ಕೃತಬಂಧು, ಪ್ರತ್ಯಂಗ, ಶ್ರುತಿ, ಎಂಬಿವರೇ ಮೊದಲಾಗಿ ಅನೇಕಮಂದಿ ರಾಜರು ರಾಜ್ಯವನ್ನಾಳುತಿದ್ದರು. ಹೀಗೆಯೇ ಈ ರಾಜವಂಶದವರ ಸಂಖ್ಯೆಯು ಹತ್ತುಕೋಟಿಗಳಿಗೆ ಮೇಲೆಯೇ ಇದ್ದುದಾಗಿ ಕೇಳಿಬಲ್ಲೆವು. ಈ ರಾಜರೆಲ್ಲರೂ, ಬುದ್ಧಿಯಲ್ಲಿಯೂ, ಬಲದಲ್ಲಿಯೂ ಬಹಳ ಪ್ರಸಿದ್ಧರು. ನಿನ್ನ ಮಕ್ಕಳಿಗಿಂತಲೂ ಎಷ್ಟೋ ವಿಧದಲ್ಲಿ ಮೇಲೆನಿಸಿದ್ದವರು. ಅಂತವರೂ ಕೂಡ, ತಾವು ಅನುಭವಿಸುತಿದ್ದ ಮಹಾಭೋಗಗಳೆಲ್ಲವನ್ನೂ ಬಿಟ್ಟು ಮೃತಿಹೊಂದಿದರೇಹೊರತು, ಯಾರೂ ಸ್ಥಿರವಾಗಿ ನಿಲ್ಲಲಿಲ್ಲ. ಇದಲ್ಲದೆ ಮಹಾಕವಿಗಳೂ, ವಿದ್ವಾಂಸರೂ ಯಾವ ರಾಜರ ದಿವ್ಯಕರ್ಮಗಳನ್ನೂ, ಪರಾಕ್ರಮಗಳನ್ನೂ, ತ್ಯಾಗವನ್ನೂ, ಮಹಿಮೆಯನ್ನೂ, ಅಸ್ತಿಕ್ಯ, ಸತ್ಯ, ಶೌಚ, ದಯೆ, ಋಜುತ್ವ, ಮೊದಲಾದ ಸದ್ಗುಣಗಳನ್ನೂ ಪುರಾಣರೂಪವಾಗಿ ರಚಿಸಿ, ಲೋಕದಲ್ಲಿ ಕೀರ್ತಿಸುತ್ತಿರುವರೋ, ಅಂತಹ ಸದ್ಗುಣಗಳಿಂದಲೂ, ಸಂಪತ್ತಿನಿಂದಲೂ ಮೇಲೆನಿಸಿದ ರಾಜರೆಲ್ಲರೂ ಕಾಲಗತಿಯನ್ನು ಹೊಂದಿದರು. ನಿನ್ನ ಮಕ್ಕಳಾದರೋ

ಬಹಳ ದುರಾತ್ಮರು. ಯಾವಾಗಲೂ ಕೋಪಾಗ್ನಿಯಿಂದ ಕುದಿಯುತ್ತಿರುವರು. ಪೇರಾಸೆಯುಳ್ಳವರು. ಕೇವಲ ದುರಾಚಾರಪರರು. ಅಂತವರಿಗಾಗಿ ನೀನು ಹೀಗೆ ದುಃಖಿಸುವುದೇ ಸರಿಯಲ್ಲ. ಇದಲ್ಲದೆ ನೀನು ಅನೇಕ ಶಾಸ್ತ್ರಗಳನ್ನು ಕೇಳಿದವನು. ಊಹಾಪೋಹವುಳ್ಳವನು! ಬುದ್ಧಿವಂತನು! ಸತ್ಪುರುಷರಿಗೆ ಸಮ್ಮತನಾದವನು. ಓ ರಾಜೇಂದ್ರಾ! ಯಾರ ಬುದ್ಧಿಯು ಶಾಸ್ತ್ರಮರ್ಯಾದೆಯನ್ನನುಸರಿಸಿ ನಡೆಯುವುದೋ, ಅಂತವರು ಈ ವಿಧವಾದ ಮೋಹಕ್ಕೆ ಈಡಾಗಲಾರರು. ನೀನಾದರೋ ಮಕ್ಕಳನ್ನು ಯಾವ ವಿಧದಲ್ಲಿ ಆದರಿಸಬೇಕೋ, ಯಾವವಿಧದಲ್ಲಿ ನಿಗ್ರಹಿಸಬೇಕೋ, ಅದನ್ನು ಚೆನ್ನಾಗಿ ಬಲ್ಲವನು. ಮಕ್ಕಳನ್ನು ಸರಿಯಾಗಿ ವೃದ್ಧಿಗೆ ತರಬೇಕೆಂಬ ಉದ್ದೇಶವುಳ್ಳವರು ಆ ಮಕ್ಕಳು ಹೋದ ದಾರಿಯನ್ನೇ ತಾವೂ ಅನುಸರಿಸಬಾರದು. ಇದನ್ನು ನೀನು ಚೆನ್ನಾಗಿ ಬಲ್ಲವನಾಗಿದ್ದರೂ, ದುರಾತ್ಮರಾದ ಆ ನಿನ್ನ ಮಕ್ಕಳ ಮಾರ್ಗವನ್ನೇ ಅನುಸರಿಸುತಿದ್ದೆ! ಅದರಿಂದಲೇ ನಿನಗೆ ಈ ಅವಸ್ಥೆಯುಂಟಾಯಿತು. ಅಥವಾ ಈಗ ನಿನ್ನನ್ನು ನಿಂದಿಸಿ ಫಲವೇನು? ದೈವಗತಿಯಿಂದ ನಡೆಯಬೇಕಾದ ಕಾರ್ಯವು ನಡೆದುಹೋಯಿತು. ಅದಕ್ಕಾಗಿ ಈಗ ನೀನು ಶೋಕಿಸುವುದೇ ಯುಕ್ತವಲ್ಲ. ಪುರುಷಪ್ರಯತ್ನದಿಂದ ದೈವವನ್ನು ತಡೆಯುವುದಕ್ಕೆ ಯಾವನೂ ಸಮರ್ಥನಲ್ಲ. ಬ್ರಹ್ಮನು ನಿಯಮಿಸಿದ ಮಾರ್ಗವನ್ನು ಬಿಟ್ಟು ಯಾವನೂ ನಡೆಯಲಾರನು. ಹುಟ್ಟು, ಸಾವು, ಸುಖ, ದುಃಖ ಮೊದಲಾದುವೆಲ್ಲಕ್ಕೂ ಕಾಲವೇ ಮೂಲವು. ಪ್ರಾಣಿಗಳನ್ನು ಸೃಷ್ಟಿಸುವುದೂ ಕಾಲವೇ! (ಕಾಲರೂಪಿಯಾದ ಭಗವಂತನೇ) ಅವುಗಳನ್ನು ಸಂಹರಿಸತಕ್ಕುದೂ ಕಾಲವೇ! ಲೋಕದಲ್ಲಿರುವ ಸಮಸ್ತವಸ್ತುಗಳನ್ನೂ, ಒಳ್ಳೆಯದನ್ನಾಗಿಯೂ, ಕೆಟ್ಟುದನ್ನಾಗಿಯೂ ಮಾರ್ಪಡಿಸುವುದೂ ಕಾಲವೇ! ಸಮಸ್ತಜಗತ್ತನ್ನೂ ಉಪಸಂಹರಿಸಿಟ್ಟುಕೊಂಡು, ತಿರುಗಿ ಅವುಗಳನ್ನು ಸೃಷ್ಟಿಸುವುದೂ ಕಾಲವೇ! ಸಮಸ್ತ ಲೋಕವೂ ನಿದ್ರಿಸುತ್ತಿರುವಾಗಲೂ ಕಾಲವೊಂದುಮಾತ್ರ ಎಚ್ಚರಗೊಂಡಿರುವುದು! ಕಾಲವನ್ನು ಅತಿಕ್ರಮಿಸುವುದಕ್ಕೆ ಯಾರಿಗೂ ಸಾಧ್ಯವಲ್ಲ. ಕಾಲವೆಂಬುದು ಸಮಸ್ತವಸ್ತುಗಳಲ್ಲಿಯೂ ಏಕವಿಧವಾಗಿ ನಡೆಯುತ್ತಿರುವುದು. ಹಿಂದೆ ನಡೆದುಹೋದುದೂ, ಈಗ ನಡೆಯುತ್ತಿರುವುದೂ,

ಮುಂದೆ ನಡೆಯಬೇಕಾದುದೂ ಕಾಲದಿಂದಲೇಹೊರತು ನಮ್ಮಿಂದಲ್ಲ. ಇದನ್ನು ನೀನು ಬಲ್ಲವನಾಗಿದ್ದರೂ, ಈ ಸಮಯದಲ್ಲಿ ನಿನ್ನ ತಿಳಿವಳಿಕೆಯನ್ನು ಬಿಟ್ಟು ಕೊರಗುವುದು ಸರಿಯಲ್ಲ'' ಎಂದನು.

ಹೀಗೆ (ಗವಲ್ಗಣಪುತ್ರನಾದ) ಸಂಜಯನು, ಪುತ್ರಶೋಕಪೀಡಿತನಾದ ಧೃತರಾಷ್ಟ್ರನಿಗೆ ತತ್ವಗಳನ್ನು ಹೇಳಿ, ಅವನನ್ನು ಸಮಾಧಾನಪಡಿಸಿದನು. ಧೃತರಾಷ್ಟ್ರನೂ ಸ್ವತಃ ಪ್ರಾಜ್ಞನಾದುದರಿಂದ, ಸುಖದುಃಗಳೆಲ್ಲವೂ ದೈವಕೃತವೆಂಬುದನ್ನು ತಿಳಿದು ಧೈರ್ಯವನ್ನು ವಹಿಸಿದನು. ಓ ಶೌನಕಾದಿಗಳೇ! ಹಿಂದೆ ಹೇಳಿದ ಈ ವಿಷಯಗಳೆಲ್ಲವನ್ನೂ ವ್ಯಾಸಮುನಿಯು ದೊಡ್ಡ ಉಪಾಖ್ಯಾನವಾಗಿ ವಿವರಿಸಿ, ಲೋಕಕ್ಕೆ ಹಿತವನ್ನುಂಟುಮಾಡಬೇಕೆಂಬ ಕರುಣಾಬುದ್ಧಿಯಿಂದ, ಆ ಗ್ರಂಥದಲ್ಲಿ ಅತ್ಯಂತ ಪುಣ್ಯಕರವಾದ ಭಗವದ್ಗೀತೆಯೆಂಬ ಉಪನಿಷತ್ತನ್ನು ಸೇರಿಸಿದನು. ಭಾರತವನ್ನೂ ವಿದ್ವಾಂಸರಾದ ಕವಿಶ್ರೇಷ್ಠರು ಪುರಾಣಗಳಲ್ಲಿಯೇ ಸೇರಿಸಿರುವರು. ಮನೆಯಲ್ಲಿ ಭಾರತವನ್ನೋದಿಸುವುದು ಬಹಳ ಪುಣ್ಯವು. ಅದರ ಒಂದು ಶ್ಲೋಕವನ್ನು ಮಾತ್ರ ಶ್ರದ್ಧೆಯಿಂದೋದಿದರೂ ಸಮಸ್ತಪಾಪಗಳೂ ನಶಿಸುವುವು. ಇದರಲ್ಲಿ ದೇವತೆಗಳು, ದೇವರ್ಷಿಗಳು ಬ್ರಹ್ಮರ್ಷಿಗಳು, ಶುಭಕರ್ಮಿಗಳಾದ ಯಕ್ಷರು, ಮಹೋರಗರು, ಇವರ ಅದ್ಭುತ ಕಥೆಗಳೆಲ್ಲ ಕೀರ್ತಿಸಲ್ಪಡುವುವು. ಇವರೆಲ್ಲರಿಗಿಂತಲೂ ಮುಖ್ಯವಾಗಿ, ಭಗವಂತನೂ, ಸನಾತನನೂ ಆದ ಶ್ರೀ ವಾಸುದೇವನ ಚರಿತ್ರಗಳೇ ಇದರಲ್ಲಿ ವಿಶೇಷವಾಗಿ ನಿರೂಪಿಸಲ್ಪಡುವುವು. ಓ ಮಹರ್ಷಿಗಳೇ! ಆ ಶ್ರೀಕೃಷ್ಣನೇನು ಸಾಮಾನ್ಯನೇ? ಜ್ಞಾನಫಲವಾದ ಸತ್ಯವೂ ಅವನೇ! ಕರ್ಮಫಲವಾದ ಋತವೂ ಅವನೇ! ಮತ್ತು ಅವನು ಲೋಕಪಾವನನು. ಪುಣ್ಯಸ್ವರೂಪನು. ಶಾಶ್ವತವಾದ ಪರಬ್ರಹ್ಮವೇ ಅವನು. ಅವನೇ ಸ್ಥಿರವಾಗಿಯೂ, ಸನಾತನನಾಗಿಯೂ ಇರುವ ಪರಂಜ್ಯೋತಿಯು. ವಿದ್ವಾಂಸರೆಲ್ಲರೂ ಆತನ ದಿವ್ಯಚರಿತ್ರಗಳನ್ನು ಭಕ್ತಿಯಿಂದ ವರ್ಣಿಸುವರು. ಕಾರಣರೂಪವಾದ ಸತ್ತೂ, ಕಾರ್ಯರೂಪವಾದ ಅಸತ್ತೂ, ಸದಸದ್ರೂಪವಾದ ಜಗತ್ತೂ ಆತನಿಂದಲೇ ಉಂಟಾಗಿರುವುವು. ಮತ್ತು ಪುತ್ರಪೌತ್ರಾದಿರೂಪವಾದ ಸಂತತಿಯೂ, ದೇಹಯಾತ್ರಾದಿರೂಪವಾದ ಪ್ರವೃತ್ತಿಯೂ,

ಜನನ, ಮರಣ, ಪೂರ್ವಜನ್ಮಗಳೂ ಅವನಿಂದಲೇ ನಡೆಯುವುವು. ಅಧ್ಯಾತ್ಮವೆಂಬ ದೇಹದೊಳಗಿನ ಪಂಚಭೂತಗಳೂ, ಆ ಭೂತಗಳಲ್ಲಿರುವ ಗಂಧಾದಿ ಗುಣಗಳೂ ಅವನಿಂದಲೇ ಉಂಟಾಗುವುವೆಂದು ಶ್ರುತಿಗಳು ಹೇಳುವುವು. ಮತ್ತು ಮೂಲಪ್ರಕೃತಿಯೂ, ಅದರ ಕಾರ್ಯಗಳೂ, ಪರತತ್ವವೂ ಅವನೇ! ಯತಿಶ್ರೇಷ್ಠರೂ, ಮುಕ್ತರೂ ಆತನನ್ನೇ ಧ್ಯಾನಿಸುತ್ತ, ಆ ಧ್ಯಾನಯೋಗದ ಬಲದಿಂದ, ಕನ್ನಡಿಯಲ್ಲಿ ಪ್ರತಿಬಿಂಬವನ್ನು ಹೇಗೋಹಾಗೆ, ಜೀವಾತ್ಮನಲ್ಲಿ ನೆಲೆಗೊಂಡಿರುವ ಆ ಪರಮಾತ್ಮನ ಸ್ವರೂಪವನ್ನು ಸಾಕ್ಷಾತ್ಕರಿಸುವರು. ಓ ಮಹರ್ಷಿಗಳೇ! ಯಾವನು ನಿಯಮದಿಂದಲೂ, ಶ್ರದ್ಧೆಯಿಂದಲೂ ಧರ್ಮಪರಾಯಣನಾಗಿ, ಈ ಅನುಕ್ರಮಣಿಕಾಧ್ಯಾಯವನ್ನು ಪಠಿಸುವನೋ ಅವನು ಸರ್ವಪಾಪಗಳಿಂದ ಮುಕ್ತನಾಗುವನು. ಭಾರತದ ಈ ಮೊದಲನೆಯ ಅಧ್ಯಾಯವನ್ನು ಶ್ರದ್ಧೆಯಿಂದ ಶ್ರವಣಮಾಡತಕ್ಕ ಆಸ್ತಿಕರು ಯಾವ ಸಂಕಟಕ್ಕೂ ಒಳಗಾಗಲಾರರು. ಈ ಅನುಕ್ರಮಣಿಕಾಧ್ಯಾಯದಲ್ಲಿ ಯಾವುದಾದರೂ ಒಂದು ಭಾಗವನ್ನು, ಪ್ರಾತಸ್ಸಾಯಂಕಾಲಗಳಲ್ಲಿ ಜಪಿಸತಕ್ಕವನು, ಆಯಾ ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಸಂಚಿತವಾದ ಪಾಪಗಳನ್ನೆಲ್ಲ ಕಳೆದುಕೊಳ್ಳುವನು. ಈ ಅಧ್ಯಾಯವು ಮಹಾಭಾರತಕ್ಕೆ ಶರೀರವೆನಿಸಿಕೊಂಡು, ಸತ್ಯವಾಗಿಯೂ, ಅಮೃತಪ್ರಾಯವಾಗಿಯೂ ಇರುವುದು. ಮೊಸರಿನಲ್ಲಿ ಬೆಣ್ಣೆಯೂ, ಮನುಷ್ಯರಲ್ಲಿ ಬ್ರಾಹ್ಮಣರೂ, ವೇದಗಳಲ್ಲಿ ಆರಣ್ಯಕವೂ, ಓಷಧಿಗಳಲ್ಲಿ ಅಮೃತವೂ, ಜಲಾಶಯಗಳಲ್ಲಿ ಸಮುದ್ರವೂ, ಚತುಷ್ಪಾತ್ತುಗಳಲ್ಲಿ ಗೋವೂ ಶ್ರೇಷ್ಠವೆನಿಸಿರುವಂತೆ, ಇತಿಹಾಸಗಳಲ್ಲಿ ಮಹಾಭಾರತವು ಉತ್ತಮವೆನಿಸಿರುವುದು. ಈ ಭಾರತದಲ್ಲಿ ಒಂದು ಶ್ಲೋಕದ ಒಂದು ಪಾದವನ್ನಾದರೂ ಶ್ರಾದ್ಧಕಾಲಗಳಲ್ಲಿ ಯಾವನು ಬ್ರಾಹ್ಮಣರಿಗೆ ಶ್ರವಣಮಾಡಿಸುವನೋ, ಅವನ ಪಿತೃಗಳಿಗೆ ಅಕ್ಷಯವಾದ ಅನ್ನದಾನವು ಸೇರುವುದು. ಇತಿಹಾಸಪುರಾಣಗಳ ಮೂಲಕವಾಗಿಯೇ ವೇದಾರ್ಥವನ್ನು ವಿಶದವಾಗಿ ತಿಳಿದುಕೊಳ್ಳಬೇಕು. ಏಕೆಂದರೆ, ಅತ್ಯಲ್ಪವಾದ ಜ್ಞಾನವುಳ್ಳವರು ಅಪಾರ್ಥಕಲ್ಪನೆಯಿಂದ ತನ್ನನ್ನು ಮೋಸಗೊಳಿಸಬಹುದೆಂದು ವೇದವೂಕೂಡ ಅಂತವರಿಗೆ ಭಯಪಡುವುದು. ಶ್ರೀಕೃಷ್ಣದ್ವೈಪಾಯನನಿಂದ ರಚಿತವಾದ ಈ ಭಾರತವೆಂಬ ವೇದವನ್ನು, ಶ್ರವಣ

ಪಠನಾದಿಗಳಿಂದ ಅನುಸಂಧಾನಮಾಡಿದ ವಿದ್ವಾಂಸರು ತಮ್ಮ ಕೋರಿಕೆಗಳನ್ನೆಲ್ಲಾ ಪಡೆಯುವರು. ಈ ಭಾರತಪಠನದಿಂದ, ಭ್ರೂಣಹತ್ಯ ಮೊದಲಾದ ಮಹಾಪಾತಕಗಳೂ ನಿಸ್ಸಂಶಯವಾಗಿ ಬಿಟ್ಟುಹೋಗುವುವು. ಯಾವನು ಶುಚಿಯಾಗಿ, ಪ್ರತಿ ಪರ್ವಕಾಲದಲ್ಲಿಯೂ ಮೊದಲು ಈ ಅಧ್ಯಾಯವನ್ನು ಪಠಿಸುವನೋ, ಅವನು ಭಾರತವೆಲ್ಲವನ್ನೂ ಪೂರ್ಣವಾಗಿ ಪಠಿಸಿದ ಫಲಕ್ಕೆ ಭಾಗಿಯಾಗುವನು. ಈ ಅಧ್ಯಾಯವನ್ನು ಯಾವನು ದಿನದಿನವೂ ಶ್ರದ್ಧೆಯಿಂದ ಕೇಳುವನೋ ಅವನಿಗೆ ದೀರ್ಘಾಯುಷ್ಯವೂ, ಕೀರ್ತಿಯೂ, ಸ್ವರ್ಗಗತಿಯೂ ಕೈಗೂಡುವುವು. ಪೂರ್ವದಲ್ಲಿ ಸಮಸ್ತದೇವತೆಗಳೂ ಸಭೆಗೂಡಿ, ಭಾರತವನ್ನು ಒಂದು ಕಡೆಯಲ್ಲಿಯೂ, ನಾಲ್ಕು ವೇದಗಳನ್ನು ಮತ್ತೊಂದು ಕಡೆಯಲ್ಲಿಯೂ ಇಟ್ಟು ತ್ರಾಸಿನಲ್ಲಿ ತೂಗಿ ನೋಡಿದಾಗ, ಉಪನಿಷತ್ತುಗಳೊಡನೆ ಕೂಡಿದ ನಾಲ್ಕು ವೇದಗಳಿಗಿಂತಲೂ, ಭಾರತದಲ್ಲಿ ಅಧಿಕಭಾರವು ಕಂಡುಬಂದಿತು. ಅದುಮೊದಲು ಈ ಗ್ರಂಥಕ್ಕೆ "ಮಹಾಭಾರತ"ವೆಂಬ ಹೆಸರು ಲೋಕದಲ್ಲಿ ಪ್ರಖ್ಯಾತವಾಯಿತು. ತುಲೆಯಲ್ಲಿಟ್ಟು ತೂಗಿದಾಗ, ಮಹತ್ವದಲ್ಲಿಯೂ ಭಾರದಲ್ಲಿಯೂ ಹೆಚ್ಚಾದುದರಿಂದಲೇ ಇದು "ಮಹಾಭಾರತ"ವೆನಿಸಿರುವುದು. ಈ ಹೆಸರಿನ ವ್ಯುತ್ಪತ್ತಿಯನ್ನು ತಿಳಿದವನೂಕೂಡ ಸರ್ವಪಾಪವಿಮುಕ್ತನಾಗುವನು. ಓ ಮಹರ್ಷಿಗಳೇ! ವೇದಗಳೂ, ಉಪನಿಷತ್ತುಗಳೂ ಬ್ರಹ್ಮಪ್ರತಿಪಾದಕಗಳಾಗಿ, ಮೋಕ್ಷೋಪಾಯಗಳನ್ನು ತಿಳಿಸುವಾಗ, ಯುದ್ಧಪ್ರಧಾನವಾಗಿ ಬಂಧಹೇತುಗಳಾದ ಕರ್ಮಗಳನ್ನೇ ಬೋಧಿಸುವ ಈ ಭಾರತವನ್ನು, ಅವುಗಳಿಗಿಂತಲೂ ಮೇಲೆಂದು ಹೇಳುವುದು ಹೇಗೆಂದು ನೀವು ಸಂದೇಹಿಸಬಾರದು! ಏಕೆಂದರೆ, ಇವುಗಳಿಂದುಂಟಾಗತಕ್ಕ ಗುಣಾವಗುಣಗಳೆಲ್ಲವೂ ಮನುಷ್ಯನ ಮನೋಭಿಪ್ರಾಯವನ್ನನುಸರಿಸಿರುವುವು. ಫಲಾಪೇಕ್ಷೆಯಿಲ್ಲದೆ ಮಾಡಿದರೆ, ಕೃಛ್ರಚಾಂದ್ರಾಯಣಾದಿ ವ್ರತಗಳೂಕೂಡ ಕರ್ಮಬಂಧಕ್ಕೆ ಕಾರಣವಾಗಲಾರದು. ಆಯಾ ವರ್ಣಾಶ್ರಮಗಳಿಗೆ ತಕ್ಕಂತೆ ವೇದವಿಹಿತಗಳಾದ ಕರ್ಮಗಳೂ ಬಂಧಹೇತುಗಳಾಗಲಾರವು. ಕಷ್ಟಗಳನ್ನು ಸಹಿಸಿಕೊಂಡು, ಧರ್ಮವನ್ನು ಮೀರದೆ ಮಾಡತಕ್ಕ ಧನಾರ್ಜನವೂ ಕರ್ಮಹೇತುವಾಗಲಾರದು. ಇವುಗಳನ್ನೇ ದುರಭಿಪ್ರಾಯದಿಂದ (ಫಲಾಪೇಕ್ಷೆ

ಯಿಂದ) ನಡೆಸಿದಪಕ್ಷದಲ್ಲಿ, ಕರ್ಮಬಂಧಕ್ಕೆ ಕಾರಣವೆನಿಸುವುವು. ಈ ಭಾರತದಲ್ಲಿರುವ. ಮೋಕ್ಷಧರ್ಮಾದಿ ಪ್ರಕರಣಗಳು ನಿಷ್ಕಾಮಕರ್ಮಗಳನ್ನೇ ಪ್ರತಿಪಾದಿಸುವುದರಿಂದಲೂ, ಅಲ್ಲಲ್ಲಿ ಬ್ರಹ್ಮಸ್ವರೂಪ ನಿರೂಪಣವಿರುವುದರಿಂದಲೂ ಇದು ಬೇರೆಯವುಗಳಿಗಿಂತಲೂ ಮೇಲೆನಿಸುವುದು" ಎಂದನು.

ಇದು ಮೊದಲನೆಯ ಅಧ್ಯಾಯವು.

**ಇಲ್ಲಿಗೆ ಅನುಕ್ರಮಣಿಕಾಪರ್ವವು ಮುಗಿದುದು.**



# ಪರ್ವಸಂಗ್ರಹಪರ್ವವು.

{ ಸಮಂತಪಂಚಕಾಖ್ಯಾನವು, ಅಕ್ಷೌಹಿಣ್ಯಾದಿ ಸಂಖ್ಯಾವಿವರಣೆ. ಪ್ರತಿಪರ್ವಗಳ ಸಂಕ್ಷೇಪಾರ್ಥವು. ಭಾರತಶ್ರವಣ ಫಲವು. }

ಶೌನಕಾದಿ ಮುನಿಗಳು ಸೂತನನ್ನು ಕುರಿತು "ಓ ಸೂತಪುತ್ರಾ! ನೀನು ಸಮಂತಪಂಚಕವೆಂದು ಹೇಳಿದೆಯಲ್ಲವೆ? ಅದರ ವಿವರವೇನು? ಅದನ್ನೆಲ್ಲ ಸವಿಸ್ತರವಾಗಿ ಕೇಳಬೇಕೆಂದಿರುವೆವು. ಕೃಪೆಯಿಟ್ಟು ತಿಳಿಸಬೇಕು" ಎಂದರು. ಅದಕ್ಕಾ ಸೂತಪೌರಾಣಿಕನು "ಓ ವಿಪ್ರೋತ್ತಮರೇ! ಕರ್ಣಾನಂದಕರಗಳಾದ ಆ ಕಥೆಗಳನ್ನು ಹೇಳುವೆನು ಕೇಳಿರಿ! ತ್ರೇತಾದ್ವಾಪರಯುಗಗಳ ಸಂಧಿಕಾಲದಲ್ಲಿ, ಶಸ್ತ್ರಧಾರಿಗಳಿಗೆಲ್ಲ ತಿಲಕಪ್ರಾಯನಾದ ಪರಶುರಾಮನು, ಕ್ಷತ್ರಿಯರಮೇಲೆ ತನಗುಂಟಾದ ಅಸಹ್ಯಕೋಪದಿಂದ, ಕ್ಷತ್ರಿಯಕುಲವನ್ನು ಬಾರಿಬಾರಿಗೂ ಕೊಲ್ಲುತ್ತ ಬಂದನು. ಅಗ್ನಿಯಂತೆ ತೇಜಸ್ಸಿನಿಂದ ಜ್ವಲಿಸುತಿದ್ದ ಆತನು, ತನ್ನ ವೀರ್ಯದಿಂದ ಕ್ಷತ್ರಜಾತಿಯೆಲ್ಲವನ್ನೂ ನಾಶಮಾಡಿ, ಸಮಂತಪಂಚಕವೆಂಬ ಐದು ಮಡುಗಳನ್ನು ಅವರ ರಕ್ತಜಲದಿಂದಲೇ ತುಂಬಿ, ಆ ಮಡುಗಳಲ್ಲಿಯೇ ತನ್ನ ಪಿತೃಗಳಿಗೆ ತರ್ಪಣವನ್ನು ಮಾಡಿದುದಾಗಿ ನಾವು ಕೇಳಿರುವೆವು. ಹೀಗೆ ರಾಮನು

ತರ್ಪಣವನ್ನು ಬಿಡುವಾಗ, ಅವನ ಪಿತೃಗಳಾದ ಋಚೀಕಾದಿಗಳು ಪ್ರತ್ಯಕ್ಷ ವಾಗಿ ಅವನ ಕಣ್ಣಿಗೆ ಕಾಣಿಸಿಕೊಂಡು "ರಾಮಾ! ಮಹಾಭಾಗಾ! ಭೃಗುತಿಲಕಾ! ನೀನು ತೋರಿಸಿದ ಈ ಪಿತೃಭಕ್ತಿಗಾಗಿಯೂ, ನಿನ್ನ ಪರಾ ಕ್ರಮಕ್ಕಾಗಿಯೂ ನಾವು ಬಹಳ ಸಂತೋಷಪಟ್ಟೆವು. ಓ ಮಹಾದ್ಯುತೀ! ನಿನಗೆ ಮಂಗಳವಾಗಲಿ! ನಿನಗೆ ಬೇಕಾದ ವರವನ್ನು ಕೇಳು" ಎಂದರು. ಅದಕ್ಕಾ ರಾಮನು "ಎಲೈ ಪಿತೃಗಳೇ! ನೀವು ನನ್ನಲ್ಲಿ ಸಂತುಷ್ಟರಾಗಿ ದ್ದರೆ, ನೀವು ನನ್ನನ್ನು ಅನುಗ್ರಹಿಸುವುದಾಗಿದ್ದರೆ, ಇದುವರೆಗೆ ನಾನು ಕೋಪವಶನಾಗಿ ಕ್ಷತ್ರಿಯಕುಲವನ್ನು ನಾಶಮಾಡಿದ ಪಾಪದಿಂದ ನನಗೆ ಬಿಡುಗಡೆಯಾಗುವಂತೆ ಅನುಗ್ರಹಿಸಬೇಕು. ಇದೇ ಈಗ ನಾನು ನಿಮ್ಮಲ್ಲಿ ಕೇಳಿಕೊಳ್ಳುವ ಮುಖ್ಯವರವು. ಮತ್ತು ಕ್ಷತ್ರಿಯರಕ್ತದಿಂದ ತುಂಬಿದ ಈ ಐದು ಮಡುಗಳೂ ಇನ್ನುಮೇಲೆ ಈ ಲೋಕದಲ್ಲಿ ಪುಣ್ಯತೀರ್ಥಗಳೆಂದೇ ಪ್ರಸಿದ್ಧಿಹೊಂದಬೇಕು" ಎಂದನು. ಆಗ ಪಿತೃಗಳೆಲ್ಲರೂ ಪರಶುರಾಮ ನನ್ನು ಕುರಿತು "ರಾಮಾ! ನಿನ್ನ ಇಷ್ಟದಂತೆಯೇ ಆಗಲಿ! ಆದರೆ ನೀನು ಇನ್ನುಮೇಲೆ ಕ್ಷತ್ರಿಯರಮೇಲಿನ ಕೋಪವನ್ನು ಬಿಟ್ಟು ಶಾಂತಿ ಯನ್ನು ವಹಿಸಬೇಕು. ಯಾವ ಕ್ಷತ್ರಿಯನನ್ನೂ ಕೊಲ್ಲಬಾರದು" ಎಂದ ರು. ಅಲ್ಲಿಂದಾಚೆಗೆ ಪರಶುರಾಮನು ಕ್ಷತ್ರಿಯವಧದಿಂದ ನಿವೃತ್ತನಾಗಿ ಶಾಂತಿಯನ್ನು ವಹಿಸಿದನು. ಓ ಮಹರ್ಷಿಗಳೇ! ರಕ್ತಜಲವುಳ್ಳ ಆ ಮಡುಗಳ ಸಮೀಪದಲ್ಲಿರುವ ದೇಶವೆಲ್ಲವೂ ಸಮಂತಕಪಂಚಕಕ್ಷೇತ್ರವೆಂದು ಕೀರ್ತಿಸಲ್ಪಡುವುದು. ಯಾವ ದೇಶವು ಯಾವ ಅಸಾಧಾರಣಚಿಹ್ನದಿಂದ ಕೂಡಿರುವುದೋ, ಆ ಗುರುತಿನ ಹೆಸರಿನಿಂದಲೇ ಆ ಪ್ರದೇಶವನ್ನು ವ್ಯವ ಹರಿಸುವುದು ಪ್ರಾಜ್ಞರ ಮತವು. ಕಲಿದ್ವಾಪರಯುಗಗಳ ಸಂಧಿಕಾಲ ದಲ್ಲಿ ಈ ಸಮಂತಪಂಚಕದಲ್ಲಿಯೇ ಕೌರವಪಾಂಡವಸೈನ್ಯಗಳಿಗೆ ದೊಡ್ಡ ಯುದ್ಧವು ನಡೆಯಿತು. ಆ ಪ್ರದೇಶವು ಬಹಳ ಧರ್ಮಕ್ಷೇತ್ರವಾಗಿಯೂ, ಹಳ್ಳತಿಟ್ಟಿಲ್ಲದ ದೊಡ್ಡ ಮೈದಾನವಾಗಿಯೂ ಇದ್ದುದರಿಂದ, ಕೌರವಪಾಂಡ ವರಿಬ್ಬರೂ, ತಮ್ಮ ಹದಿನೆಂಟು ಅಕ್ಷೌಹಿಣೀ ಸೈನ್ಯಗಳೊಡನೆ ಅಲ್ಲಿ ಯುದ್ಧ ಕ್ಕಾಗಿ ಕೂಡಿದರು. ಆ ಹದಿನೆಂಟು ಅಕ್ಷೌಹಿಣೀಸೈನ್ಯಗಳೂ ಅಲ್ಲಿಯೇ ನಷ್ಟವಾದುವು. ಆ ದೇಶಕ್ಕೆ ಸಮಂತಪಂಚಕವೆಂದು ಹೆಸರು ಬರುವು

ದಕ್ಕೂ, ಅದು ಪವಿತ್ರವಾದ ಕ್ಷೇತ್ರವೆನಿಸಿಕೊಳ್ಳುವುದಕ್ಕೂ, ಅದರ ಪ್ರಖ್ಯಾತಿಯು ಮೂರು ಲೋಕಗಳಲ್ಲಿಯೂ ಹರಡುವುದಕ್ಕೂ ಇದೇ ಕಾರಣವು'' ಎಂದನು.

ತಿರುಗಿ ಶೌನಕಾದಿಗಳು ಸೂತಪೌರಾಣಿಕನನ್ನು ಕುರಿತು "ಓ ಸೂತನಂದನಾ! ನೀನು ಅಕ್ಷೌಹಿಣೀಸೈನ್ಯವೆಂದು ಹೇಳಿದೆಯಲ್ಲವೆ? ನೀನು ಸರ್ವಜ್ಞನಾದುದರಿಂದ, ಅದರ ಸಂಖ್ಯಾಪರಿಣಾಮವನ್ನು ನಮಗೆ ವಿವರವಾಗಿ ತಿಳಿಸಬೇಕು. ಒಂದು ಅಕ್ಷೌಹಿಣೀಸೇನೆಯಲ್ಲಿರಬೇಕಾದ ಕಾಲಾಳುಗಳೆಷ್ಟು! ಕುದುರೆಗಳೆಷ್ಟು! ರಥಗಳೆಷ್ಟು! ಆನೆಗಳೆಷ್ಟು!'' ಎಂದರು. ಅದಕ್ಕಾ ಸೂತನು "ಓ ಮಹರ್ಷಿಗಳಿರಾ! ಒಂದು ರಥವೂ, ಒಂದು ಆನೆಯೂ, ಐದುಮಂದಿ ಕಾಲಾಳುಗಳೂ, ಮೂರು ಕುದುರೆಗಳೂ ಸೇರಿದ ಸೈನ್ಯಕ್ಕೆ ಪತ್ತಿಯೆಂದು ಹೆಸರು. ಇಂತಹ ಮೂರು ಪತ್ತಿಗಳು ಸೇರಿ ಸೇನಾಮುಖವೆನಿಸುವುದು. ಮೂರು ಸೇನಾಮುಖಗಳು ಒಂದು ಗುಲ್ಮವೆನಿಸುವುದು. ಮೂರು ಗುಲ್ಮಗಳು ಸೇರಿದರೆ ಒಂದು ಗಣವೆನಿಸುವುದು. ಮೂರು ಗಣಗಳು ವಾಹಿನಿ; ಮೂರು ವಾಹಿನಿಗಳು ಒಂದು ಪೃತನೆ; ಮೂರು ಪೃತನೆಗಳು ಒಂದು ಚಮುವೆನಿಸುವುದು. ಮೂರು ಚಮುಗಳು ಸೇರಿ ಒಂದು ಅನೀಕಿನಿಯೆನಿಸುವುದು. ಹತ್ತು ಅನೀಕಿನಿಗಳು ಸೇರಿದರೆ ಒಂದು ಅಕ್ಷೌಹಿಣಿಯೆನಿಸುವುದು. ಆದುದರಿಂದ ಹಿಂದೆ ಹೇಳಿದ ಲೆಕ್ಕದಂತೆ, ಇಪ್ಪತ್ತೊಂದು ಸಾವಿರದ ಎಂಟುನೂರ ಎಂಭತ್ತು ರಥಗಳೂ, ಅಷ್ಟೇ ಆನೆಗಳೂ, ಅದಕ್ಕೆ ಮೂರರಷ್ಟು ಎಂದರೆ, ಅರುವತ್ತೈದು ಸಾವಿರದ ಆರುನೂರ ಹತ್ತು ಕುದುರೆಯ ಸೈನ್ಯಗಳೂ, ರಥಸೈನಕ್ಕೆ ಐದರಷ್ಟು ಎಂದರೆ, ಒಂದು ಲಕ್ಷದ ಒಂಭತ್ತು ಸಾವಿರದ ಮುನ್ನೂರೈವತ್ತು ಪದಾತಿಸೈನ್ಯವೂ ಸೇರಿದರೆ ಒಂದಕ್ಷೌಹಿಣೀಸೈನ್ಯವಾಗುವುದು. ಈ ಸಂಖ್ಯೆಯನ್ನನುಸರಿಸಿ, ಕೌರವಪಾಂಡವರ ಸೇನೆಗಳೆರಡಲ್ಲಿಯೂ ಮೊತ್ತಕ್ಕೆ ಹದಿನೆಂಟಕ್ಷೌಹಿಣೀ ಸೈನ್ಯಗಳಿದ್ದುವು. ಈ ಸೈನ್ಯಗಳೆಲ್ಲವೂ ಕುರುಕ್ಷೇತ್ರದಲ್ಲಿ ಒಂದಾಗಿ ಕಲೆತಿದ್ದು ಅಲ್ಲಿಯೇ ನಾಶಹೊಂದಿದುವು.

ಓ ಬ್ರಾಹ್ಮಣೋತ್ತಮರೇ! ಕೌರವಪಾಂಡವರನ್ನು ನೆಪಮಾತ್ರಕ್ಕಿಟ್ಟು ಅದ್ಭುತಕರ್ಮನಾದ ಕಾಲಪುರುಷನೇ ಇಷ್ಟು ಮಹಾಸೈನ್ಯವನ್ನೂ ನಿರ್ಮೂಲಮಾಡಿದನಲ್ಲದೆ ಬೇರೆಯಲ್ಲ. ಇಷ್ಟು ಸೈನ್ಯಗಳೂ ಹದಿನೆಂಟು ದಿನಗಳೊಳಗಾಗಿ ಹತವಾದುವು. ದಿವ್ಯಾಸ್ತ್ರವಿದನಾದ ಭೀಷ್ಮನು ಹತ್ತು ದಿನಗಳವರೆಗೆ ಯುದ್ಧಮಾಡಿದನು. ದ್ರೋಣನು ಐದುದಿನಗಳವರೆಗೆ ಕೌರವಸೈನ್ಯವನ್ನು ಕಾಪಾಡುತ್ತ ಯುದ್ಧವನ್ನು ನಡೆಸಿದನು. ಆಮೇಲೆ ಕರ್ಣನು ಎರಡುದಿನಗಳವರೆಗೆ ಯುದ್ಧಮಾಡಿದನು. ಅದರಿಂದಾಚೆಗೆ ಶಲ್ಯನು ಅರ್ಧದಿವಸದವರೆಗೆ ಯುದ್ಧವನ್ನು ನಡೆಸಿದನು. ಅದರಿಂದಾಚೆಗೆ ಉಳಿದ ಹಗಲಿನ ಅರ್ಧಭಾಗದಲ್ಲಿ ಭೀಮದುರ್ಯೋಧನರಿಗೆ ಗದಾಯುದ್ಧವು ನಡೆಯಿತು. ಆ ರಾತ್ರಿಯಲ್ಲಿಯೇ ಅಶ್ವತ್ಥಾಮನೂ, ಕೃಪನೂ, ಕೃತವರ್ಮನೂ ಸೇರಿ, ಪಾಂಡವಶಿಬಿರದಲ್ಲಿ ನಿರ್ಭಯವಾಗಿ ಮಲಗಿದ್ದ ಧರ್ಮರಾಜನ ಸೈನ್ಯವನ್ನೆಲ್ಲ ಧ್ವಂಸಮಾಡಿದರು. ಓ ಶೌನಕಾದಿಮಹರ್ಷಿಗಳಿರಾ! ಈಗ ನಿಮ್ಮ ಸತ್ರಯಾಗದಲ್ಲಿ ನಾನು ಹೇಳತೊಡಗಿರುವ ಈ ಭಾರತವೆಂಬ ಇತಿಹಾಸವನ್ನು, ಹಿಂದೆ ಜನಮೇಜಯನು ನಡೆಸುತಿದ್ದ ಯಾಗಕಾಲದಲ್ಲಿ, ವ್ಯಾಸಶಿಷ್ಯನಾದ ವೈಶಂಪಾಯನಮುನಿಯು ಸವಿಸ್ತರವಾಗಿ ಆ ರಾಜನಿಗೆ ಹೇಳಿದನು. ಇದರಲ್ಲಿ ಅನೇಕರಾಜರ ಯಶಸ್ಸೂ, ವೀರ್ಯವೂ ವಿವರಿಸಲ್ಪಟ್ಟಿರುವುದು. ಈ ಭಾರತವು ಮೊದಲು, ಪೌಷ್ಯ, ಪೌಲೋಮ, ಆಸ್ತೀಕವೆಂಬ ಮೂರು ಉಪಪರ್ವಗಳಿಂದ ಆರಂಭಿಸಲ್ಪಡುವುದು. ಈ ಪರ್ವಗಳು ವಿಚಿತ್ರಾರ್ಥಗಳಿಂದಲೂ, ಪದಗಳಿಂದಲೂ, ಕಥೆಗಳಿಂದಲೂ, ನಾನಾಬಗೆಯ ಸದಾಚಾರ ನಿರೂಪಣಗಳಿಂದಲೂ ಹೃದಯಂಗಮಗಳಾಗಿರುವುದರಿಂದ, ಮೋಕ್ಷಾರ್ಥಿಗಳು ವಿರಕ್ತಿಯನ್ನು ಹೇಗೋ ಹಾಗೆ, ಪ್ರಾಜ್ಞರೆಲ್ಲರೂ ಈ ಭಾಗಗಳನ್ನು ವಿಶೇಷವಾಗಿ ಆದರಿಸುವರು. ಜ್ಞಾನವಿಷಯಗಳಲ್ಲಿ ಆತ್ಮತತ್ವದಂತೆಯೂ, ಪ್ರಿಯವಸ್ತುಗಳಲ್ಲಿ ಪ್ರಾಣದಂತೆಯೂ, ಎಲ್ಲಾ ಶಾಸ್ತ್ರಗಳಲ್ಲಿಯೂ ಈ ಭಾರತವೆಂಬ ಇತಿಹಾಸವು ಶ್ರೇಷ್ಠತಮವೆನಿಸುವುದು. ದೇಹವು ಆಹಾರವನ್ನಾಶ್ರಯಿಸಿಯೇ ನಿಲ್ಲುವಂತೆ, ಎಲ್ಲಾ ಕಥೆಗಳೂ ಭಾರತವನ್ನಾಶ್ರಯಿಸಿಯೇ ಇರುವುವು. ಶ್ರೇಯಃಕಾಂಕ್ಷಿಗಳಾದ ಭೃತ್ಯರು ಸತ್ಕುಲದಲ್ಲಿ ಹುಟ್ಟಿದ ಒಳ್ಳೇ ಪ್ರಭುಗಳನ್ನಾಶ್ರಯಿಸುವಂತೆ, ಕವಿಗಳೆಲ್ಲರೂ ಈ

ಭಾರತವನ್ನೇ ಆಧಾರವನ್ನಾಗಿ ಹಿಡಿದಿರುವರು. ಸಮಸ್ತ ವೇದವಾಕ್ಯಗಳೂ ಸ್ವರವ್ಯಂಜನಗಳಲ್ಲಿಯೇ ಅಡಗಿರುವಂತೆ, ಉತ್ತಮಜ್ಞಾನಗಳೆಲ್ಲವೂ ಈ ಭಾರತದಲ್ಲಿಯೇ ಅಡಗಿರುವುವು. ಪ್ರಾಜ್ಞರಿಂದ ಆದರಿಸಲ್ಪಡತಕ್ಕುದಾಗಿಯೂ, ವಿಚಿತ್ರಪದಾರ್ಥಗಳಿಂದ ಕೂಡಿದ ಪರ್ವವಿಭಾಗಗಳುಳ್ಳುದಾಗಿಯೂ, ಸೂಕ್ಷ್ಮನ್ಯಾಯಗಳಿಂದಲೂ, ವೇದಾರ್ಥಗಳಿಂದಲೂ ತುಂಬಿದುದಾಗಿಯೂ ಇರುವ ಈ ಭಾರತವೆಂಬ ಇತಿಹಾಸದಲ್ಲಿರುವ ಪರ್ವಗಳನ್ನೆಲ್ಲ ಸಂಗ್ರಹಿಸಿ ಹೇಳುವೆನು ಕೇಳಿರಿ! ಆದಿಪರ್ವದಲ್ಲಿ ಮೊದಲು ಅನುಕ್ರಮಣಿಕಾಪರ್ವ ಮತ್ತು ಪರ್ವಸಂಗ್ರಹ ಪರ್ವಗಳು, ಆಮೇಲೆ ಪೌಷ್ಯ, ಪೌಲೋಮ ಆಸ್ತಿಕಪರ್ವಗಳು, ಆಮೇಲೆ ಅಂಶಾವತರಣಪರ್ವ, ಅದರಿಂದಾಚೆಗೆ ವಿಚಿತ್ರವಿಷಯಗಳಿಂದ ಮೈಯಲ್ಲಿ ರೋಮಾಂಚವನ್ನು ಹುಟ್ಟಿಸುವಂತಿರುವ ಸಂಭವಪರ್ವವು, ಆಮೇಲೆ ಜತುಗೃಹಪರ್ವ, ಅದರಿಂದಾಚೆಗೆ ಕ್ರಮವಾಗಿ ಹೈಡಿಂಬ, ಬಕವಧ, ಚೈತ್ರರಥ, ಪಾಂಚಾಲೀ ಸ್ವಯಂವರ, ವೈವಾಹಿಕ, (ಎಂದರೆ ಅರ್ಜುನನು ಕ್ಷತ್ರಿಯಧರ್ಮದಿಂದ ಇತರರಾಜರನ್ನು ಜಯಿಸಿ, ಶಾಸ್ತ್ರೋಕ್ತವಾಗಿ ದ್ರೌಪದಿಯನ್ನು ವಿವಾಹಮಾಡಿಕೊಂಡುದು.) ವಿದುರಾಗಮನರಾಜ್ಯಲಾಭ, ಅರ್ಜುನವನವಾಸ, ಸುಭದ್ರಾಹರಣ, ಹರಣಹಾರಿಕಾಪರ್ವ (ಎಂದರೆ ಸುಭದ್ರೆಯು ತನ್ನೊಡನೆ ಬಳುವಳಿಯನ್ನು ತಂದುದು.) ಖಾಂಡವದಹನ, ಮಯದರ್ಶನಪರ್ವಗಳೆಂದು ಹೀಗೆ ಹತ್ತೊಂಭತ್ತು ಉಪಪರ್ವಗಳುಂಟು.

ಅದರಿಂದಾಚೆಗೆ ಸಭಾಪರ್ವವು ಆರಂಭಿಸಲ್ಪಟ್ಟು, ಅದರಲ್ಲಿ ಕ್ರಮವಾಗಿ, ಮಂತ್ರಪರ್ವ, ಜರಾಸಂಧವಧಪರ್ವ, ದಿಗ್ವಿಜಯಪರ್ವ, ರಾಜಸೂಯಪರ್ವ, ಅರ್ಘಾಹರಣಪರ್ವ, ಶಿಶುಪಾಲವಧಪರ್ವ, ದ್ಯೂತಪರ್ವ, ಅನುದ್ಯೂತಪರ್ವಗಳೆಂಬ ಎಂಟು ಉಪಪರ್ವಗಳುಂಟು.

ಆಮೇಲೆ ಮೂರನೆಯದಾದ ಅರಣ್ಯಪರ್ವದಲ್ಲಿ ಕ್ರಮವಾಗಿ, ಕಿರ್ಮೀರವಧ, ಅರ್ಜುನಾಭಿಗಮನ, (ಕಿರಾತಾರ್ಜುನಯುದ್ಧವೆಂಬ) ಕೈರಾತಪರ್ವ, ಇಂದ್ರಲೋಕಾಭಿಗಮನಪರ್ವ, ಧರ್ಮಬೋಧಕವಾಗಿಯೂ ಕರುಣಾರಸಪೂರ್ಣವಾಗಿಯೂ ಇರುವ ನಳೋಪಾಖ್ಯಾನಪರ್ವ, ತೀರ್ಥಯಾತ್ರೆ, ಜಟಾ

ಸುರವಧ, ಯಕ್ಷಯುದ್ಧ, ನಿವಾತಕವಚಯುದ್ಧ, (ಅಜಗರವೃತ್ತಾಂತವೆಂಬ) ಅಜಗರಪರ್ವ, ಮಾರ್ಕಂಡೇಯ ಸಮಾಸ್ಯೆ, ದ್ರೌಪದೀ ಸತ್ಯಭಾಮಾ ಸಂವಾದ, ಘೋಷಯಾತ್ರೆ, (ದುರ್ಯೋಧನನ ಪ್ರಾಯೋಪವೇಶ, ಮಂತ್ರಾಲೋಚನೆ ಮುಂತಾದುವು) ಮೃಗಸ್ವಪ್ನೋದ್ಭವ, ವ್ರೀಹಿದ್ರೌಣಿಕ ಪರ್ವ (ಇಂದ್ರದ್ಯುಮ್ನೋಪಾಖ್ಯಾನ), ದ್ರೌಪದೀಹರಣ, ಜಯದ್ರಥವಿಮೋಕ್ಷಣ, ರಾಮೋಪಾಖ್ಯಾನ, ಸಾವಿತ್ರೀಚರಿತ್ರವೆಂಬ ಪತಿವ್ರತಾಮಾಹಾತ್ಮ್ಯ, ಕರ್ಣಕುಂಡಲಾಹರಣ, ಆರಣೇಯಗಳೆಂಬ ಇಪ್ಪತ್ತೊಂದು ಉಪಪರ್ವಗಳು ಸೇರಿರುವುವು.

ಆದರಿಂದಾಚೆಗೆ ನಾಲ್ಕನೆಯದಾದ ವಿರಾಟಪರ್ವದಲ್ಲಿ ಕ್ರಮವಾಗಿ ಪಾಂಡವಪ್ರವೇಶ, ಸಮಯಪಾಲನ, ಕೀಚಕವಧ, ಗೋಗ್ರಹಣ, ಉತ್ತರಾವಿವಾಹಗಳೆಂಬ ಐದು ಉಪಪರ್ವಗಳು ಸೇರಿರುವುವು.

ಅದಕ್ಕೆಮೇಲೆ ಅದ್ಭುತಕಥಾಸಂವಿಧಾನಗಳುಳ್ಳ ಉದ್ಯೋಗಪರ್ವದಲ್ಲಿ ಕ್ರಮವಾಗಿ, ಯುದ್ಧೋದ್ಯೋಗ, ಸಂಜಯಯಾನ, ಧೃತರಾಷ್ಟ್ರ, ಪ್ರಜಾಗರ, ಆಧ್ಯಾತ್ಮತತ್ವಬೋಧಕವಾದ ಸನತ್ಸುಜಾತೀಯಪರ್ವ, ಯಾನಸಂಧಿಪರ್ವ, ಭಗವದ್ಯಾನಪರ್ವಗಳೂ, (ಈ ನಡುವೆ ಮಾತಲೀಯೋಪಾಖ್ಯಾನ, ಗಾಲವಚರಿತೆ, ಸಾವಿತ್ರ, ವಾಮದೇವ, ವೈನ್ಯ, ಜಾಮದಗ್ನ್ಯೋಪಾಖ್ಯಾನಗಳೂ, ಷೋಡಶರಾಜೋಪಾಖ್ಯಾನವೂ, ಶ್ರೀಕೃಷ್ಣನು ದುರ್ಯೋಧನನ ಸಭೆಯಲ್ಲಿ ಪ್ರವೇಶಿಸಿದುದೂ, ವಿದುಲೆಯು ತನ್ನ ಮಗನಿಗೆ ಹೇಳಿದ ಬುದ್ಧಿವಾದಗಳೂ, ಸೈನ್ಯನಿರ್ಯಾಣಪ್ರಯತ್ನ, ವಿಶ್ವೋಪಾಖ್ಯಾನ, ಕರ್ಣನ ವಿವಾದ, ಮಂತ್ರನಿಶ್ಚಯ, ಕೃಷ್ಣನು ಸೇನಾಧಿಪತ್ಯದಲ್ಲಿ ಶ್ವೇತನಿಗೆ ಪಟ್ಟವನ್ನು ಕಟ್ಟಿದ ವಿಚಿತ್ರಕಥೆ, ಅದಕ್ಕೆ ಸಂಬಂಧಪಟ್ಟ ಇನ್ನೂ ಅನೇಕ ಕಥಾಸಂದರ್ಭಗಳು), ಕೌರವಪಾಂಡವರ ಸೇನಾನಿರ್ಯಾಣ, ಉಲೂಕದೂತಾಗಮನ, ರಥಾತಿರಥಸಂಖ್ಯಾನ, ಅಂಬೋಪಾಖ್ಯಾನಗಳೆಂಬ ಹತ್ತು ಪರ್ವಗಳು ಸೇರಿರುವುವು.

ಆಮೇಲೆ ಭೀಷ್ಮಪರ್ವವು ಆರಂಭಿಸಲ್ಪಟ್ಟು, ಅದರಲ್ಲಿ ಮೊದಲು ಭೀಷ್ಮಾಭಿಷೇಕಪರ್ವವೂ, ಆಮೇಲೆ ಜಂಬೂಖಂಡನಿರ್ಮಾಣ ದ್ವೀಪ

ವಿವರಣಗಳನ್ನೊಳಗೊಂಡ ಭೂಮಿಪರ್ವವೂ (ಇದರಲ್ಲಿ ವ್ಯಾಸಮುನಿಯು ಸಂಜಯನಿಗೆ ದಿವ್ಯಚಕ್ಷುಸ್ಸನ್ನು ಅನುಗ್ರಹಿಸಿದುದೂ,) ಆಮೇಲೆ ಭಗವದ್ಗೀತಾಪರ್ವವೂ, ಕೊನೆಗೆ ಭೀಷ್ಮವಧಪರ್ವವೂ, ಹೀಗೆ ನಾಲ್ಕು ಉಪ ಉಪಪರ್ವಗಳು ಸೇರಿರುವುವು.

ಆಮೇಲೆ ದ್ರೋಣಪರ್ವದಲ್ಲಿ ಕ್ರಮವಾಗಿ ದ್ರೋಣಾಭಿಷೇಕ, ಸಂಶಪ್ತಕವಧ, ಅಭಿಮನ್ಯುವಧ, ಅರ್ಜುನಪ್ರತಿಜ್ಞೆ, ಜಯದ್ರಥವಧ, ಘಟೋತ್ಕಚವಧ, ಅತ್ಯದ್ಭುತವಾದ ದ್ರೋಣವಧಪರ್ವ, ನಾರಾಯಣಾಸ್ತ್ರ ಮೋಕ್ಷಪರ್ವಗಳೆಂಬ ಎಂಟು ಉಪಪರ್ವಗಳಿರುವುವು.

ಆಮೇಲೆ ಕರ್ಣಪರ್ವವೊಂದೇ ಸವಿಸ್ತರವಾಗಿ ನಿರೂಪಿಸಲ್ಪಡುವುದು.

ಆಮೇಲೆ ಶಲ್ಯಪರ್ವದಲ್ಲಿ ಕ್ರಮವಾಗಿ, ಶಲ್ಯವಧ, ಹ್ರದಪ್ರವೇಶ, ಗದಾಯುದ್ಧಪರ್ವಗಳೆಂಬ ಮೂರು ಉಪಪರ್ವಗಳು ಹೇಳಲ್ಪಡುವುವು. (ಇದರಲ್ಲಿಯೇ ಪುಣ್ಯತೀರ್ಥಗಳನ್ನೂ, ರಾಜವಂಶಗಳನ್ನೂ ವಿವರಿಸತಕ್ಕ ಸಾರಸ್ವತಪರ್ವವಿರುವುದು.)

ಅದರಿಂದಾಚೆಗೆ ಹತ್ತನೆಯದಾದ ಸೌಪ್ತಿಕಪರ್ವದಲ್ಲಿ ಸೌಪ್ತಿಕಪರ್ವ, ಐಷೀಕಪರ್ವಗಳೆಂಬ ಎರಡು ಉಪಪರ್ವಗಳಿರುವುವು.

ಆಮೇಲೆ ಸ್ತ್ರೀಪರ್ವದಲ್ಲಿ, ಜಲಪ್ರದಾನಪರ್ವ, ಸ್ತ್ರೀವಿಲಾಪಪರ್ವ, ಶ್ರಾದ್ಧಪರ್ವಗಳೆಂಬ ಮೂರು ಉಪಪರ್ವಗಳುಂಟು. (ಇದಕ್ಕೆ ಸೇರಿದಂತೆಯೇ ಬ್ರಾಹ್ಮಣವೇಷಧಾರಿಯಾಗಿ ಬಂದ ಚಾರ್ವಾಕನೆಂಬ ರಾಕ್ಷಸನನ್ನು ನಿಗ್ರಹಿಸಿದುದು. ಧರ್ಮರಾಜನಿಗೆ ಪಟ್ಟಾಭಿಷೇಕವಾದುದು. ಗೃಹವಿಭಾಗಗಳನ್ನು ಮಾಡಿದುದು. ಈ ಕಥೆಗಳೆಲ್ಲವೂ ಚಿಕ್ಕ ಪರ್ವಗಳಾಗಿ ವಿವರಿಸಲ್ಪಡುವುವು.)

ಆಮೇಲೆ ಹನ್ನೆರಡನೆಯದಾದ ಶಾಂತಿಪರ್ವವು ಆರಂಭಿಸಲ್ಪಟ್ಟು, ಅದರಲ್ಲಿ ರಾಜಧರ್ಮಾನುಶಾಸನ, ಆಪದ್ಧರ್ಮ, ಮೋಕ್ಷಧರ್ಮಗಳೆಂಬ ಮೂರು ಉಪಪರ್ವಗಳು ಸೇರುವುವು. (ಇದಕ್ಕೆ ಸೇರಿದಂತೆ ಶುಕಪ್ರಶ್ನಾಭಿಗಮನ,

ಬ್ರಹ್ಮಪ್ರಶ್ನಾನುಶಾಸನ, ದುರ್ವಾಸನ ಪ್ರಾದುರ್ಭಾವ, ಅವನು ಮಾಯೆಯಿಂದ ಮಾಡಿದ ಸಂವಾದಗಳು, ಇವೆಲ್ಲವೂ ಪ್ರತ್ಯೇಕಪ್ರಕರಣಗಳಾಗಿ ಸೇರಿರುವುವು.)

ಅದರಿಂದಾಚೆಗೆ ಹದಿಮೂರನೆಯದಾದ ಆನುಶಾಸನಿಕಪರ್ವದಲ್ಲಿ, ದಾನಧರ್ಮಪರ್ವ, ಭೀಷ್ಮಸ್ವರ್ಗಾರೋಹಣಪರ್ವಗಳೆಂಬೀ ಎರಡು ಉಪಪರ್ವಗಳು ಹೇಳಲ್ಪಡುವುವು.

ಆಮೇಲೆ ಸರ್ವಪಾಪನಿವಾರಕವಾದ ಅಶ್ವಮೇಧಿಕಪರ್ವವು. ಇದರಲ್ಲಿ ಅಶ್ವಮೇಧಪರ್ವ, ಅನುಗೀತಾಪರ್ವ, ಅಧ್ಯಾತ್ಮಪರ್ವಗಳೆಂಬ ಮೂರು ಉಪಪರ್ವಗಳುಂಟು.

ಆಮೇಲೆ ಆಶ್ರಮವಾಸಪರ್ವವು. ಇದರಲ್ಲಿ ಆಶ್ರಮವಾಸ, ಪುತ್ರದರ್ಶನ, ನಾರದಾಗಮನಗಳೆಂಬ ಮೂರು ಉಪಪರ್ವಗಳುಂಟು.

ಅದರಿಂದಾಚೆಗೆ ಮಹಾಭಯಂಕರವಾದ ಮೌಸಲಪರ್ವವು ಹದಿನಾರನೆಯದು.

ಆಮೇಲೆ ಮಹಾಪ್ರಸ್ಥಾನಿಕಪರ್ವವು ಹದಿನೇಳನೆಯದು.

ಅದರಿಂದಾಚೆಗೆ ಸ್ವರ್ಗಾರೋಹಣಪರ್ವವು ಹದಿನೆಂಟನೆಯದು. ಇದೇ ಕೊನೆಯ ಪರ್ವವು.

ಈ ಹದಿನೆಂಟುಪರ್ವಗಳಿಂದಾಚೆಗೆ ಖಿಲವೆಂದು ಕರೆಯಲ್ಪಡುವ ಹರಿವಂಶವೆಂಬ ಪುರಾಣವುಂಟು. ಅದರಲ್ಲಿ ಮೊದಲು ಹರಿವಂಶಪರ್ವವೂ, ಆಮೇಲೆ ಶಿಶುರೂಪದಿಂದಿದ್ದ ಶ್ರೀವಿಷ್ಣುವಿನ ಚರ್ಯೆಗಳನ್ನೂ ಕಂಸವಧವೃತ್ತಾಂತವನ್ನೂ ಒಳಕೊಂಡ ವಿಷ್ಣುಪರ್ವವೂ ಸೇರಿರುವುವು. ಅದಕ್ಕೆ ಮೇಲೆ ಅತ್ಯಾಶ್ಚರ್ಯಕರವಾದ ಭವಿಷ್ಯವೆಂಬ ಪರ್ವವಿರುವುದು. ಅದೂ ಖಿಲಗಳಲ್ಲಿಯೇ ಸೇರಿರುವುದು. ಓ ವ್ಯಾಸಮಹರ್ಷಿಗಳೇ! ಈ ನೂರು ಪರ್ವಗಳನ್ನೂ ಮಹಾತ್ಮನಾದ ವೇದವ್ಯಾಸಮುನಿಯು ಪೂರ್ಣವಾಗಿ ರಚಿಸಿರುವನು. ಅವುಗಳಲ್ಲಿ ಪ್ರಧಾನಗಳಾದ ಹದಿನೆಂಟುಪರ್ವಗಳನ್ನು ಮಾ

ತ್ರವೇ ರೋಮಹರ್ಷಣಪುತ್ರನಾದ ಸೂತಪೌರಾಣಿಕನು ನೈಮಿಶಾರಣ್ಯದಲ್ಲಿ ಋಷಿಗಳಮುಂದೆ ಹೇಳಿರುವನು. ಇದೇ ಭಾರತದಲ್ಲಿರುವ ಪರ್ವಸಂಗ್ರಹವು.

ಪೌಷ್ಯ, ಪೌಲೋಮ, ಆಸ್ತೀಕ, ವಂಶಾವತರಣ, ಸಂಭವ, ಜತುಗೃಹದಹನ, ಹಿಡಿಂಬವಧ, ಬಕವಧ, ಚೈತ್ರರಥ, ಪಾಂಚಾಲೀಸ್ವಯಂವರ, ವೈವಾಹಿಕ, ವಿದುರಾಗಮನ, ರಾಜ್ಯಲಾಭ, ಅರ್ಜುನನವನವಾಸ, ಸುಭದ್ರಾಹರಣ, ಹರಣಾಹರಣ, ಖಾಂಡವದಹನ, ಮಯದರ್ಶನಗಳೆಂಬ ಉಪಪರ್ವಗಳು ಆದಿಪರ್ವದಲ್ಲಿ ಸೇರಿರುವುವು. ಇವುಗಳಲ್ಲಿ ಮೊದಲನೆಯದಾದ ಪೌಷ್ಯಪರ್ವದಲ್ಲಿ ಉತಂಕಮಹಾತ್ಮ್ಯವು ವರ್ಣಿಸಲ್ಪಡುವುದು. ಪೌಲೋಮಪರ್ವದಲ್ಲಿ ಭೃಗುವಂಶದ ವಿಸ್ತಾರವು ಹೇಳಲ್ಪಡುವುದು. ಆಸ್ತೀಕಪರ್ವದಲ್ಲಿ ಸರ್ಪಗಳ ಉತ್ಪತ್ತಿಯೂ, ಗರುಡಜನನವೂ, ಕ್ಷೀರಸಮುದ್ರಮಥನವೂ, ಉಚ್ಚೈಶ್ಶ್ರವಸ್ಸೆಂಬ ಕುದುರೆಯು ಹುಟ್ಟಿದುದೂ, ಜನಮೇಜಯನ ಸರ್ಪಯಾಗದಲ್ಲಿ ಮಹಾತ್ಮರಾದ ಭರತವಂಶರಾಜರ ಕಥಾಪ್ರಸ್ತಾವವೂ ವಿವರಿಸಲ್ಪಡುವುವು. ಅದರಿಂದಾಚೆಗೆ ಸಂಭವಪರ್ವದಲ್ಲಿ ಅನೇಕ ರಾಜರ ಮತ್ತು ವೇದವ್ಯಾಸಮಹರ್ಷಿಯ ವೃತ್ತಾಂತಗಳೂ, ದೇವತೆಗಳು ಭೂಮಿಯಲ್ಲಿ ತಮ್ಮತಮ್ಮ ಅಂಶದಿಂದ ಅವತರಿಸಿದುದೂ, ದೈತ್ಯ, ದಾನವ, ಯಕ್ಷ, ಗಂಧರ್ವ, ನಾಗರೇ ಮೊದಲಾದ ದೇವಜಾತಿಯವರ, ಪಕ್ಷಿ ಮೊದಲಾದ ಇತರ ಪ್ರಾಣಿಗಳ ಉತ್ಪತ್ತಿಕ್ರಮವೂ, ಮಹಾತಪಸ್ವಿಯಾದ ಕಣ್ವಮಹರ್ಷಿಯ ಆಶ್ರಮದಲ್ಲಿ ದುಷ್ಯಂತರಾಜನಿಗೆ ಶಕುಂತಲೆಯಲ್ಲಿ ಭರತನು ಹುಟ್ಟಿದುದೂ, ಅವನ ಹೆಸರಿನಿಂದಲೇ ಆ ಕುಲಕ್ಕೆ ಭಾರತವೆಂಬ ಪ್ರಸಿದ್ಧಿಯುಂಟಾದುದೂ, ಶಂತನುವಿನಿಂದ ಭಾಗೀರಥಿಯಲ್ಲಿ ಮಹಾತ್ಮರಾದ ವಸುಗಳ ಜನನವೂ, ತಿರುಗಿ ಅವರು ಸ್ವರ್ಗಕ್ಕೆ ಹೋದುದೂ, ಅವರ ತೇಜಸ್ಸಿನ ಅಂಶಗಳು ಗಂಗಾಗರ್ಭದಲ್ಲಿ ಸೇರಿದುದೂ, ಅದರಿಂದ ಭೀಷ್ಮನ ಜನನವೂ, ಈತನು ರಾಜ್ಯವನ್ನು ಬಿಟ್ಟು ದೃಢವಾದ ಬ್ರಹ್ಮಚರ್ಯವನ್ನು ಹಿಡಿದು, ಆ ಪ್ರತಿಜ್ಞೆಯನ್ನು ನೆರವೇರಿಸಿದುದೂ, ಚಿತ್ರಾಂಗದನನ್ನು ರಕ್ಷಿ

ಸಿದುದು, ಚಿತ್ರಾಂಗದನು ಹತನಾದಮೇಲೆ ಕಿರಿಯತಮ್ಮನಾದ ವಿಚಿತ್ರ ವೀರ್ಯನನ್ನು ರಕ್ಷಿಸಿ ಅವನನ್ನು ರಾಜ್ಯಕ್ಕೆ ತಂದುದು, ಧರ್ಮದೇವತೆಯು ಅಣಿಮಾಂಡವ್ಯನ ಶಾಪದಿಂದ ಮನುಷ್ಯಯೋನಿಯಲ್ಲಿ ವಿದುರನಾಗಿ ಹುಟ್ಟಿದ ಕಥೆ, ವ್ಯಾಸಮುನಿಯಿಂದ ಧೃತರಾಷ್ಟ್ರ ಪಾಂಡುಗಳ ಜನನ, ದೂರ್ವಾಸನ ವರದಾನದಿಂದ ಪಾಂಡವರು ಹುಟ್ಟಿದುದು, ಪಾಂಡವರನ್ನು ವಾರಣಾವತಕ್ಕೆ ಕಳುಹಿಸುವ ವಿಷಯದಲ್ಲಿ ದುರ್ಯೋಧನನ ದುರಾಲೋಚನೆ, ಅವನು ಅವರನ್ನು ವಂಚಿಸುವುದಕ್ಕಾಗಿ ಪುರೋಚನನನ್ನು ಅವರಬಳಿಗೆ ಕಳುಹಿಸಿದುದು, ಪಾಂಡವರ ಪ್ರಯಾಣಕಾಲದಲ್ಲಿ ವಿದುರನು ಅವರನ್ನು ಅಪಾಯದಿಂದ ತಪ್ಪಿಸುವುದಕ್ಕಾಗಿ ಧರ್ಮರಾಜನಿಗೆ ಮ್ಲೇಚ್ಛಭಾಷೆಯಿಂದ ಹಿತೋಪದೇಶವನ್ನು ಮಾಡಿದುದು, ಅರಗಿನ ಮನೆಯಲ್ಲಿ ಕಾವಲಿದ್ದ ಬೇಡಿತಿಯೂ, ಅವಳ ಐದುಮಂದಿ ಮಕ್ಕಳೂ, ಪುರೋಚನನೂ, ಅದರಲ್ಲಿಯೇ ದಗ್ಧರಾದುದು, ಈ ಕಥೆಗಳೆಲ್ಲವೂ ಹೇಳಲ್ಪಡುವುವು. ಅದರಿಂದಾಚೆಗೆ ಹೈಡಿಂಬಪರ್ವದಲ್ಲಿ ಪಾಂಡವರು ಸುರಂಗಮಾರ್ಗದಿಂದ ಒಂದು ವನಕ್ಕೆ ಬಂದಾಗ, ಅಲ್ಲಿ ಹಿಡಿಂಬೆಯನ್ನು ಕಂಡುದು, ಭೀಮನಿಂದ ಹಿಡಿಂಬವಧೆ, ಘಟೋತ್ಕಚನ ಜನನ, ಆಮೇಲೆ ಪಾಂಡವರು ವ್ಯಾಸಮಹರ್ಷಿಯನ್ನು ಕಂಡು ಅವರ ಆಜ್ಞೆಯಿಂದ ಏಕಚಕ್ರಪುರಕ್ಕೆ ಹೋಗಿ, ಬೇರೆ ಯಾರಿಗೂ ತಿಳಿಯದಂತೆ ಬ್ರಾಹ್ಮಣವೇಷದಿಂದ ಒಬ್ಬ ಬ್ರಾಹ್ಮಣನ ಮನೆಯಲ್ಲಿಳಿದುದು, ಇವೆಲ್ಲ ವರ್ಣಿಸಲ್ಪಡುವುವು. ಅದರಿಂದಾಚೆಗೆ ಬಕವಧವೂ, ಅದರಿಂದ ಪುರಜನರ ಆಶ್ಚರ್ಯವೂ ವರ್ಣಿಸಲ್ಪಡುವುವು. ಆಮೇಲೆ ದ್ರೌಪದೀ ಧೃಷ್ಟದ್ಯುಮ್ನರ ಉತ್ಪತ್ತಿಕ್ರಮವೂ, ಪಾಂಡವರು ಒಬ್ಬ ಬ್ರಾಹ್ಮಣನ ಮೂಲಕವಾಗಿ ದ್ರೌಪದೀಸ್ವಯಂವರ ವೃತ್ತಾಂತವನ್ನು ಕೇಳಿ, ವ್ಯಾಸಾಜ್ಞೆಯಿಂದ ಪಾಂಚಾಲನಗರಕ್ಕೆ ಹೊರಟುದು, ದಾರಿಯಲ್ಲಿ ಅರ್ಜುನನು ಅಂಗಾರಪರ್ಣನೆಂಬ ಗಂಧರ್ವನನ್ನು ಜಯಿಸಿದುದು, ಆಮೇಲೆ ಪಾಂಡವರಿಗೆ ಅವನೊಡನೆ ಸಖ್ಯ, ಅವನು ಪಾಂಡವರಿಗೆ ಅತ್ಯುತ್ತಮವಾದ ತಪತ್ಯುಪಾಖ್ಯಾನ, ವಸಿಷ್ಠೋಪಾಖ್ಯಾನ, ಔರ್ವೋಪಾಖ್ಯಾನಗಳನ್ನು ಹೇಳಿದುದು, ಆಮೇಲೆ ಪಾಂಚಾಲನಗರದಲ್ಲಿ ಅರ್ಜುನನು ಸಮಸ್ತ ರಾಜರ ಮುಂದೆ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು

ಪಡೆದುದು, ಆಗ ಅಸೂಯೆಯಿಂದ ಇದಿರಿಸಿಬಂದ ಕರ್ಣಶಲ್ಯಾದಿ ರಾಜರನ್ನು ಭೀಮಾರ್ಜುನರಿಬ್ಬರೂ ಯುದ್ಧದಲ್ಲಿ ಸೋಲಿಸಿದುದು, ಆಗ ಬಲರಾಮಕೃಷ್ಣರಿಬ್ಬರೂ ಬ್ರಾಹ್ಮಣವೇಷದಲ್ಲಿದ್ದ ಪಾಂಡವರ ಅದ್ಭುತವೀರ್ಯದಿಂದ ಅವರ ನಿಜಸ್ಥಿತಿಯನ್ನು ಕಂಡುಕೊಂಡು, ಅವರು ಇಳಿದಿದ್ದ ಕುಂಬಾರನ ಮನೆಗೆ ಹೋಗಿ, ಅವರೊಡನೆ ಸ್ನೇಹ ಸಲ್ಲಾಪಗಳನ್ನು ನಡೆಸಿದುದು, ಇವೆಲ್ಲ ವರ್ಣಿಸಲ್ಪಟ್ಟಿವೆ. ಆಮೇಲೆ ದ್ರುಪದರಾಜನು ಪಾಂಡವರೈದುಮಂದಿಗೂ ದ್ರೌಪದಿಯೊಬ್ಬಳೇ ಪತ್ನಿಯಾಗುವ ವಿಚಾರವನ್ನು ಕುರಿತು ಸಂದೇಹಿಸಿದುದೂ, ಅದ್ಭುತವಾದ ಪಂಚೇಂದ್ರೋಪಾಖ್ಯಾನವೂ, ಆಮೇಲೆ ಮನುಷ್ಯಸಾಮಾನ್ಯವಲ್ಲದಹಾಗೆ ದೇವವಿಹಿತವಾಗಿ ನಡೆದ ದ್ರೌಪದಿಯ ವಿವಾಹಕ್ರಮವೂ ಇವೆಲ್ಲ ವರ್ಣಿಸಲ್ಪಡುವುವು. ಆಮೇಲೆ ಧೃತರಾಷ್ಟ್ರನು ವಿದುರನನ್ನು ಪಾಂಡವರಬಳಿಗೆ ಕಳುಹಿಸಿದುದು, ಕೃಷ್ಣದರ್ಶನವಾದುದು, ಪಾಂಡವರು ಖಾಂಡವಪ್ರಸ್ಥದಲ್ಲಿ ವಾಸಿಸಿದುದು, ಅವರಿಗೆ ಅರ್ಧರಾಜ್ಯವನ್ನು ಕೊಟ್ಟುದು, ನಾರದಾಜ್ಞೆಯಿಂದ ಪಾಂಡವರು ದ್ರೌಪದಿಯ ವಿಷಯದಲ್ಲಿ ಒಂದು ಸಂಕೇತವನ್ನು ಮಾಡಿಕೊಂಡುದು, ಸುಂದೋಪಸುಂದರ ಕಥೆ, ಇವೆಲ್ಲ ವರ್ಣಿಸಲ್ಪಡುವುವು. ಆಮೇಲೆ ಧರ್ಮರಾಜನು ದ್ರೌಪದಿಯೊಡನೆ ರಹಸ್ಯವಾಗಿ ಸರಸವಾಡುತ್ತಿದ್ದಾಗ ಅರ್ಜುನನು ಒಳಗೆ ಪ್ರವೇಶಿಸಿ, ಅಲ್ಲಿಂದ ಆಯುಧವನ್ನು ತಂದು ಒಬ್ಬ ಬ್ರಾಹ್ಮಣನ ಕಷ್ಟವನ್ನು ಬಿಡಿಸಿದುದು, ಆಮೇಲೆ ತಾವು ಮಾಡಿಕೊಂಡ ನಿಯಮವನ್ನು ಪರಿಪಾಲಿಸುವುದಕ್ಕಾಗಿ ಅರ್ಜುನನು ವನವಾಸಕ್ಕೆ ಹೊರಟುದು, ಆಗ ಮಾರ್ಗದಲ್ಲಿ ಉಲೂಪಿಯೆಂಬ ನಾಗಕನ್ಯೆಯನ್ನು ವರಿಸಿದುದು, ಪುಣ್ಯತೀರ್ಥಯಾತ್ರೆಗಳು, ಬಭ್ರುವಾಹನನ ಜನನ, ಪಂಚಾಪ್ಸರಸ್ಸೆಂಬ ತೀರ್ಥಗಳಲ್ಲಿ ಬ್ರಹ್ಮರ್ಷಿಶಾಪದಿಂದ ಮೊಸಳೆಗಳಾಗಿದ್ದ ಐದುಮಂದಿ ಅಪ್ಸರಸಿಯರಿಗೆ ಶಾಪವಿಮೋಚನವಾದುದು, ಕೃಷ್ಣನು ಪ್ರಭಾಸತೀರ್ಥದಲ್ಲಿ ಅರ್ಜುನನೊಡನೆ ಸೇರಿದುದು, ದ್ವಾರಕಾನಗರದಲ್ಲಿ ಸುಭದ್ರಾರ್ಜುನರ ಪರಸ್ಪರಾನುರಾಗಗಳು, ಕೃಷ್ಣಾನುಮತಿಯಿಂದ ಅರ್ಜುನನು ಅವಳನ್ನು ವರಿಸಿದುದು, ಶ್ರೀಕೃಷ್ಣನು ಹರಣವನ್ನೆತ್ತಿಕೊಂಡು ಬಂದಮೇಲೆ, ಸುಭದ್ರೆಯಲ್ಲಿ ಮಹಾತೇಜಸ್ವಿಯಾದ ಅಭಿಮನ್ಯುವು ಹುಟ್ಟಿದುದು, ದ್ರೌಪದಿಯಲ್ಲಿ ಉಪಪಾಂಡ

ವರು ಜನಿಸಿದುದು, ಇವೆಲ್ಲ ವರ್ಣಿತಗಳಾಗಿವೆ. ಆಮೇಲೆ ಕೃಷ್ಣಾರ್ಜುನರಿಬ್ಬರೂ ಯಮುನಾತೀರಕ್ಕೆ ವಿಹಾರಾರ್ಥವಾಗಿ ಹೋದುದು, ಅಲ್ಲಿ ಕೃಷ್ಣನಿಗೆ ಚಕ್ರವೂ, ಅರ್ಜುನನಿಗೆ ಧನುಸ್ಸೂ ಲಭಿಸಿದುದು, ಖಾಂಡವವನದಹನ, ಆಗ ಅಗ್ನಿಯಿಂದ ಮಯನೂ, ತಕ್ಷಕಪುತ್ರನಾದ ಅಶ್ವಸೇನನೆಂಬ ನಾಗನೂ ತಪ್ಪಿಸಿಕೊಂಡುದು, ಮಂದಪಾಲಮಹರ್ಷಿಗೆ ಶಾರ್ಙ್ಗಿಯೆಂಬ ಪಕ್ಷಿಯಲ್ಲಿ ಪುತ್ರೋತ್ಪತ್ತಿ, ಇವೆಲ್ಲ ವರ್ಣಿತವಾಗಿವೆ. ಇವೆಲ್ಲವೂ ಆದಿಪರ್ವದೊಳಗಿನ ವಿಷಯಗಳು. ಭಾರತದಲ್ಲಿ ಇದೇ ಮೊದಲನೆಯ ಪರ್ವವು. ಈ ಕಥೆಗಳೆಲ್ಲವೂ ಬಹಳ ವಿವರವಾಗಿ ತಿಳಿಯುವಂತೆ ಮಹಾತ್ಮನಾದ ವ್ಯಾಸನು ಇವುಗಳನ್ನು *ಇನ್ನೂರಇಪ್ಪತ್ತೇಳು ಅಧ್ಯಾಯಗಳನ್ನಾಗಿ ರಚಿಸಿರುವನು. ಈ ಅಧ್ಯಾಯಗಳಲ್ಲಿ ಮೊತ್ತಕ್ಕೆ ಎಂಟುಸಾವಿರದ ಎಂಟುನೂರ ಎಂಭತ್ತುನಾಲ್ಕು ಶ್ಲೋಕಗಳಿರುವುವು.

ಆಮೇಲೆ ಎರಡನೆಯದಾದ ಸಭಾಪರ್ವವು ಅನೇಕ ವೃತ್ತಾಂತಗಳನ್ನೊಳಕೊಂಡಿರುವುದು. ಪಾಂಡವರ ಸಭೆ, ಕಿಂಕರದರ್ಶನ, ನಾರದಮುನಿಯು ಲೋಕಪಾಲರ ಸಭಾಸನ್ನಿವೇಶಗಳನ್ನು ವರ್ಣಿಸಿದುದು, ರಾಜಸೂಯಾರಂಭ, ಜರಾಸಂಧವಧೆ, ಕೃಷ್ಣನು ಗಿರಿವ್ರಜದಲ್ಲಿ ಬಂಧಿಸಲ್ಪಟ್ಟಿದ್ದ ರಾಜರನ್ನು ಬಿಡಿಸಿದುದು, ಪಾಂಡವರ ದಿಗ್ವಿಜಯ, ಧರ್ಮರಾಜನ ರಾಜಸೂಯಮಹಾಯಜ್ಞದಲ್ಲಿ ಅನೇಕರಾಜರು ಬಂದು ನೆರೆದು, ಸತ್ಕಾರಗಳನ್ನು ಹೊಂದಿದುದು, ಅಲ್ಲಿನ ಸತ್ಕಾರವಿಷಯದಲ್ಲಿ ವಿವಾದಗಳುಂಟಾಗಿ ಕೃಷ್ಣನಿಂದ ಶಿಶುಪಾಲನು ಸಂಹೃತನಾದುದು, ಆ ಯಾಗಕಾಲದಲ್ಲಿ ಧರ್ಮರಾಜನ ಮಹಾವೈಭವವನ್ನೂ, ಐಶ್ವರ್ಯವನ್ನೂ ನೋಡಿ ದುರ್ಯೋಧನನಿಗುಂಟಾದ ಅಸೂಯೆ ಮತ್ತು ಮಾತ್ಸರ್ಯಗಳು, ಸಭಾಸ್ಥಾನದಲ್ಲಿ ದುರ್ಯೋಧನನ ಅಜ್ಞತೆಯನ್ನು ಕುರಿತು ಭೀಮನು ನಕ್ಕುದು, ಆ ಅವಮಾನದಿಂದ

---

* ಈ ಅಧ್ಯಾಯದಲ್ಲಿ ಕೊಟ್ಟಿರುವ ಅಧ್ಯಾಯಸಂಖ್ಯೆ ಮತ್ತು ಶ್ಲೋಕಸಂಖ್ಯೆ, ಇವುಗಳಿಗೂ, ಮುಂದೆ ಆಯಾ ಪರ್ವದಲ್ಲಿರುವ ಅಧ್ಯಾಯಗಳ ಮತ್ತು ಶ್ಲೋಕಗಳ ಸಂಖ್ಯೆಗೂ ಬಹಳ ವ್ಯತ್ಯಾಸಗಳಿವೆ. ಅಲ್ಲಲ್ಲಿ ಅಧಿಕಪಾಠಗಳಿಂದಲೂ, ಅಧ್ಯಾಯ ವಿಭಾಗಗಳಿಂದಲೂ ಈ ವ್ಯತ್ಯಾಸವುಂಟಾಗಿದೆಯೆಂದು ಊಹಿಸಬೇಕಾಗಿದೆ.

ಕುಪಿತನಾದ ದುರ್ಯೋಧನನು ಧರ್ಮರಾಜನನ್ನು ಕಪಟದ್ಯೂತಕ್ಕೆ ಎಳೆದುದು, ದ್ಯೂತದಲ್ಲಿ ಶಕುನಿಯು ಧರ್ಮರಾಜನನ್ನು ಮೋಸದಿಂದ ಸೋಲಿಸಿದುದು, ದ್ರೌಪದಿಯು ಈ ದ್ಯೂತವ್ಯಾಜದಿಂದ ಮಹಾದುಃಖಕ್ಕೊಳಗಾಗಿರಲು, ಪ್ರಾಜ್ಞನಾದ ಧೃತರಾಷ್ಟ್ರನು ಮಹಾಸಮುದ್ರದಲ್ಲಿ ಮುಳುಗಿಹೋಗುತ್ತಿರುವ ನಾವೆಯನ್ನುದ್ಧರಿಸುವಂತೆ ಆಕೆಯನ್ನು ಆ ಕಷ್ಟದಿಂದ ಉದ್ಧರಿಸಿದುದು, ಪಾಂಡವರಿಗೆ ಈ ವಿಪತ್ತು ತಪ್ಪಿಹೋದುದನ್ನು ಕಂಡು ಸಹಿಸಲಾರದೆ ತಿರುಗಿ ದುರ್ಯೋಧನನು ಪಾಂಡವರನ್ನು ಜೂಜಾಟಕ್ಕೆ ಸೆಳೆದುದು, ಆ ಜೂಜಿನಲ್ಲಿಯೂ ಅವರನ್ನು ಕಪಟದಿಂದ ಸೋಲಿಸಿ, ಅವರ ರಾಜ್ಯವನ್ನು ಕಿತ್ತುಕೊಂಡು, ಅವರನ್ನು ವನವಾಸಕ್ಕೆ ಹೊರಡಿಸಿದುದು, ಇವೆಲ್ಲವೂ ಸಭಾಪರ್ವದೊಳಗಣ ವೃತ್ತಾಂತಗಳು. ಈ ಸಭಾಪರ್ವದಲ್ಲಿ ಎಪ್ಪತ್ತೆಂಟು ಅಧ್ಯಾಯಗಳೂ, ಎರಡುಸಾವಿರದ ಐನೂರ ಹನ್ನೊಂದು ಶ್ಲೋಕಗಳೂ ಇರುವುವು.

ಅದರಿಂದಾಚೆಗೆ ಮೂರನೆಯದು ಅರಣ್ಯಪರ್ವವು. ಈ ಪರ್ವವು ಬಹಳ ದೊಡ್ಡದು. ಇದರಲ್ಲಿ ಮಹಾತ್ಮರಾದ ಪಾಂಡವರು ವನವಾಸಕ್ಕಾಗಿ ಹೊರಟಾಗ, ಪುರವಾಸಿಗಳು ಧರ್ಮರಾಜನನ್ನು ಹಿಂಬಾಲಿಸಿದುದು, ಮಹಾತ್ಮನಾದ ಧರ್ಮಪುತ್ರನು ತನ್ನಲ್ಲಿಗೆ ಬಂದ ಬ್ರಾಹ್ಮಣರನ್ನು ಭರಿಸುವುದಕ್ಕೆ ಬೇಕಾದ ಅನ್ನ, ಕಾಯಿ, ಪಲ್ಯ ಮೊದಲಾದ ಭೋಜನಪದಾರ್ಥಗಳಿಗಾಗಿ ಧೌಮ್ಯಮಹರ್ಷಿಯ ಆಜ್ಞೆಯಿಂದ ಸೂರ್ಯನನ್ನು ಆರಾಧಿಸಿದುದು, ಸೂರ್ಯಾನುಗ್ರಹದಿಂದ ಅವನಿಗೆ ಸಮೃದ್ಧವಾದ ಅನ್ನವು ಲಭಿಸಿದುದು, ಧೃತರಾಷ್ಟ್ರನು ತನಗೆ ಹಿತವನ್ನು ಹೇಳುವುದಕ್ಕಾಗಿ ಬಂದ ವಿದುರನನ್ನು ನಿರಾಕರಿಸಿ ಕಳುಹಿಸಿಬಿಟ್ಟುದು, ಆ ವಿದುರನು ಪಾಂಡವರಬಳಿಗೆ ಬಂದುದು, ದುರ್ಯೋಧನನು ಕರ್ಣನ ಪ್ರೇರಣೆಯಿಂದ ವನದಲ್ಲಿದ್ದ ಪಾಂಡವರನ್ನು ಕೊಲ್ಲುವುದಕ್ಕಾಗಿ ದುರಾಲೋಚನೆಮಾಡಿದುದು, ಈತನ ದುರಭಿಪ್ರಾಯವನ್ನು ತಿಳಿದ ವ್ಯಾಸಮುನಿಯು ಬೇಗನೆ ಬಂದು ಅವರ ಪ್ರಯಾಣವನ್ನು ತಡೆದುದು, ಸುರಭಿಯ ಉಪಾಖ್ಯಾನವು, ಮೈತ್ರೇಯನು ಬಂದು ಧೃತರಾಷ್ಟ್ರನಿಗೆ ಬುದ್ಧಿವಾದಗಳನ್ನು ಹೇಳಿದುದು; ಆ

ಮಹರ್ಷಿಯು ದುರ್ಯೋಧನನಿಗೆ ಶಾಪವನ್ನು ಕೊಟ್ಟುದು, ಭೀಮನು ಕಿರ್ಮೀರನನ್ನು ವಧಿಸಿದುದು, ಶಕುನಿಯ ಕಪಟದ್ಯೂತದಿಂದ ಪಾಂಡವರು ಸೋತುದನ್ನು ಕೇಳಿ ಪಾಂಡವರನ್ನು ನೋಡುವುದಕ್ಕಾಗಿ ಯಾದವರೂ, ಪಾಂಚಾಲರೂ ವನಕ್ಕೆ ಬಂದುದು, ಕೌರವರಮೇಲೆ ಕೋಪಾವಿಷ್ಟನಾದ ಶ್ರೀಕೃಷ್ಣನಿಗೆ ಅರ್ಜುನನು ಸಮಾಧಾನವನ್ನು ಹೇಳಿ ಕೋಪಶಾಂತಿಯನ್ನುಂಟುಮಾಡಿದುದು, ಕೃಷ್ಣನ ಮುಂದೆ ದ್ರೌಪದಿಯು ತನ್ನ ಕಷ್ಟವನ್ನು ಹೇಳಿಕೊಂಡು ವಿಲಪಿಸಿದುದು, ಕೃಷ್ಣನು ಅವಳನ್ನು ಸಮಾಧಾನಪಡಿಸಿದುದು, ಸೌಭವಧವೃತ್ತಾಂತ, ಕೃಷ್ಣನು ಸುಭದ್ರೆಯನ್ನು ಆಕೆಯ ಮಗನೊಡನೆ ದ್ವಾರಕೆಗೆ ಕರೆತಂದುದು, ಇದರಂತೆಯೇ ಧೃಷ್ಟದ್ಯುಮ್ನನು ದ್ರೌಪದಿಯ ಮಕ್ಕಳನ್ನು ತನ್ನೊಡನೆ ಪಾಂಚಾಲನಗರಿಗೆ ಕರೆತಂದುದು, ಪಾಂಡವರು ದ್ವೈತವನವನ್ನು ಪ್ರವೇಶಿಸಿದುದು, ಅಲ್ಲಿ ಧರ್ಮರಾಜನಿಗೆ ದ್ರೌಪದಿಯೊಡನೆ ನಡೆದ ಸಂವಾದಗಳು, ಭೀಮಧರ್ಮಪುತ್ರರ ಸಂವಾದಗಳು, ವ್ಯಾಸಾಗಮನ, ವ್ಯಾಸಮುನಿಯು ಧರ್ಮರಾಜನಿಗೆ ಕೆಲವು ವಿದ್ಯೆಗಳನ್ನುಪದೇಶಿಸಿದುದು, ವ್ಯಾಸರು ಹಿಂತಿರುಗಿದಮೇಲೆ ಪಾಂಡವರು ಕಾಮ್ಯಕವನಕ್ಕೆ ಹೋದುದು, ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯುವುದಕ್ಕಾಗಿ ಹೊರಟುದು, ಕಿರಾತರೂಪದಿಂದ ಬಂದ ಶಿವನೊಡನೆ ಅವನು ಯುದ್ಧಮಾಡಿದುದು, ದಿಕ್ಪಾಲದರ್ಶನ, ಅಸ್ತ್ರಲಾಭ, ಬೇರೆ ಕೆಲವು ದಿವ್ಯಾಸ್ತ್ರಗಳನ್ನು ಪಡೆದು ಬರುವುದಕ್ಕಾಗಿ ಅರ್ಜುನನು ಇಂದ್ರಲೋಕಕ್ಕೆ ಹೋದುದು, ಇದನ್ನು ಕೇಳಿ ಧೃತರಾಷ್ಟ್ರನು ಬಹಳ ಚಿಂತಾಕುಲನಾಗಿದ್ದುದು, ಆತ್ಮಜ್ಞನಾದ ಬೃಹದಶ್ವಮಹರ್ಷಿಯು ಧರ್ಮರಾಜನಬಳಿಗೆ ಬಂದುದು, ಧರ್ಮರಾಜನು ಅವನೊಡನೆ ತನ್ನ ದುಃಖಗಳನ್ನು ಹೇಳಿಕೊಂಡುದು, ಬೃಹದಶ್ವಮುನಿಯು ಧರ್ಮರಾಜನ ದುಃಖಶಾಂತಿಗಾಗಿ ಅತ್ಯಂತ ಕರುಣರಸಯುಕ್ತವಾದ ನಲೋಪಾಖ್ಯಾನವನ್ನು ವಿವರಿಸಿ, ಅದರಲ್ಲಿ ನಳದಮಯಂತಿಯರ ಸ್ಥಿತಿಗತಿಗಳನ್ನು ನಿದರ್ಶನವಾಗಿ ತೋರಿಸಿದುದು, ಮತ್ತು ಆ ಮಹರ್ಷಿಯಿಂದ ಧರ್ಮರಾಜನು ಅಕ್ಷಹೃದಯವೆಂಬ ದ್ಯೂತವಿದ್ಯೆಯನ್ನು ತಿಳಿದುದು, ಸ್ವರ್ಗದಿಂದ ಲೋಮಶಮಹರ್ಷಿಯು ಬಂದು ಧರ್ಮರಾಜನಿಗೆ ಅರ್ಜುನನು

ಸ್ವರ್ಗದಲ್ಲಿರುವ ಸಂಗತಿಯನ್ನು ತಿಳಿಸಿದುದು, ಅರ್ಜುನಸಂದೇಶವನ್ನು ಕೇಳಿದಮೇಲೆ ಧರ್ಮರಾಜನು ತೀರ್ಥಯಾತ್ರೆಗಾಗಿ ಯತ್ನಿಸಿದುದು, ಆಗ ನಾರದನು ಬಂದು ಧರ್ಮರಾಜನಿಗೆ ಅನೇಕಪುಣ್ಯತೀರ್ಥಗಳ ಪ್ರಭಾವ ವನ್ನೂ, ಅವುಗಳ ಯಾತ್ರಾಫಲವನ್ನೂ, ಪುಲಸ್ತ್ಯತೀರ್ಥಯಾತ್ರೆಯ ಫಲ ವನ್ನೂ ವಿವರಿಸಿದುದು, ಕೌಮಾರಾವಸ್ಥೆಯಲ್ಲಿಯೇ ಜಿತೇಂದ್ರಿಯನಾಗಿ ಬ್ರಹ್ಮಚಾರಿಯಾಗಿದ್ದ ಋಷ್ಯಶೃಂಗನ ಚರಿತ್ರೆ, ಮಹಾತೇಜಸ್ವಿಯಾದ ಪರಶುರಾಮನ ಚರಿತ್ರೆ, ಅವನು ಕಾರ್ತವೀರ್ಯನನ್ನೂ, ಇತರ ಹೈಹಯ ರಾಜರನ್ನೂ ವಧಿಸಿದುದು, ಪ್ರಭಾಸತೀರ್ಥದಲ್ಲಿ ಪಾಂಡವಯಾದವರ ಸಮಾಗಮ, ಸುಕನ್ಯೋಪಾಖ್ಯಾನ, ಭೃಗುಪುತ್ರನಾದ ಚ್ಯವನನು ಶರ್ಯಾ ತಿಯ ಯಜ್ಞಕಾಲದಲ್ಲಿ ಅಶ್ವಿನೀದೇವತೆಗಳಿಂದ ಸೋಮಪಾನಮಾಡಿಸಿ ದುದು, ಅವರಿಂದ ಚ್ಯವನನಿಗೆ ಯೌವನವುಂಟಾದುದು, ಮಾಂಧಾತೃ ಚರಿತ್ರೆ, ಜಂತೂಪಾಖ್ಯಾನ, ಸೋಮಕನು ಪುತ್ರಾರ್ಥವಾಗಿ ಜಂತುವೆಂಬ ತನ್ನ ಪುತ್ರನನ್ನು ಪಶುವಾಗಿ ಮಾಡಿ ಯಾಗವನ್ನು ನಡೆಸಿ ನೂರು ಮಕ್ಕಳನ್ನು ಪಡೆದುದು, ಆಮೇಲೆ ಇಂದ್ರಾಗ್ನಿಯೆಂಬ ದೇವತೆಗಳು ಶಿಬಿ ಚಕ್ರವರ್ತಿಯನ್ನು ಪರೀಕ್ಷಿಸುವುದಕ್ಕಾಗಿ ಶ್ಯೇನಕಪೋತರೂಪಗಳಿಂದ ಬಂದುದು, ಅಷ್ಟಾವಕ್ರಚರಿತ್ರೆ, ಅಷ್ಟಾವಕ್ರನು ಜನಕನ ಯಾಗದಲ್ಲಿ ವರುಣಪುತ್ರನಾದ ವಂದಿಯೊಡನೆ ವಿವಾದಮಾಡಿ ತರ್ಕವಾದದಲ್ಲಿ ಅವ ನನ್ನು ಜಯಿಸಿದುದು, ಇದರಿಂದ ಆ ಮಹರ್ಷಿಯು ಸಮುದ್ರದಲ್ಲಿ ಮುಳು ಗಿಸಲ್ಪಟ್ಟಿದ್ದ ತನ್ನ ತಂದೆಯನ್ನು ಬಿಡಿಸಿತಂದುದು, ಯವಕ್ರೀತೋಪಾ ಖ್ಯಾನ, ರೈಭ್ಯನ ಚರಿತ್ರೆ, ಪಾಂಡವರು ಗಂಧಮಾದನಪರ್ವತಕ್ಕೆ ಯಾ ತ್ರೆಹೋದುದು, ಅಲ್ಲಿನ ನಾರಾಯಣಾಶ್ರಮದಲ್ಲಿ ವಾಸಮಾಡುತಿದ್ದುದು, ಈ ನಡುವೆ ಭೀಮನು ದ್ರೌಪದಿಯ ಪ್ರಾರ್ಥನೆಯಮೇಲೆ ಸೌಗಂಧಿಕ ಪುಷ್ಪವನ್ನು ತರುವುದಕ್ಕಾಗಿ ಗಂಧಮಾದನಕ್ಕೆ ಹೋಗುತ್ತ, ನಡುದಾರಿ ಯಲ್ಲಿ ಒಂದಾನೊಂದು ಬಾಳೆಯ ತೋಪಿನಲ್ಲಿದ್ದ ಮಹಾಬಲಾಢ್ಯನಾದ ಹನುಮಂತನನ್ನು ಕಂಡುದು, ಆಮೇಲೆ ಭೀಮನು ಮಂದಾರಪುಷ್ಪ ಕ್ಕಾಗಿ ಒಂದು ತಟಾಕವನ್ನು ಕಲಕಿ, ಅಲ್ಲಿ ಮಹಾವೀರ್ಯವುಳ್ಳ ಮಣಿ ಮಂತನೇ ಮೊದಲಾದ ಯಕ್ಷರಾಕ್ಷಸರೊಡನೆ ದೊಡ್ಡ ಯುದ್ಧವನ್ನು ನಡೆ

ಸಿದುದು, ಅದರಿಂದಾಚೆಗೆ ಭೀಮನಿಂದ ಜಟಾಸುರವಧೆ, ಆಮೇಲೆ ಪಾಂಡವರು ವೃಷಪರ್ವನೆಂಬ ರಾಜನನ್ನು ಸಂಧಿಸಿದುದು, ಆಮೇಲೆ ಆರ್ಷ್ಟಿಷೇಣಮುನಿಯ ಆಶ್ರಮಕ್ಕೆ ಹೋಗಿ ಅಲ್ಲಿ ವಾಸಮಾಡುತಿದ್ದುದು, ತಿರುಗಿ ದ್ರೌಪದಿಯ ಪ್ರೇರಣೆಯಿಂದ ಭೀಮನು ಕೈಲಾಸವನ್ನೇರಿ ಅಲ್ಲಿ ಮಣಿಮಂತನೇ ಮೊದಲಾದ ಯಕ್ಷರೊಡನೆ ಘೋರಯುದ್ಧವನ್ನು ನಡೆಸಿದುದು, ಅಲ್ಲಿ ಪಾಂಡವರು ಕುಬೇರನೊಡನೆ ಸಂಧಿಸಿದುದು, ಅದೇ ಸಮಯದಲ್ಲಿ ಅರ್ಜುನನು ದಿವ್ಯಾಸ್ತ್ರಗಳನ್ನು ಪಡೆದುಬಂದು ತನ್ನ ಸಹೋದರರೊಡನೆ ಸಂಧಿಸಿದುದು, ಅರ್ಜುನನು ಇಂದ್ರನಿಗೆ ಗುರುದಕ್ಷಿಣೆಯಾಗಿ ಹಿರಣ್ಯಪುರವಾಸಿಗಳಾದ ನಿವಾತಕವಚರೊಡನೆ ಯುದ್ಧವನ್ನು ನಡೆಸಿದುದು, ಮತ್ತು ಆತನು ನಿವಾತಕವಚ, ಪೌಲೋಮ, ಕಾಲಕೇಯರೊಡನೆ ಯುದ್ಧಮಾಡಿ ತಾನು ಅವರನ್ನು ಕೊಂದುಬಂದ ವೃತ್ತಾಂತವನ್ನು ಧರ್ಮರಾಜನಿಗೆ ತಿಳಿಸಿದುದು, ಮತ್ತು ಆ ಧರ್ಮರಾಜನ ಮುಂದೆ ತನ್ನ ಪ್ರಭಾವವನ್ನು ತೋರಿಸುವುದಕ್ಕೆ ಯತ್ನಿಸಿದಾಗ ನಾರದನು ಬಂದು ಅವನನ್ನು ಬೇಡವೆಂದು ತಡೆದುದು, ಪಾಂಡವರು ಗಂಧಮಾಧನದಿಂದ ಹಿಂತಿರುಗಿದುದು, ಅವರು ಒಂದು ದುರ್ಗಮವಾದ ಕಾಡಿನಲ್ಲಿ ಬರುತ್ತಿರುವಾಗ, ಪರ್ವತದಂತೆ ದೊಡ್ಡ ಅಜಗರವು (ಬೆಟ್ಟದ ಹಾವು) ಭೀಮನನ್ನು ಹಿಡಿದುದು, ಆಗ ಧರ್ಮರಾಜನು ಆ ಸರ್ಪವು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳಿ ಭೀಮನನ್ನು ಬಿಡಿಸಿದುದು, ಆಮೇಲೆ ಪಾಂಡವರು ಕಾಮ್ಯಕವನಕ್ಕೆ ಬಂದುಸೇರಿದುದು, ಅಲ್ಲಿಗೆ ಶ್ರೀಕೃಷ್ಣನು ಬಂದುದು, ಆಮೇಲೆ ಪಾಂಡವರು ಮಾರ್ಕಂಡೇಯಮಹರ್ಷಿಯೊಡನೆ ಸೇರಿದ್ದಕಾಲದಲ್ಲಿ ಆ ಮಹರ್ಷಿಯು ಅವರಿಗೆ ಪೃಥೂಪಾಖ್ಯಾನವನ್ನೂ, ಸರಸ್ವತಿಗೂ ತಾರ್ಕ್ಷ್ಯಮುನಿಗೂ ನಡೆದ ಸಂವಾದವನ್ನೂ, ಮತ್ಸ್ಯೋಪಾಖ್ಯಾನವನ್ನೂ ವಿವರಿಸಿದುದು, ಇವೆಲ್ಲ ಇದರಲ್ಲಿ ವರ್ಣಿಸಲ್ಪಡುವುವು. ಓ ಶೌನಕಾದಿಗಳೇ! ಈ ಮಾರ್ಕಂಡೇಯ ಸಮಾಸ್ಯಾಪರ್ವವನ್ನೇ ಬೇರೆ ಒಂದು ಪುರಾಣವನ್ನಾಗಿ ಹೇಳುವರು. ಅದರಿಂದಾಚೆಗೆ ಇಂದ್ರದ್ಯುಮ್ನೋಪಾಖ್ಯಾನ, ದುಂಧುಮಾರಚರಿತ್ರೆ, ಪತಿವ್ರತೋಪಾಖ್ಯಾನ, ಆಂಗಿರಸೋಪಾಖ್ಯಾನ, ದ್ರೌಪದೀಸತ್ಯಭಾಮಾಸಂವಾದ, ಇವೆಲ್ಲವೂ ಹೇಳಲ್ಪಡುವುವು. ಅದರಿಂದಾಚೆಗೆ

ಪಾಂಡವರು ತಿರುಗಿ ದ್ವೈತವನಕ್ಕೆ ಬಂದುದು, ಅಲ್ಲಿ ದುರ್ಯೋಧನನ ಘೋಷಯಾತ್ರೆ, ಆಗ ಗಂಧರ್ವನಿಂದ ಸೆರೆಹಿಡಿಯಲ್ಪಟ್ಟ ದುರ್ಯೋಧನನನ್ನು ಅರ್ಜುನನು ಬಿಡಿಸಿದುದು, ಅಲ್ಲಿ ಧರ್ಮರಾಜನು ಸ್ವಪ್ನದಲ್ಲಿ ಮೃಗಗಳನ್ನು ಕಂಡು ಅದಕ್ಕಾಗಿ ತಿರುಗಿ ಕಾಮ್ಯಕವನಕ್ಕೆ ಹೋದುದು, ಅದರಿಂದಾಚೆಗೆ ವ್ರೀಹಿದ್ರೌಣಿಕವೆಂಬ ಆಖ್ಯಾನ, ದೂರ್ವಾಸವೃತ್ತಾಂತ, ಇವೆಲ್ಲ ಹೇಳಲ್ಪಡುವುದು. ಆಮೇಲೆ ಜಯದ್ರಥನು ದ್ರೌಪದಿಯನ್ನು ಅಪಹರಿಸಿಕೊಂಡು ಹೋಗುವಾಗ, ಭೀಮನು ಅವನನ್ನು ಬೆನ್ನಟ್ಟಿ ಹಿಡಿದು ಅವನನ್ನು ವಿರೂಪವಮಾಡಿದುದು, ಶ್ರೀರಾಮಚರಿತ್ರೆ ಮತ್ತು ಸಾವಿತ್ರೀ ಚರಿತ್ರಗಳು, ಆಮೇಲೆ ಇಂದ್ರನು ಕರ್ಣನ ಕುಂಡಲವನ್ನು ಯಾಚಿಸಿದುದೂ, ಆ ಕುಂಡಲವನ್ನು ಕೊಟ್ಟುದಕ್ಕಾಗಿ ಇಂದ್ರನು ಕರ್ಣನಲ್ಲಿ ಪ್ರಸನ್ನನಾಗಿ ಒಂದುಸಾರಿ ಪ್ರಯೋಗಿಸುವುದರಿಂದ ಒಬ್ಬನನ್ನುಮಾತ್ರ ಕೊಲ್ಲತಕ್ಕ ಶಕ್ತ್ಯಾಯುಧವನ್ನು ಅವನಿಗೆ ಕೊಟ್ಟುದು, ಧರ್ಮದೇವತೆಯು ತನ್ನ ಮಗನಾದ ಧರ್ಮರಾಜನಿಗೆ ಹಿತವನ್ನುಂಟುಮಾಡಿದ ಆರಣೇಯೋಪಾಖ್ಯಾನ, ಪಾಂಡವರು ಅವನಿಂದ ವರವನ್ನು ಪಡೆದು ಅಲ್ಲಿಂದ ಪಶ್ಚಿಮಾಭಿಮುಖವಾಗಿ ವಿರಾಟನಗರದಕಡೆಗೆ ಹೋದುದು, ಇವೆಲ್ಲವೂ ವಿವರಿಸಲ್ಪಡುವುವು. ಈ ಅರಣ್ಯಪರ್ವದಲ್ಲಿ ಇನ್ನೂರ ಅರುವತ್ತೊಂಭತ್ತು ಅಧ್ಯಾಯಗಳೂ, ಹನ್ನೊಂದುಸಾವಿರದ ಆರುನೂರ ನಾಲ್ಕು ಶ್ಲೋಕಗಳೂ ಇರುವುವು.

ಇದರಿಂದಾಚೆಗೆ ನಾಲ್ಕನೆಯದಾದ ವಿರಾಟಪರ್ವವು. ಇದೂ ಬಹಳ ವಿಸ್ತಾರವಾಗಿ ಅನೇಕ ಕಥಾವಿಶೇಷಗಳನ್ನೊಳಕೊಂಡಿರುವುದು. ಪಾಂಡವರು ವಿರಾಟನಗರದ ಹೊರಗಿನ ಶ್ಮಶಾನಪ್ರದೇಶವಲ್ಲಿ ಒಂದಾನೊಂದು ದೊಡ್ಡ ಬನ್ನೀಮರವನ್ನು ನೋಡಿ, ಅದರಮೇಲೆ ತಮ್ಮ ಆಯುಧಗಳನ್ನೆಲ್ಲ ಬಚ್ಚಿಟ್ಟುದು, ಅವರೆಲ್ಲರೂ ವೇಷಾಂತರದಿಂದ ವಿರಾಟರಾಜನ ನಗರದಲ್ಲಿ ವಾಸಮಾಡುತಿದ್ದುದು, ಆಗ ದುರ್ಬುದ್ಧಿಯಿಂದ ದ್ರೌಪದಿಯನ್ನು ಕಾಮಿಸಿದ ಕೀಚಕನನ್ನು ಭೀಮನು ವಧಿಸಿದುದು, ಇಷ್ಟರಲ್ಲಿ ಇತ್ತಲಾಗಿ ದುರ್ಯೋಧನನು ಪಾಂಡವರನ್ನು ಕಂಡುಹಿಡಿಯುವುದಕ್ಕಾಗಿ ನಾನಾ

ದಿಕ್ಕುಗಳಿಗೆ ನಿಪುಣರಾದ ಗೂಢಚಾರರನ್ನು ಕಳುಹಿಸಿದುದು, ಆ ಗೂಢಚಾರರು ಎಲ್ಲಿಯೂ ಈ ಪಾಂಡವರ ಸುಳಿವನ್ನು ತಿಳಿಯಲಾರದೆ ಹಿಂತಿರುಗಿ ಬಂದುದು, ಆಮೇಲೆ ದುರ್ಯೋಧನನು ಕೀಚಕವಧವನ್ನು ಕೇಳಿ ಸಂದೇಹಪಟ್ಟು, ವಿರಾಟನ ಪಶುಗಳನ್ನು ಹಿಡಿಯುವುದಕ್ಕಾಗಿ ಮೊದಲು ದಕ್ಷಿಣ ದಿಕ್ಕಿನಿಂದ ತ್ರಿಗರ್ತದೇಶದವರನ್ನು ಕಳುಹಿಸಿದುದು, ವಿರಾಟನು ಅವರೊಡನೆ ಯುದ್ಧವನ್ನು ನಡೆಸಿದುದು, ಆ ಯುದ್ಧದಲ್ಲಿ ವಿರಾಟನನ್ನು ಶತ್ರುಗಳು ಸೆರೆಹಿಡಿದುಕೊಂಡು ಹೋಗುತ್ತಿರುವಾಗ, ಭೀಮಸೇನನು ಅವನನ್ನು ಬಿಡಿಸಿದುದು, ಪಾಂಡವರು ವಿರಾಟನ ಗೋಧನವನ್ನು ಹಿಂತಿರುಗಿಸಿ ಕರೆತಂದುದು, ಆಮೇಲೆ ದುರ್ಯೋಧನಾದಿಗಳು ಉತ್ತರದಿಕ್ಕಿನಿಂದ ತಾವೇ ಬಂದು ವಿರಾಟನ ಗೋವುಗಳನ್ನು ಹಿಡಿದುದು, ಅಲ್ಲಿ ಅರ್ಜುನನು ಕೌರವರನ್ನು ಓಡಿಸಿ ಗೋವುಗಳನ್ನು ಹಿಂತಿರುಗಿಸಿದುದು, ಆಮೇಲೆ ವಿರಾಟನು ತನ್ನ ಮಗಳಾದ ಉತ್ತರೆಯನ್ನು ಸುಭದ್ರೆಯ ಮಗನಾದ ಅಭಿಮನ್ಯುವಿಗೆ ವಿವಾಹಮಾಡಿದುದು, ಇವೆಲ್ಲವೂ ವಿರಾಟಪರ್ವದ ಕಥೆಗಳು. ವ್ಯಾಸಮಹರ್ಷಿಯು ಈ ಪರ್ವವನ್ನು ಅರುವತ್ತೇಳು ಅಧ್ಯಾಯಗಳನ್ನಾಗಿ ವಿಭಾಗಿಸಿ, ಅವುಗಳಲ್ಲಿ ಎರಡುಸಾವಿರದ ಐವತ್ತು ಶ್ಲೋಕಗಳನ್ನು ಹೇಳಿರುವನು.

ಅದರಿಂದಾಚೆಗೆ ಐದನೆಯದು ಉದ್ಯೋಗಪರ್ವವು. ಇದರಲ್ಲಿ ಪಾಂಡವರು ಶತ್ರುಗಳನ್ನು ಜಯಿಸುವ ಪ್ರಯತ್ನದಿಂದ, ವಿರಾಟನ ದೇಶದಲ್ಲಿದ್ದ ಉಪಪ್ಲಾವ್ಯವೆಂಬ ಪಟ್ಟಣದಲ್ಲಿ ಯುದ್ಧಸನ್ನಾಹಗಳನ್ನು ನಡೆಸುತಿದ್ದುದು, ಇಷ್ಟರಲ್ಲಿ ದುರ್ಯೋಧನನೂ, ಅರ್ಜುನನೂ, ಕೃಷ್ಣನ ಸಹಾಯವನ್ನು ಕೋರುವುದಕ್ಕಾಗಿ ಬಂದು, ಇಬ್ಬರೂ ಅವನನ್ನು ನಿರ್ಬಂಧಿಸಿದುದು, ಆಗ ಕೃಷ್ಣನು ತನ್ನ ಚಾತುರ್ಯದಿಂದ ಅವರನ್ನು ಕುರಿತು, "ತಾನು ಯುದ್ಧವನ್ನು ಮಾಡದೆ ಸಮಯೋಚಿತವಾದ ಮಂತ್ರಾಲೋಚನೆಗಳನ್ನು ಮಾತ್ರ ಹೇಳುವುದೊಂದು, ಇಲ್ಲವೇ ಒಂದು ಅಕ್ಷೌಹಿಣೀ ಸೈನ್ಯವನ್ನು ಯುದ್ಧಕ್ಕಾಗಿ ಕಳುಹಿಸಿಕೊಡುವುದೊಂದು, ಈ ಎರಡರಲ್ಲಿ ಯಾರಿಗೆ ಯಾವುದು ಇಷ್ಟ" ವೆಂದು ಕೇಳಿದುದು, ಆಗ ಮಂದಬುದ್ಧಿ

ಯಾದ ದುರ್ಯೋಧನನು ಸೈನ್ಯಸಹಾಯವನ್ನೂ, ಬುದ್ಧಿಶಾಲಿಯಾದ ಅರ್ಜುನನು ಶ್ರೀಕೃಷ್ಣನ ಮಂತ್ರಾಲೋಚನೆಯ ಸಹಾಯವನ್ನೂ ಅಪೇಕ್ಷಿಸಿ, ಅವರವರ ಇಷ್ಟಾರ್ಥಗಳನ್ನು ಪಡೆದು ಹೋದುದು, ಶಲ್ಯನು ಪಾಂಡವರ ಸಹಾಯಕ್ಕಾಗಿ ಬರುತಿದ್ದಾಗ, ದುರ್ಯೋಧನನು ದಾರಿಯಲ್ಲಿಯೇ ಅವನಿಗೆ ಬೇಕಾದ ಉಪಚಾರಗಳನ್ನು ಮಾಡಿ, ತನಗೆ ಸಹಾಯವನ್ನು ಕೊಡುವಂತೆ ಅವನಿಂದ ವಾಗ್ದಾನವನ್ನು ಪಡೆದುದು, ಆಮೇಲೆ ಶಲ್ಯನು ಈ ಮೋಸವನ್ನು ತಿಳಿದು ಪಾಂಡವರ ಬಳಿಗೆ ಹೋಗಿ ಸಮಾಧಾನವನ್ನು ಹೇಳುವಾಗ, ನಡುವೆ ಇಂದ್ರನು ವೃತ್ರಾಸುರನನ್ನು ಜಯಿಸಿದ ಕಥೆಯನ್ನು ಹೇಳಿದುದು, ಆಮೇಲೆ ಪಾಂಡವರು ಕೌರವರ ಬಳಿಗೆ ದ್ರುಪದರಾಜನ ಪುರೋಹಿತನನ್ನು ಕಳುಹಿಸಿದುದು, ಧೃತರಾಷ್ಟ್ರನೊಡನೆ ಅವನ ಸಂಭಾಷಣೆ, ಆಮೇಲೆ ಭೀಷ್ಮನು, ಅರ್ಜುನನು ಇಂದ್ರನನ್ನು ಜಯಿಸಿದ ವೃತ್ತಾಂತವನ್ನು ಹೇಳಲು, ಪುರೋಹಿತನು ಅದನ್ನು ಕೇಳಿ ಹಿಂತಿರುಗಿ ಬಂದುದು, ಆಮೇಲೆ ಧೃತರಾಷ್ಟ್ರನು ಸಂಧಿಗಾಗಿ ಪಾಂಡವರಬಳಿಗೆ ಸಂಜಯನನ್ನು ಕಳುಹಿಸಿದುದು, ಪಾಂಡವರೊಡನೆ ಶ್ರೀಕೃಷ್ಣನು ಸದಾಸನ್ನಿಹಿತನಾಗಿರುವುದನ್ನು ಕೇಳಿ ಚಿಂತೆಯಿಂದ ಧೃತರಾಷ್ಟ್ರನಿಗೆ ನಿದ್ರೆಹಿಡಿಯದೆ ಹೋದುದು, ಆಗ ವಿದುರನು ಧೃತರಾಷ್ಟ್ರನಿಗೆ ಬುದ್ಧಿವಾದಗಳನ್ನು ಹೇಳಿದುದು, ಚಿಂತಾಕುಲನಾಗಿದ್ದ ಧೃತರಾಷ್ಟ್ರನಿಗೆ ಸನತ್ಸುಜಾತನು ಅಧ್ಯಾತ್ಮವಿದ್ಯೆಗಳನ್ನುಪದೇಶಿಸಿದುದು, ಬೆಳಗಾದಮೇಲೆ ರಾಜಸಭೆಯಲ್ಲಿ ಸಂಜಯನು ಕೃಷ್ಣಾರ್ಜುನರಲ್ಲಿರುವ ಐಕಮತ್ಯವನ್ನು ಧೃತರಾಷ್ಟ್ರನಿಗೆ ತಿಳಿಸಿದುದು, ಆಮೇಲೆ ಶ್ರೀಕೃಷ್ಣನೇ ಸಂಧಿಕಾರ್ಯಕ್ಕಾಗಿ ಹಸ್ತಿನಾಪುರಿಗೆ ಬಂದುದು, ಅಲ್ಲಿ ಕೃಷ್ಣನು ಉಭಯಪಕ್ಷದವರಿಗೂ ಹೇಳಿದ ಹಿತವಾದಗಳನ್ನು ದುರ್ಯೋಧನನು ನಿರಾಕರಿಸಿದುದು, ದಂಭೋದ್ಭವನ ಕಥೆ, ಆಮೇಲೆ ಮಹಾತ್ಮನಾದ ಮಾತಲಿಯು ತನ್ನ ಮಗಳಿಗೆ ವರವನ್ನು ಹುಡುಕಿದುದು, ಗಾಲವಮಹರ್ಷಿಯ ಚರಿತ್ರೆ, ವಿದುಲೆಯು ತನ್ನ ಮಗನಿಗೆ ಹೇಳಿದ ಬುದ್ಧಿವಾದಗಳು, ಕರ್ಣದುರ್ಯೋಧನಾದಿಗಳು ದುರಾಲೋಚನೆಯಿಂದ ಶ್ರೀಕೃಷ್ಣನನ್ನು ಬಂಧಿಸಬೇಕೆಂದು ಯತ್ನಿಸಿದಾಗ, ಕೃಷ್ಣನು ಅಲ್ಲಿದ್ದ ರಾಜರಿಗೆ ವಿಶ್ವರೂಪವನ್ನು ತೋರಿಸಿ, ತನ್ನ ಮಹಿಮೆಯನ್ನು ಪ್ರಕ

ಟಿಸಿದುದು, ಆಮೇಲೆ ಕೃಷ್ಣನು ಉಪಾಯದಿಂದ ಕರ್ಣನನ್ನು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು ಮಿತ್ರಭೇದವನ್ನು ಮಾಡುವುದಕ್ಕೆ ಯತ್ನಿಸಿದಾಗ, ಕರ್ಣನು ಗರ್ವದಿಂದ ಅದನ್ನು ನಿರಾಕರಿಸಿದುದು, ಆಮೇಲೆ ಕೃಷ್ಣನು ಹಿಂತಿರುಗಿ ಬಂದು ಪಾಂಡವರಿಗೆ ಅಲ್ಲಿ ನಡೆದ ವೃತ್ತಾಂತವನ್ನು ಹೇಳಿದುದು, ಆಮೇಲೆ ಪಾಂಡವರು ಮಂತ್ರಾಲೋಚನೆಯನ್ನು ನಡೆಸಿ ಯುದ್ಧಸನ್ನಾಹಗಳನ್ನು ಮಾಡಿದುದು, ಇಷ್ಟರಲ್ಲಿ ಹಸ್ತಿನಾಪುರದಿಂದ ಚತುರಂಗಸೈನ್ಯಗಳು ಹೊರಟುದು, ಆ ಸೇನೆಗಳ ಸಂಖ್ಯಾವಿವರಣೆ, ಯುದ್ಧಕ್ಕೆ ಮುಂದಿನ ದಿನದಲ್ಲಿ ದುರ್ಯೋಧನನು ಪಾಂಡವರ ಬಳಿಗೆ ಉಲೂಕನನ್ನು ದೂತನನ್ನಾಗಿ ಕಳುಹಿಸಿದುದು, ಭೀಷ್ಮನು ಉಭಯಪಕ್ಷದಲ್ಲಿರುವ ಅಥಿರಥ ಮಹಾರಥರ ಸಂಖ್ಯೆಯನ್ನು ಹೇಳಿದುದು, ಇವೆಲ್ಲವೂ ಈ ಪರ್ವದಲ್ಲಿ ಅಡಗಿರುವುವು. ಈ ಪರ್ವದಲ್ಲಿ ಸಂಧಿ ವಿಗ್ರಹಗಳು ವಿಶೇಷವಾಗಿ ವಿವರಿಸಲ್ಪಡುವುವು. ಈ ಪರ್ವದಲ್ಲಿ ವ್ಯಾಸಮುನಿಯು ನೂರ ಎಂಭತ್ತಾರು ಅಧ್ಯಾಯಗಳನ್ನೂ, ಆರುಸಾವಿರದ ಆರುನೂರ ತೊಂಭತ್ತೆಂಟು ಶ್ಲೋಕಗಳನ್ನೂ ಹೇಳಿರುವನು.

ಇದರಿಂದಾಚೆಗೆ ವಿಚಿತ್ರವಿಷಯಗಳುಳ್ಳ ಭೀಷ್ಮಪರ್ವವು ಆರನೆಯದು. ಇದರಲ್ಲಿ ಕ್ರಮವಾಗಿ ಸಂಜಯನು ಧೃತರಾಷ್ಟ್ರನಿಗೆ ಜಂಬೂದ್ವೀಪನಿರ್ಮಾಣವನ್ನು ಹೇಳಿದುದು, ಯುಧಿಷ್ಠಿರಸೈನ್ಯವು ವಿಷಾದಪಡುವುದು, ಹತ್ತುದಿನಗಳವರೆಗೆ ಭಯಂಕರವಾಗಿ ಯುದ್ಧವು ನಡೆದುದು, ಯುದ್ಧಕ್ಕೆ ಮೊದಲು ಕೃಷ್ಣನು ಅರ್ಜುನನ ಮನಸ್ಸಿನಲ್ಲಿದ್ದ ಮೋಹರೂಪವಾದ ಕಳಂಕವನ್ನು ನೀಗಿಸುವುದಕ್ಕಾಗಿ ತತ್ವೋಪದೇಶವನ್ನು ಮಾಡಿದುದು, ಆಮೇಲೆ ಭೀಷ್ಮನು ದುರ್ಜಯನಾಗಿರುವುದನ್ನು ನೋಡಿ ಪಾಂಡವಪಕ್ಷಪಾತಿಯಾದ ಕೃಷ್ಣನು ತಾನೇ ಆಯುಧವನ್ನು ಹಿಡಿದು ರಥದಿಂದ ಧುಮುಕಿ ಭೀಷ್ಮನನ್ನು ಕೊಲ್ಲುವುದಕ್ಕಾಗಿ ಮುಂದೆ ಬಂದುದು, ಮತ್ತು ಕೃಷ್ಣನು ಅರ್ಜುನನನ್ನು ತೀಕ್ಷ್ಣವಾದ ವಾಗ್ಬಾಣದಿಂದ ಧಿಕ್ಕರಿಸಿ, ಭೀಷ್ಮನನ್ನು ಕೊಲ್ಲುವುದಕ್ಕೆ ಪ್ರೋತ್ಸಾಹಿಸಿದುದು, ಅದರಮೇಲೆ ಅರ್ಜುನನು ಶಿಖಂಡಿಯನ್ನು ಮುಂದೆ ನಿಲ್ಲಿಸಿ ಭೀಷ್ಮನನ್ನು ಬಾಣಗಳಿಂದ

ಹೊಡೆದು ರಥದಿಂದ ಕೆಳಕ್ಕೆ ಬಿಳಿಸಿದುದು, ಭೀಷ್ಮನು ಶರತಲ್ಪದಲ್ಲಿ ಮಲಗಿದುದು, ಈ ವಿಚಾರಗಳೆಲ್ಲವೂ ಈ ಭೀಷ್ಮಪರ್ವದಲ್ಲಿ ಹೇಳಲ್ಪಡುವುವು. ಇವರಲ್ಲಿ ನೂರಹದಿನೇಳು ಅಧ್ಯಾಯಗಳೂ, ಐದುಸಾವಿರದ ಎಂಟುನೂರ ಎಂಭತ್ತುನಾಲ್ಕು ಶ್ಲೋಕಗಳೂ ಇರುವುವು.

ಇದರಿಂದಾಚೆಗೆ ಅನೇಕವಿಚಿತ್ರವೃತ್ತಾಂತಗಳನ್ನೊಳಕೊಂಡ ದ್ರೋಣಪರ್ವವು ಆರಂಭಿಸಲ್ಪಡುವುದು. ಇದು ಭಾರತದಲ್ಲಿ ಏಳನೆಯ ಪರ್ವವು. ಈ ಪರ್ವದಲ್ಲಿ ಮೊದಲು ದ್ರೋಣಾಚಾರ್ಯನಿಗೆ ಸೇನಾಧಿಪತ್ಯದಲ್ಲಿ ಅಭಿಷೇಕವಾದುದು, ಈತನು ದುರ್ಯೋಧನನ ಸಂತೋಷಾರ್ಥವಾಗಿ ತನ್ನ ಮಹಾಸ್ತ್ರಪ್ರಭಾವದಿಂದ ಧರ್ಮರಾಜನನ್ನು ಸೆರೆಹಿಡಿದು ತರುವುದಾಗಿ ಪ್ರತಿಜ್ಞೆಮಾಡಿದುದು, ಸಂಶಪ್ತಕರು ಅರ್ಜುನನನ್ನು ಯುದ್ಧರಂಗದಿಂದ ದೂರವಾಗಿ ಬೇರೆಕಡೆಗೆ ಕರೆದುಕೊಂಡುಹೋದುದು, ಆ ಯುದ್ಧದಲ್ಲಿ ಇಂದ್ರಸಮಾನನಾದ ಭಗದತ್ತನು ಸುಪ್ರತೀಕವೆಂಬ ತನ್ನ ಆನೆಯೊಡನೆ ಅರ್ಜುನನಿಂದ ಸಂಹೃತನಾಗಿ ಬಿದ್ದುದು, ಇನ್ನೂ ಯೌವನಪ್ರಾದುರ್ಭಾವವಿಲ್ಲದೆ ಬಾಲಕನಾಗಿಯೂ, ಶೂರನಾಗಿಯೂ ಇದ್ದ ಅಭಿಮನ್ಯುವೊಬ್ಬನನ್ನೇ ಜಯದ್ರಥನೇ ಮೊದಲಾದ ಅನೇಕಶೂರರು ಸೇರಿ ಕೊಂದುದು, ಅಭಿಮನ್ಯುವಧವನ್ನು ಕೇಳಿ ಅರ್ಜುನನು ಕುಪಿತನಾಗಿ ಯುದ್ಧದಲ್ಲಿ ಏಳಕ್ಷೌಹಿಣೀಸೈನ್ಯವನ್ನೂ, ಜಯದ್ರಥನನ್ನೂ ಸಂಹರಿಸಿದುದು, ಭೀಮನೂ, ಸಾತ್ಯಕಿಯೂ ಧರ್ಮರಾಜನ ಆಜ್ಞೆಯಿಂದ ಅರ್ಜುನನನ್ನು ಹುಡುಕುವುದಕ್ಕಾಗಿ ಕೌರವಸೇನೆಯನ್ನು ಪ್ರವೇಶಿಸಿ, ಸಂಶಪ್ತಕರಲ್ಲಿ ಸತ್ತುಳಿದಿದ್ದ ಕೆಲವು ಜನರನ್ನು ನಿಶ್ಶೇಷವಾಗಿ ಕೊಂದುದು, ಅರ್ಜುನನು ಸೇನಾವ್ಯೂಹಮಧ್ಯದಿಂದ ತಪ್ಪಿಸಿಕೊಂಡು ಹೊರಗೆ ಬಂದು, ವೀರರಾದ ತೊಂಭತ್ತುಕೋಟಿ ಸಂಶಪ್ತಕರನ್ನು ಕೊಂದುದು, ಮತ್ತು ಇದೇ ದ್ರೋಣಯುದ್ಧದಲ್ಲಿ ಧೃತರಾಷ್ಟ್ರನ ಅನೇಕಮಂದಿ ಪುತ್ರರೂ, ಶಿಲಾಯುದ್ಧಮಾಡತಕ್ಕ ನಾರಾಯಣರೆಂಬ ಗೋಪಾಲರೂ, ಚಿತ್ರವಿಚಿತ್ರವಾಗಿ ಯುದ್ಧಮಾಡತಕ್ಕ ಇನ್ನೂ ಅನೇಕವೀರರೂ, ಅಲಂಬುಸ, ಶ್ರುತಾಯು, ಜಲಸಂಧ, ಸೋಮದತ್ತಿ, ವಿರಾಟ, ದ್ರುಪದ, ಘಟೋತ್ಕಚ ಮೊದಲಾದವರೂ ಹತರಾದುದು, ದ್ರೋ

ಣವಧವಾದಮೇಲೆ ಆತನ ಮಗನಾದ ಅಶ್ವತ್ಥಾಮನು ಕೋಪವನ್ನು ಸಹಿಸ ಲಾರದೆ, ಅತಿಕ್ರೂರವಾದ ನಾರಾಯಣಾಸ್ತ್ರವನ್ನು ಪ್ರಯೋಗಿಸಿದುದು, ಆಗ್ನೇಯವೆಂಬ ಉತ್ತಮವಾದ ರುದ್ರಮಾಹಾತ್ಮ್ಯದ ಪ್ರಶಂಸೆ, ವ್ಯಾಸಾಗ ಮನ, ಕೃಷ್ಣಾರ್ಜುನರ ಮಹಿಮೆ, ಇವೆಲ್ಲವೂ ಹೇಳಲ್ಪಡುವುವು. ಈ ದ್ರೋಣಪರ್ವದಲ್ಲಿ ಮಹಾಪ್ರಸಿದ್ಧರಾಗಿಯೂ, ಶೂರರಾಗಿಯೂ, ಪುರುಷ ಶ್ರೇಷ್ಠರಾಗಿಯೂ ಇದ್ದ ಅನೇಕರಾಜರ ಮರಣವು ಹೇಳಲ್ಪಡುವುದು. ತತ್ವದೃಷ್ಟಿಯುಳ್ಳ ವ್ಯಾಸಮುನಿಯು ಈ ಪರ್ವದಲ್ಲಿ ನೂರ ಎಪ್ಪತ್ತು ಅಧ್ಯಾ ಯಗಳನ್ನೂ, ಎಂಟುಸಾವಿರದ ಒಂಭೈನೂರ ಒಂಭತ್ತು ಶ್ಲೋಕಗಳನ್ನೂ ಹೇಳಿರುವನು.

ಇದರಿಂದಾಚೆಗೆ ಅದ್ಭುತಕಥೆಯುಳ್ಳ ಕರ್ಣಪರ್ವವು. ಇದರಲ್ಲಿ ಕರ್ಣ ನಿಗೆ ಶಲ್ಯನು ಸಾರಥಿಯಾದುದು, ತ್ರಿಪುರಸಂಹಾರ ಮೊದಲಾದ ಕೆಲವು ಪುರಾತನ ಚರಿತ್ರೆಗಳು, ಯುದ್ಧಕ್ಕೆ ಪ್ರಯಾಣಮಾಡುವಾಗ ಕರ್ಣನಿಗೂ, ಶಲ್ಯನಿಗೂ ನಡೆದ ಕಠಿನಸಂವಾದಗಳು, ಹಂಸಕಾಕೀಯೋಪಾಖ್ಯಾನ, ಅಶ್ವತ್ಥಾಮನು ಪಾಂಡ್ಯನನ್ನೂ, ದಂಡನನ್ನೂ ಮಥಿಸಿದುದು, ಧರ್ಮರಾ ಜನು ಕರ್ಣನೊಡನೆ ದ್ವಂದ್ವಯುದ್ಧಕ್ಕೆ ನಿಂತು ಅನೇಕ ರಾಜರ ಮುಂದೆ ಅವನಿಗೆ ಪ್ರಾಣಸಂದೇಹವನ್ನುಂಟುಮಾಡಿದುದು, ಧರ್ಮರಾಜನಿಗೂ, ಅರ್ಜುನನಿಗೂ ಅನ್ಯೋನ್ಯವಾಗಿ ನಡೆದ ಕೋಪಸಂಭಾಷಣಗಳು, ಕೃಷ್ಣ ನು ಅರ್ಜುನನನ್ನು ಸಮಾಧಾನಪಡಿಸಿದುದು, ಭೀಮನು ಹಿಂದೆ ತಾನು ಪ್ರತಿಜ್ಞೆಮಾಡಿದ್ದಂತೆ ದುಶ್ಶಾಸನನ ಎದೆಯನ್ನು ಸೀಳಿ ಅವನ ರಕ್ತವನ್ನು ಪಾನಮಾಡಿದುದು, ಕರ್ಣಾರ್ಜುನರ ಯುದ್ಧದಲ್ಲಿ ಕರ್ಣನು ಹತನಾದುದು, ಇವೆಲ್ಲವೂ ಈ ಪರ್ವದ ಕಥೆಗಳು. ಇದು ಭಾರತದಲ್ಲಿ ಎಂಟನೆಯಪರ್ವವು. ಈ ಪರ್ವದಲ್ಲಿ ಅರುವತ್ತೊಂಭತ್ತು ಅಧ್ಯಾಯಗಳೂ, ನಾಲ್ಕುಸಾವಿರದ ಒಂಭೈನೂರ ಅರುವತ್ತುನಾಲ್ಕು ಶ್ಲೋಕಗಳೂ ಹೇಳಲ್ಪಡುವುವು.

ಇದರಿಂದಾಚೆಗೆ ವಿಚಿತ್ರಾರ್ಥವುಳ್ಳ ಶಲ್ಯಪರ್ವವು. ಇದರಲ್ಲಿ ಕೌರವ ಸೈನ್ಯದ ಮುಖ್ಯ ವೀರರೆಲ್ಲರೂ ಹತರಾದಮೇಲೆ, ಶಲ್ಯನಿಗೆ ಸೇನಾಭಿಷೇಕ ವನ್ನು ಮಾಡಿದುದು, ಕುಮಾರಾಖ್ಯಾನ, (ಕೌರವಕುಮಾರರ ವೃತ್ತಾಂ

ತವು) ಆಮೇಲೆ ರಣರಂಗದಲ್ಲಿ ಬೇರೆಬೇರೆ ಭಾಗಗಳಾಗಿ ನಡೆದ ಯುದ್ಧಗಳು, ಕೌರವವೀರರಲ್ಲಿ ಪ್ರಧಾನರ ಸಂಹಾರ, ಧರ್ಮರಾಜನಿಂದ ಶಲ್ಯನು ಹತನಾದುದು, ಸಹದೇವನು ಶಕುನಿಯನ್ನು ಕೊಂದುದು, ತನ್ನ ಕಡೆಯ ಸೈನ್ಯಗಳೆಲ್ಲವೂ ಬಹಳಮಟ್ಟಿಗೆ ನಾಶಹೊಂದಿ ಸ್ವಲ್ಪ ಸೈನ್ಯವು ಮಾತ್ರವೇ ಮಿಕ್ಕಿದ್ದಾಗ, ದುರ್ಯೋಧನನು ಮಡುವಿನಲ್ಲಿ ಮುಳುಗಿ ತನ್ನ ಜಲಸ್ತಂಭವಿದ್ಯೆಯಿಂದ ಅಲ್ಲಿಯೇ ಅಡಗಿಕೊಂಡಿದ್ದುದು, ಕೆಲವು ಬೇಡರ ಮೂಲಕವಾಗಿ ಭೀಮನಿಗೆ ಆ ವಿಚಾರವು ತಿಳಿದುಬಂದಮೇಲೆ, ಧರ್ಮರಾಜಾದಿಗಳು ಅಲ್ಲಿಗೆ ಬಂದು ಮರ್ಮಭೇದಕಗಳಾದ ವಾಕ್ಯಗಳಿಂದ ದುರ್ಯೋಧನನನ್ನು ಮೂದಲಿಸಿದುದು, ಅದನ್ನು ಕೇಳಿ ಸಹಿಸಲಾರದೆ ದುರ್ಯೋಧನನು ಕೊಳದಿಂದ ಮೇಲೆದ್ದು ಬಂದು ಭೀಮನೊಡನೆ ಗದಾಯುದ್ಧಕ್ಕೆ ನಿಂತುದು, ಯುದ್ಧಸಮಯದಲ್ಲಿ ಬಲರಾಮನು ಅಲ್ಲಿಗೆ ಬಂದು, ತಾನು ಹೋಗಿದ್ದ ಸರಸ್ವತಿ ಮೊದಲಾದ ಪುಣ್ಯತೀರ್ಥಗಳ ಪ್ರಭಾವವನ್ನು ವರ್ಣಿಸಿದುದು, ಗದಾಯುದ್ಧದಲ್ಲಿ ಭೀಮಸೇನನು ತನ್ನ ಗದೆಯಿಂದ ದುರ್ಯೋಧನನ ತೊಡೆಯನ್ನು ಮುರಿದುದು, ಇವೆಲ್ಲವೂ ಈ ಪರ್ವದ ಕಥೆಗಳು. ಭಾರತದಲ್ಲಿ ಒಂಭತ್ತನೆಯದಾದ ಈ ಪರ್ವದಲ್ಲಿ ಐವತ್ತೊಂಭತ್ತು ಅಧ್ಯಾಯಗಳೂ, ಮೂರು ಸಾವಿರದ ಇನ್ನೂರಿಪ್ಪತ್ತು ಶ್ಲೋಕಗಳೂ ಇರುವುವು.

ಇದರಿಂದಾಚೆಗೆ ಅತಿಭಯಂಕರವಾದ ಸೌಪ್ತಿಕಪರ್ವವು. ದುರ್ಯೋಧನನು ತೊಡೆಮುರಿದು ಬಿದ್ದಮೇಲೆ, ಪಾಂಡವರು ಆ ಸ್ಥಳವನ್ನು ಬಿಟ್ಟು ಹಿಂತಿರುಗಿದುದು, ಇತ್ತಲಾಗಿ ದುರ್ಯೋಧನನು ರಕ್ತದಿಂದ ತೊಯ್ದು ಕೋಪದಿಂದ ಬುಸುಗುಟ್ಟುತ್ತ ನೆಲದಮೇಲೆ ಬಿದ್ದಿದ್ದಾಗ, ಕೃಪ, ಕೃತವರ್ಮ, ಅಶ್ವತ್ಥಾಮರೆಂಬ ಮೂವರು ರಥಿಕರೂ ಬಂದು, ಅವನ ಸ್ಥಿತಿಯನ್ನು ನೋಡಿದುದು, ಆಗ ಅಶ್ವತ್ಥಾಮನು ಮಿತಿಮೀರಿದ ಕೋಪಾವೇಶವನ್ನು ಹೊಂದಿ "ಧೃಷ್ಟದ್ಯುಮ್ನನೇ ಮೊದಲಾದ ಸಮಸ್ತ ಪಾಂಚಾಲರನ್ನೂ, ಪಾಂಡವರನ್ನೂ, ಅವರ ಮಂತ್ರಿಗಳನ್ನೂ ಕೊಂದಹೊರತು ತಾನು ತನ್ನ ಮೈಮೇಲಿನ ಯುದ್ಧಕವಚವನ್ನು ತೆಗೆಯುವುದಿಲ್ಲ" ವೆಂದು ಪ್ರತಿಜ್ಞೆ ಮಾಡಿದುದು, ಆಮೇಲೆ ಆ ಮೂವರೂ ಅಲ್ಲಿಂದ ಹಿಂತಿರುಗಿ ಸಾಯಂಕಾ

ಲಸಮಯಕ್ಕೆ ಒಂದು ಮಹಾರಣ್ಯವನ್ನು ಸೇರಿ, ಅಲ್ಲಿ ಒಂದಾನೊಂದು ದೊಡ್ಡ ಆಲದಮರದ ಕೆಳಗೆ ಕುಳಿತುದು, ರಾತ್ರಿಯಾದಕೂಡಲೆ ಒಂದಾನೊಂದು ಗೂಬೆಯು ಆ ಮರದಲ್ಲಿದ್ದ ಅನೇಕ ಕಾಗೆಗಳನ್ನು ಧ್ವಂಸಮಾಡುತ್ತಿರುವುದನ್ನು ನೋಡಿ, ಅಶ್ವತ್ಥಾಮನು ತನ್ನ ತಂದೆಯ ಮರಣವನ್ನು ನೆನೆಸಿಕೊಂಡು ಕೋಪದಿಂದ ತಾನೂ ಅದರಂತೆಯೇ ಪಾಂಚಾಲರೆಲ್ಲರೂ ನಿದ್ರೆಹೋಗುತ್ತಿರುವಾಗ ಕೊಂದುಬಿಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಅಲ್ಲಿಂದ ಪಾಂಡವರ ಶಿಬಿರದ್ವಾರಕ್ಕೆ ಬಂದುದು, ಅಲ್ಲಿ ನೋಡುವುದಕ್ಕೂ ಸಾಧ್ಯವಿಲ್ಲದಂತೆ ಅತಿಭಯಂಕರಾಕಾರದಿಂದ ಭೂಮ್ಯಾಕಾಶಗಳನ್ನು ವ್ಯಾಪಿಸಿನಿಂತಿದ್ದ ಒಬ್ಬ ರಾಕ್ಷಸನನ್ನು ಕಂಡುದು, ಆ ರಾಕ್ಷಸನನ್ನು ಕೊಲ್ಲುವುದಕ್ಕಾಗಿ ಎಷ್ಟೆಷ್ಟು ಪ್ರಯತ್ನಪಟ್ಟರೂ ಅವನು ತನ್ನ ಅಸ್ತ್ರಗಳಿಂದ ಸಾಯದಿರುವುದನ್ನು ನೋಡಿ ಅಶ್ವತ್ಥಾಮನು ವಿರೂಪಾಕ್ಷನೆಂಬ ರುದ್ರನನ್ನು ಆರಾಧಿಸಿದುದು, ಆಮೇಲೆ ಕೃಪನನ್ನೂ, ಕೃತವರ್ಮನನ್ನೂ ಸಂಗಡ ಕರೆದುಕೊಂಡು ತಿರುಗಿ ಶಿಬಿರದ್ವಾರಕ್ಕೆ ಬಂದು, ಆ ರಾಕ್ಷಸನನ್ನು ನಿಗ್ರಹಿಸಿ ಶಿಬಿರದೊಳಗೆ ಪ್ರವೇಶಿಸಿದುದು, ಅಲ್ಲಿ ಮೈಮರೆತು ನಿದ್ರಿಸುತ್ತಿದ್ದ ಧೃಷ್ಟದ್ಯುಮ್ನನೇ ಮೊದಲಾದ ಸಮಸ್ತ ಪಾಂಚಾಲರನ್ನೂ, ದ್ರೌಪದೀಪುತ್ರರಾದ ಉಪಪಾಂಡವರನ್ನೂ, ಅವರ ಎಲ್ಲಾ ಪರಿವಾರಗಳನ್ನೂ ಕೊಲ್ಲುತ್ತ ಬಂದುದು, ಐದುಮಂದಿ ಪಾಂಡವರೂ, ಸಾತ್ಯಕಿಯೂ, ಶ್ರೀಕೃಷ್ಣಾನುಗ್ರಹದಿಂದ ಆ ಕೊಲೆಗೆ ಸಿಕ್ಕದೆ ತಪ್ಪಿಸಿಕೊಂಡು, ಉಳಿದವರೆಲ್ಲರೂ ಮೃತಿಹೊಂದಿದುದು, ನಿದ್ರಿಸುತ್ತಿದ್ದ ಪಾಂಚಾಲರನ್ನು ಅಶ್ವತ್ಥಾಮನು ಕೊಂದನೆಂಬ ವೃತ್ತಾಂತವು ಧೃಷ್ಟದ್ಯುಮ್ನನ ಸಾರಥಿಯಮೂಲಕವಾಗಿ ಪಾಂಡವರಿಗೆ ತಿಳಿದುದು, ದ್ರೌಪದಿಯು ತನ್ನ ಮಕ್ಕಳ ಮತ್ತು ಸಹೋದರನ ಮರಣವನ್ನು ಕೇಳಿ ಸಂಕಟಪಡುತ್ತ, ತನ್ನ ತಂದೆಯ ಮರಣವನ್ನೂ ಸ್ಮರಿಸಿಕೊಂಡು ದುಃಖವನ್ನು ಸಹಿಸಲಾರದೆ, ಇನ್ನುಮೇಲೆ ತಾನು ಆಹಾರವನ್ನೇ ತೆಗೆದುಕೊಳ್ಳುವುದಿಲ್ಲವೆಂದು ಸಂಕಲ್ಪಿಸಿ, ತನ್ನ ಪತಿಗಳ ಮುಂದೆ ಪ್ರಾಯೋಪವೇಶಕ್ಕೆ ಯತ್ನಿಸಿದುದು, ಆಗ ಭೀಮನು ಅವಳಿಗೆ ಸಮಾಧಾನವನ್ನು ಹೇಳಿ, ಅವಳ ಮನಸ್ಸಿಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ ಅಶ್ವತ್ಥಾಮನನ್ನು ಬೆನ್ನಟ್ಟಿಹೋದುದು, ಭೀಮನನ್ನು ಕಂಡು

ಭಯದಿಂದಲೂ, ದೈವಪ್ರೇರಣೆಯಿಂದಲೂ ಅಶ್ವತ್ಥಾಮನು ಪಾಂಡವಕುಲವನ್ನೇ ನಾಶಮಾಡುವುದಕ್ಕಾಗಿ * "ಅಪಾಂಡವಾಯ" ಎಂಬ ಸಂಕಲ್ಪವನ್ನು ಹೇಳಿ, ಒಂದು ಕ್ರೂರವಾದ ಅಸ್ತ್ರವನ್ನು ಪ್ರಯೋಗಿಸಿದುದು, ಇಷ್ಟರಲ್ಲಿ ಕೃಷ್ಣನು ಆ ಅಶ್ವತ್ಥಾಮನ ಸಂಕಲ್ಪವನ್ನು ತಪ್ಪಿಸುವುದಕ್ಕಾಗಿ "ಹಾಗಲ್ಲ"ವೆಂದು ಕೂಗಿದುದು, ಈ ಅಶ್ವತ್ಥಾಮನ ಅಸ್ತ್ರವನ್ನು ಅಡಗಿಸುವುದಕ್ಕಾಗಿ ಅರ್ಜುನನು ಪ್ರತ್ಯಸ್ತ್ರವನ್ನು ಪ್ರಯೋಗಿಸಿದುದು, ಅಶ್ವತ್ಥಾಮನ ದ್ರೋಹಬುದ್ಧಿಯನ್ನು ನೋಡಿ ವ್ಯಾಸಾದಿಗಳು ಅವನಿಗೆ ಶಾಪವನ್ನು ಕೊಟ್ಟುದು, ಅಶ್ವತ್ಥಾಮನು ಅವರಿಗೆ ಪ್ರತಿಶಾಪವನ್ನು ಕೊಟ್ಟುದು, ಆಮೇಲೆ ಪಾಂಡವರು ಅಶ್ವತ್ಥಾಮನ ತಲೆಯಲ್ಲಿದ್ದ ಮಣಿಯನ್ನು ಕಿತ್ತು ತಂದು ದ್ರೌಪದಿಗೆ ಕೊಟ್ಟು, ಅವಳನ್ನು ಸಂತೋಷಪಡಿಸಿದುದು, ಇವೆಲ್ಲವೂ ಈ ಹತ್ತನೆಯ ಪರ್ವದ ಕಥೆಗಳು. ಈ ಪರ್ವದಲ್ಲಿ ಹದಿನೆಂಟು ಅಧ್ಯಾಯಗಳೂ, ಎಂಟುನೂರ ಎಪ್ಪತ್ತು ಶ್ಲೋಕಗಳೂ ಹೇಳಲ್ಪಡುವುವು. ಈ ಸೌಪ್ತಿಕಪರ್ವದೊಡನೆ ಐಷೀಕವೆಂಬ ಪರ್ವವೂ ಒಂದಾಗಿ ಸೇರಿರುವುದು.

ಇದರಿಂದಾಚೆಗೆ ಅತ್ಯಂತಶೋಕರಸಪ್ರಧಾನವಾದ ಸ್ತ್ರೀಪರ್ವವು. ಇದರಲ್ಲಿ ಪುತ್ರಶೋಕದಿಂದ ಕುದಿಯುತಿದ್ದ ಧೃತರಾಷ್ಟ್ರನು, ಶ್ರೀಕೃಷ್ಣನು ತನ್ನ ಬಳಿಗೆ ತಂದ ದೃಢವಾದ ಒಂದು ಉಕ್ಕಿನ ಪ್ರತಿಮೆಯನ್ನು ಭೀಮನ ಮೇಲೆ ತನಗಿದ್ದ ಕೋಪಾವೇಶದಿಂದ ಮುರಿದುಹಾಕಿದುದು, ದುಃಖಿತನಾದ ಧೃತರಾಷ್ಟ್ರನಿಗೆ ವಿದುರನು ಮೋಕ್ಷಸ್ವರೂಪವನ್ನು ನಿರೂಪಿಸಿ, ಸಂಸಾರನಿವರ್ತನೋಪಾಯವನ್ನು ತಿಳಿಸುತ್ತ ಸಮಾಧಾನಗೊಳಿಸಿದುದು, ಧೃತರಾಷ್ಟ್ರನು ಅಂತಃಪುರಸ್ತ್ರೀಯರೊಡನೆ ದುಃಖದಿಂದ ರಣರಂಗಕ್ಕೆ ಬಂದುದು, ಅಲ್ಲಿ ವೀರಪತ್ನಿಯರ ವಿಲಾಪಗಳು, ಗಾಂಧಾರೀ ಧೃತರಾಷ್ಟ್ರರಿಗೆ ಮನಸ್ಸಿನಲ್ಲಿ ಹುಟ್ಟಿದ ದುಃಖ ಕೋಪಾವೇಶಗಳಿಂದ ಅವರು ಮೂರ್ಛಿತರಾದುದು, ಆ ರಣರಂಗದಲ್ಲಿ ಕ್ಷತ್ರಿಯಸ್ತ್ರೀಯರು ಯಾವ ಯುದ್ಧದಲ್ಲಿಯೂ

* "ಲೋಕದಲ್ಲಿ ಪಾಂಡವರೇ ಇಲ್ಲದಂತೆ ಮಾಡುವುದಕ್ಕಾಗಿ," ಎಂದು ಈ ವಾಕ್ಯದ ಅರ್ಥವು.

ಹಿಂಜರಿಯುದ ಮಹಾಶೂರರೆನಿಸಿಕೊಂಡ ತಮ್ಮ ತಮ್ಮ ಪಿತೃ ಪುತ್ರ ಸಹೋದರಾದಿ ಬಂಧುಗಳು ಹತರಾಗಿ ಬಿದ್ದಿರುವುದನ್ನು ನೋಡಿದುದು, ಶ್ರೀಕೃಷ್ಣನು ಪುತ್ರಪೌತ್ರಾದಿಗಳನ್ನು ಕಳೆದುಕೊಂಡು ದುಃಖಿಸುತಿದ್ದ ಗಾಂಧಾರಿಗೆ ಕೋಪಸಮಾಧಾನಮಾಡಿದುದು, ಮಹಾಪ್ರಾಜ್ಞನಾದ ಧರ್ಮರಾಜನು ಯುದ್ಧದಲ್ಲಿ ಮೃತರಾದವರಿಗೆ ಶಾಸ್ತ್ರೋಕ್ತವಾಗಿ ಅಪರಕರ್ಮಗಳನ್ನು ಮಾಡಿಸಿದುದು, ರಾಜರಿಗೆ ಜಲತರ್ಪಣವನ್ನಾರಂಭಿಸಿದಾಗ, ಕುಂತಿಯು ಬಂದು, ಕರ್ಣನು ತನಗೆ ರಹಸ್ಯವಾಗಿ ಹುಟ್ಟಿದ ಮಗನೆಂದು ತಿಳಿಸಿದುದು, ಇವೆಲ್ಲ ಈ ಪರ್ವದಲ್ಲಿದೆ. ಇದು ಹನ್ನೊಂದನೆಯ ಪರ್ವವು. ಸಜ್ಜನರ ಮನಸ್ಸಿನಲ್ಲಿ ಸಂಕಟವನ್ನೂ, ಕಣ್ಣುಗಳಲ್ಲಿ ನೀರನ್ನೂ ಹುಟ್ಟಿಸುವಂತೆ ಈ ಪರ್ವವು ವ್ಯಾಸಮಹರ್ಷಿಯಿಂದ ಅತ್ಯಂತ ಕರುಣಾರಸಪೂರ್ಣವಾಗಿ ರಚಿತವಾಗಿದೆ. ಈ ಪರ್ವದಲ್ಲಿ ಇಪ್ಪತ್ತೇಳು ಅಧ್ಯಾಯುಗಳೂ, ಏಳುನೂರ ಎಪ್ಪತ್ತೈದು ಶ್ಲೋಕಗಳೂ ಇರುವುವು.

ಇದರಿಂದಾಚೆಗೆ ಹನ್ನೆರಡನೆಯದು ಶಾಂತಿಪರ್ವವು. ಕೇಳುವವರಿಗೆ ವಿವೇಕವನ್ನು ವೃದ್ಧಿಗೊಳಿಸತಕ್ಕುದು. ಧರ್ಮರಾಜನು ತನ್ನ ಪಿತೃಗಳು, ಸಹೋದರರು, ಮಕ್ಕಳು, ಬಂಧುಗಳು, ಮಾವಂದಿರು, ಮುಂತಾಗಿ ಅನೇಕ ಬಂಧುಗಳನ್ನೂ, ಗುರುಜನರನ್ನೂ ಯುದ್ಧದಲ್ಲಿ ಕೊಲ್ಲಲು ತಾನೇ ಕಾರಣನೆನಿಸಿದುದಕ್ಕಾಗಿ ಪಶ್ಚಾತ್ತಾಪಪಟ್ಟು ದುಃಖಿಸುವುದು, ಭೀಷ್ಮನು ಶರಶಲ್ಪದಮೇಲೆ ಮಲಗಿದ್ದಹಾಗೆಯೇ ಯುಧಿಷ್ಠಿರನಿಗೆ ನಾನಾಧರ್ಮಗಳನ್ನು ಉಪದೇಶಿಸಿದುದು, ಇವೆಲ್ಲ ಹೇಳಲ್ಪಟ್ಟಿವೆ. ಉತ್ತಮಜ್ಞಾನವನ್ನು ಪಡೆಯಲೆಳಸುವ ರಾಜರು ತಿಳಿಯಬೇಕಾದ ಅನೇಕ ರಾಜಧರ್ಮಗಳೂ, ಆಯಾ ಕಾಲಗಳನ್ನೂ, ಇತರ ನಿಮಿತ್ತಗಳನ್ನೂ ಅನುಸರಿಸಿ ನಡೆಯಬೇಕಾದ ಆಪದ್ಧರ್ಮಗಳೂ ಇದರಲ್ಲಿ ವಿವರಿಸಲ್ಪಡುವುವು. ಆ ಧರ್ಮಗಳನ್ನೆಲ್ಲ ಚೆನ್ನಾಗಿ ತಿಳಿದುಕೊಳ್ಳುವವನು ಸರ್ವಜ್ಞನೆನಿಸುವನು. ಮತ್ತು ಈ ಪರ್ವದಲ್ಲಿ ಅದ್ಭುತಗಳಾದ ಮೋಕ್ಷಧರ್ಮಗಳೂ ಅತಿವಿಸ್ತರದಿಂದ ನಿರೂಪಿಸಲ್ಪಟ್ಟಿವೆ. ಸಜ್ಜನರಿಗೆಲ್ಲ ಅತ್ಯಂತಪ್ರಿಯವಾದ ಈ ಶಾಂತಿಪರ್ವದಲ್ಲಿ ಮುನ್ನೂರ

ಇಪ್ಪತ್ತೊಂಭತ್ತು ಅಧ್ಯಾಯಗಳೂ, ಹದಿನಾಲ್ಕುಸಾವಿರದ ಏಳುನೂರ ಮೂವತ್ತೆರಡು ಶ್ಲೋಕಗಳೂ ಇರುವುವು.

ಇದರಿಂದಾಚೆಗೆ ಅತ್ಯುತ್ತಮವೆನಿಸಿದ ಆನುಶಾಸನಿಕ ಪರ್ವವು. ಯುಧಿಷ್ಠಿರನು ಭೀಷ್ಮನಿಂದ ಧರ್ಮನಿರ್ಣಯಗಳನ್ನೆಲ್ಲ ಕೇಳಿದಮೇಲೆ, ಬುದ್ಧಿಪರಿಪಾಕದಿಂದ ಮನಶ್ಶಾಂತಿಯನ್ನು ತಂದುಕೊಂಡ ವೃತ್ತಾಂತವು ಇದರಲ್ಲಿ ಪ್ರಧಾನವೆನಿಸಿದೆ. ಈ ಪರ್ವದಲ್ಲಿ ಧರ್ಮಾರ್ಥಗಳಿಗೆ ಸಂಬಂಧಿಸಿದ ಅನೇಕ ವ್ಯವಹಾರಗಳೂ, ನಾನಾಬಗೆಯ ದಾನಗಳ ಫಲಗಳೂ, ದಾನಕ್ಕೆ ಉತ್ತಮ ಪಾತ್ರಗಳೆಂತವೆಂಬುದೂ, ದಾನವಿಧಿಗಳೂ, ಆಚಾರ ಕ್ರಮಗಳೂ, ಸತ್ಯದಿಂದಾಗುವ ಉತ್ತಮಗತಿಯೂ, ಗೋಬ್ರಾಹ್ಮಣರ ಮಹಾಭಾಗ್ಯವೂ, ಆಯಾ ದೇಶಕಾಲಗಳಿಗೆ ಉಚಿತವಾದ ಧರ್ಮರಹಸ್ಯಗಳೂ, ಇವೇ ಮೊದಲಾಗಿ ಇನ್ನೂ ಅನೇಕವಿಷಯಗಳು ಅಡಗಿವೆ. ಈ ಆನುಶಾಸನಿಕಪರ್ವದಲ್ಲಿ ಸ್ವೇಚ್ಛಾಮರಣಿಯಾದ ಭೀಷ್ಮನು ಸ್ವರ್ಗವನ್ನು ಹೊಂದಿದ ವೃತ್ತಾಂತವೂ ಹೇಳಲ್ಪಟ್ಟಿದೆ. ಧರ್ಮನಿರ್ಣಯಗಳನ್ನೊಳಕೊಂಡ ಈ ಪರ್ವದಲ್ಲಿ, ನೂರನಾಲ್ವತ್ತಾರು ಅಧ್ಯಾಯಗಳೂ, ಎಂಟುಸಾವಿರ ಶ್ಲೋಕಗಳೂ ಇರುವುದಾಗಿ ಎಣಿಸಲ್ಪಟ್ಟಿದೆ.

ಇದರಿಂದಾಚೆಗೆ ಅಶ್ವಮೇಧಪರ್ವವೆಂಬುದು ಹದಿನಾಲ್ಕನೆಯದು. ಇದರಲ್ಲಿ ಉತ್ತಮವಾದ ಸಂವರ್ತಮರುತ್ತೀಯವೆಂಬ ಉಪಾಖ್ಯಾನವೂ, ಧರ್ಮರಾಜನಿಗೆ ಸುವರ್ಣನಿಧಿಯು ದೊರೆತುದೂ, ಪರೀಕ್ಷಿತ್ತಿನ ಜನನ, ಅಶ್ವತ್ಥಾಮನು ಪ್ರಯೋಗಿಸಿದ ಅಪಾಂಡವಾಸ್ತ್ರದ ಜ್ವಾಲೆಯಿಂದ ದಗ್ಧನಾಗಿದ್ದ ಪರೀಕ್ಷಿತ್ತನ್ನು ಕೃಷ್ಣನು ತಿರುಗ ಬದುಕಿಸಿದುದು, ಯಾಗದ ಕುದುರೆಯನ್ನು ಸಂಚಾರಾರ್ಥವಾಗಿ ಹೊರಡಿಸಿದುದು, ಅರ್ಜುನನು ಆ ಕುದುರೆಗೆ ಬೆಂಬಲವಾಗಿ ಹೊರಟು ಅಲ್ಲಲ್ಲಿ ಅಸೂಯೆಯಿಂದ ತನಗಿದಿರಾಗಿ ಯುದ್ಧಕ್ಕೆ ಬಂದ ರಾಜರನ್ನು ಜಯಿಸಿದುದು, ಈ ನಡುವೆ ಅರ್ಜುನನು ತನಗೆ ಚಿತ್ರಾಂಗದೆಯೆಂಬವಳಲ್ಲಿ ಜನಿಸಿದ ಬಭ್ರುವಾಹನನೆಂಬ ಕುಮಾರನೊಡನೆ ಯುದ್ಧವನ್ನಾರಂಭಿಸಿ ಪ್ರಾಣಸಂಶಯಕ್ಕೆ ಗುರಿಯಾದುದು, ಸುದರ್ಶನಚರಿತ್ರೆ ಮತ್ತು ವಿಷ್ಣುಧರ್ಮವೆಂಬೀ ವಿಷಯಗಳು,

ಅಶ್ವಮೇಧವೆಂಬ ಮಹಾಯಜ್ಞದಲ್ಲಿ ನಕುಲಾಖ್ಯಾನವೆಂಬ ಉಪಕಥೆ, ಇವೆಲ್ಲ ವಿವರಿಸಲ್ಪಟ್ಟಿವೆ. ಅದ್ಭುತ ಕಥಾಸಂದರ್ಭವುಳ್ಳ ಈ ಪರ್ವದಲ್ಲಿ ನೂರಮೂರು ಅಧ್ಯಾಯಗಳೂ, ಮೂರುಸಾವಿರದ ಮುನ್ನೂರಿಪ್ಪತ್ತು ಶ್ಲೋಕಗಳೂ ಇವೆ.

ಆಮೇಲೆ ಹದಿನೈದನೆಯದು ಆಶ್ರಮವಾಸಪರ್ವವು. ಇದರಲ್ಲಿ ಧೃತರಾಷ್ಟ್ರನು ರಾಜ್ಯವನ್ನು ಬಿಟ್ಟು, ತನ್ನ ಪತ್ನಿಯಾದ ಗಾಂಧಾರಿಯೊಡನೆ ತಪೋವನಕ್ಕೆ ಹೊರಟುದು, ವಿದುರನೂ ಅವನನ್ನು ಹಿಂಬಾಲಿಸಿದುದು, ಧೃತರಾಷ್ಟ್ರನು ಸಪತ್ನೀಕನಾಗಿ ತಪೋವನಕ್ಕೆ ಹೊರಟುದುದನ್ನು ನೋಡಿ ಕುಂತಿಯೂ ಕೂಡ, ತನ್ನ ಮಕ್ಕಳೊಡನೆ ರಾಜ್ಯದಲ್ಲಿರಲು ಇಷ್ಟಪಡದೆ, ಗುರುಜನವನ್ನು ಶುಶ್ರೂಷೆಮಾಡುವ ಉದ್ದೇಶದಿಂದ ಅವರನ್ನು ಹಿಂಬಾಲಿಸಿದುದು, ಅಲ್ಲಿ ವ್ಯಾಸಮಹರ್ಷಿಯ ಪ್ರಭಾವದಿಂದ ಧೃತರಾಷ್ಟ್ರನಿಗೆ ಯುದ್ಧದಲ್ಲಿ ಮೃತರಾದ ಮಕ್ಕಳು, ಮೊಮ್ಮಕ್ಕಳು, ಮೊದಲಾದವರೆಲ್ಲ ತಿರುಗಿ ಬಂದು ಕಣ್ಣಿಗೆ ಕಾಣಿಸಿಕೊಂಡುದು, ಧೃತರಾಷ್ಟ್ರನು ಪರಲೋಕಗತರಾದವರು ತನಗೆ ತಿರುಗಿಬಂದು ಗೋಚರಿಸಿದುದನ್ನೂ ನೋಡಿ ಆಶ್ಚರ್ಯಗೊಂಡು, ಅವರ ಮರಣದಿಂದ ತನಗಿದ್ದ ವ್ಯಸನವನ್ನೂ ನೀಗಿ, ಪತ್ನಿಯೊಡನೆ ಉತ್ತಮಗತಿಯನ್ನು ಹೊಂದಿದುದು, ವಿದುರನೂ ಧರ್ಮನಿರತನಾಗಿ ಸುಗತಿಯನ್ನು ಪಡೆದುದು, ಆಮೇಲೆ ಜಿತೇಂದ್ರಿಯನೂ, ವಿದ್ವಾಂಸನೂ, ಗವಲ್ಗಣಕುಮಾರನೂ ಆದ ಸಂಜಯನು, ತನ್ನ ಮಂತ್ರಿಗಳೊಡನೆ ಸದ್ಗತಿಯನ್ನು ಹೊಂದಿದುದು, ಇದೇ ಸಂದರ್ಭದಲ್ಲಿ ಧರ್ಮರಾಜನಿಗೆ ನಾರದನು ಕಾಣಿಸಿಕೊಂಡು, ಯಾದವರಲ್ಲಿ ಉಂಟಾದ ದೊಡ್ಡ ಕಲಹದಿಂದ, ಅವರಿಗುಂಟಾದ ನಾಶವನ್ನು ತಿಳಿಸಿದುದು, ಈ ವೃತ್ತಾಂತಗಳೆಲ್ಲ ಅಡಗಿವೆ. ಮಹಾದ್ಭುತವಾದ ಈ ಪರ್ವದಲ್ಲಿ ನಾಲ್ವತ್ತೆರಡು ಅಧ್ಯಾಯಗಳೂ ಸಾವಿರದ ಐನೂರ ಆರುಶ್ಲೋಕಗಳೂ ಇರುವುದಾಗಿ ಎಣಿಸಲ್ಪಟ್ಟಿವೆ.

ಅದರಿಂದಾಚೆಗೆ ಹದಿನಾರನೆಯದು ಮಹಾಭಯಂಕರವಾದ ಕಥೆಯುಳ್ಳ ಮೌಸಲಪರ್ವವು. ಇದರಲ್ಲಿ ಯಾದವರೆಲ್ಲರೂ ತಮ್ಮೊಳಗೆ ಕಲಹವನ್ನಾರಂಬಿಸಿ - ಶಸ್ತ್ರಗಳಿಂದ ಹೊಡೆದಾಡಿ ಸತ್ತುದು, ಅವರು

ಬ್ರಾಹ್ಮಣ ಶಾಪಕ್ಕೀಡಾಗಿ, ಲವಣಸಮುದ್ರದ ತೀರದಲ್ಲಿ ಮದ್ಯಪಾನಮದ ದಿಂದ ಮೈಮರೆತು, ದೈವಹತರಾಗಿ ಅಲ್ಲಿದ್ದ ಹೊಡಕೆಗಳನ್ನೇ ಕಿತ್ತು ಕೊಂಡು ಒಬ್ಬರಿಗೊಬ್ಬರು ಹೊಡೆದಾಡಿದುದು, ಆ ಹೊಡಕೆಗಳೇ ಅವರ ಭಾಗಕ್ಕೆ ವಜ್ರಾಯುಧಗಳಂತಾಗಿ ಅವರ ಮರಣಕ್ಕೆ ಹೇತುವಾದುದ್ದು ಹೀಗೆ ಯಾದವರೆಲ್ಲರೂ ಮೃತಿಹೊಂದಿದಮೇಲೆ ರಾಮಕೃಷ್ಣರಿಬ್ಬರೂ, ಸರ್ವ ನಾಶಕ್ಕೆ ಕಾರಣವಾದ ಕಾಲವು ಪ್ರಾಪ್ತವಾದುದರಿಂದ, ತಾವೂ ಅದನ್ನು ತಪ್ಪಿಸಿಕೊಳ್ಳಬಾರದೆಂದು ನಿರ್ಧರಿಸಿ ಅದಕ್ಕೆ ಸಿದ್ಧವಾದುದು, ಆಮೇಲೆ ಅರ್ಜುನನು ಯಾದವಶೂನ್ಯವಾದ ದ್ವಾರಕೆಗೆ ಹೋಗಿನೋಡಿ ಮಹಾ ವ್ಯಸನಕ್ಕೀಡಾದುದು. ಆಮೇಲೆ ಅವನು ತನ್ನ ಸೋದರಮಾವನಾದ ವಸು ದೇವನಿಗೆ ತನ್ನ ಕೈಯಿಂದಲೇ ಪ್ರೇತಕಾರ್ಯವನ್ನು ನಡೆಸಿ, ಯಾದವರು ಮೃತರಾಗಿದ್ದ ಪಾನಸ್ಥಳಕ್ಕೆ ಬಂದು ಅಲ್ಲಿನ ಮಹಾಭಯಂಕರಸ್ಥಿತಿಯನ್ನು ನೋಡಿದುದು, ಅಲ್ಲಿ ರಾಮಕೃಷ್ಣರು ಮೊದಲಾಗಿ ಯಾದವ ಪ್ರಧಾನರೆಲ್ಲ ರಿಗೂ ಕ್ರಮವಾಗಿ ಸಂಸ್ಕಾರಗಳನ್ನು ನಡೆಸಿದುದು, ಆಮೇಲೆ ಅವನು ದ್ವಾರಕೆಯಿಂದ ಮಕ್ಕಳು, ಮುದುಕರು, ಮೊದಲಾದವರನ್ನು ತನ್ನೊಡನೆ ಕರೆದುಕೊಂಡು ಹೋಗುತ್ತಿರುವಾಗ, ಒಂದು ಮಹಾವಿಪತ್ತು ಬಂದೊದ ಗಲು, ಅದರಲ್ಲಿ ಅವನ ಕೈಯಲ್ಲಿದ್ದ ಗಾಂಡೀವಕ್ಕೆ ಪರಾಭವವುಂಟಾಗಿ, ಅವನಿಗೂ ಆಗ ಹಿಂದಿನಂತೆ ದಿವ್ಯಾಸ್ತ್ರಗಳೊಂದೂ ನೆನಪಿಗೆ ಬಾರದೆ ಹೋ ದುದು, ಯಾದವಸ್ತ್ರೀಯರಿಗೂ, ತನಗೂ ಅಲ್ಲಿ ಸಂಭವಿಸಿದ ಮಹಾವಿಪ ತ್ತನ್ನೂ, ತನ್ನ ಪರಾಕ್ರಮಗಳೆಲ್ಲವೂ ನೆಲೆದಪ್ಪಿದುವನ್ನೂ ಕಂಡು, ವಿರಕ್ತ ನಾಗಿ ಧರ್ಮರಾಜನಲ್ಲಿಗೆ ಬಂದು ರಾಜ್ಯವನ್ನು ಬಿಟ್ಟು ಹೊರಡುವಂತೆ ಪ್ರೇರಿಸಿದುದು, ಇವೆಲ್ಲ ಈ ಪರ್ವದೊಳಗಿನ ವಿಷಯಗಳು. ಇದರಲ್ಲಿ ಎಂಟು ಅಧ್ಯಾಯಗಳೂ, ಮುನ್ನೂರಿಪ್ಪತ್ತು ಶ್ಲೋಕಗಳೂ ಇವೆ.

ಇದರಿಂದಾಚೆಗೆ ಹದಿನೇಳನೆಯದು ಮಹಾಪ್ರಸ್ಥಾನಿಕ ಪರ್ವವು. ಇದರಲ್ಲಿ ಪಾಂಡವರು ರಾಜ್ಯವನ್ನು ಬಿಟ್ಟು ದ್ರೌಪದಿಯೊಡನೆ ಮಹಾ ಪ್ರಸ್ಥಾನಕ್ಕೆ ಹೊರಟುದು, ಆಗ ಅವರು ಲೌಹಿತ್ಯವೆಂಬ ಕೆಂಪುಸಮುದ್ರ ವನ್ನು ಸೇರಿ ಅಲ್ಲಿ ಅಗ್ನಿದೇವನನ್ನು ಕಂಡುದು. ಅರ್ಜುನನು ಆ ಅಗ್ನಿ

ಯನ್ನು ಪೂಜಿಸಿ, ತನ್ನಲ್ಲಿದ್ದ ಗಾಂಡೀವವೆಂಬ ದಿವ್ಯಧನುಸ್ಸನ್ನು *ಅವನಿಗೆ ಹಿಂತಿರುಗಿ ಕೊಟ್ಟುಬಿಟ್ಟುದು, ಅಲ್ಲಿಂದ ಮುಂದೆ ಹೋಗುತ್ತಿರುವಾಗ ಭೀಮಾದಿಗಳೂ, ದ್ರೌಪದಿಯೂ ಕೆಳಗೆ ಬಿದ್ದುಬಿಡಲು, ಯುಧಿಷ್ಠಿರನು ಹಿಂತಿರುಗಿ ಅವರನ್ನು ನೋಡದೆ ಹಾಗೆಯೇ ಬಿಟ್ಟುಹೋದುದು, ಇವೆಲ್ಲ ಈ ಪರ್ವದೊಳಗಿನ ವಿಷಯಗಳು. ಇದರಲ್ಲಿ ಮೂರು ಅಧ್ಯಾಯಗಳೂ ಮುನ್ನೂರಿಪ್ಪತ್ತು ಶ್ಲೋಕಗಳೂ ಇರುವುವು.

ಆಮೇಲೆ, ಅಮಾನುಷವಾದ ದೇವಲೋಕಕ್ಕೆ ಸಂಬಂಧಿಸಿದ ಸ್ವರ್ಗಪರ್ವವು. ಇದರಲ್ಲಿ ಧರ್ಮರಾಜನಿಗಾಗಿ ಸ್ವರ್ಗಲೋಕದಿಂದ ದಿವ್ಯರಥವು ಬಂದುದು, ಧರ್ಮರಾಜನು ಆಗ ತನ್ನನ್ನು ಹಿಂಬಾಲಿಸಿ ಬರುತಿದ್ದ ಒಂದು ನಾಯಿಯಲ್ಲಿ ಕನಿಕರವಿಟ್ಟು, ಅದನ್ನು ಬಿಟ್ಟುಹೋಗಲಾರದೆ, ಆ ದಿವ್ಯರಥವನ್ನೇರಲು ಇಷ್ಟಪಡದಿದ್ದುದು, ಎಷ್ಟೆಷ್ಟು ಸಮಾಧಾನಪಡಿಸಿದರೂ ಚಲಿಸದೆ ಆ ಯುಧಿಷ್ಠಿರನು ಕೇವಲ ಧರ್ಮಪರನಾಗಿದ್ದುದನ್ನು ಕಂಡು, ನಾಯಿಯ ರೂಪದಿಂದ ಬಂದಿದ್ದ ಧರ್ಮದೇವತೆಯು ತನ್ನ ನಿಜರೂಪವನ್ನು ತೋರಿಸಿ, ಅವನೊಡನೆ ಸ್ವರ್ಗಕ್ಕೆ ಹೊರಟುದು, ಆಗ ಆ ಧರ್ಮರಾಜನಿಗೆ ದೇವದೂತರು ಯಾವುದೋ ಒಂದು ಕಾರಣಕ್ಕಾಗಿ, ನರಕದಲ್ಲಿ ಯಾತನೆಗಳನ್ನು ಅನುಭವಿಸುತಿದ್ದ ಪ್ರಾಣಿಗಳನ್ನು ತೋರಿಸಿದುದು, ಈ ಸಮಯದಲ್ಲಿ ಧರ್ಮರಾಜನಾದ ಯುಧಿಷ್ಠಿರನಿಗೆ, ತನ್ನ ಆಜ್ಞಾಧೀನರಾಗಿ ನಡೆಯುತಿದ್ದ ತನ್ನ ಸಹೋದರರು ನರಕದಲ್ಲಿ ದೈನ್ಯದಿಂದ ಕೂಗಿಡುವ ಶಬ್ದವು ಕೇಳಿಸಿದುದು, ಆ ಯುಧಿಷ್ಠಿರನು ಧರ್ಮದೇವತೆಯಿಂದಲೂ, ದೇವೇಂದ್ರನಿಂದಲೂ ನಡೆಸಲ್ಪಡುತ್ತ, ಆಕಾಶಗಂಗೆಯಲ್ಲಿ ಸ್ನಾನಮಾಡಿ, ಮನುಷ್ಯದೇಹವನ್ನು ಬಿಟ್ಟು, ಸ್ವಧರ್ಮಾರ್ಜಿತವಾದ ಸ್ವರ್ಗಪದವಿಯನ್ನು ಹೊಂದಿ, ಇಂದ್ರಾದಿ ದೇವತೆಗಳಿಂದ ಪೂಜಿತನಾಗಿ ಸಂತೋಷದಿಂದಿದ್ದುದು, ಇವೆಲ್ಲ ಹದಿನೆಂಟನೆಯದಾದ ಈ ಕೊನೆಯ ಪರ್ವದ ಕಥೆಗಳು. ಓ ಮಹರ್ಷಿ

---

* ಇಲ್ಲಿ ಅರ್ಜುನನು ತನಗೆ ಹಿಂದೆ ಅಗ್ನಿದತ್ತವಾಗಿದ್ದ ವರುಣಧನುಸ್ಸಾದ ಆ ಗಾಂಡಿವವನ್ನು ಅಗ್ನಿಯ ಆಜ್ಞೆಯಮೇಲೆ ವರುಣನಿಗೇ ಸೇರಿಸುವುದಕ್ಕಾಗಿ ಆ ಕೆಂಪು ಸಮುದ್ರದ ನೀರಿನಲ್ಲಿ ಬಿಸಾಡಿದನೆಂಬುದು ಕಥೆ.

ಗಳಿರಾ! ಈ ಪರ್ವದಲ್ಲಿ ವ್ಯಾಸಮಹರ್ಷಿಯು ಐದು ಅಧ್ಯಾಯಗಳನ್ನೂ, ಇನ್ನೂರ ಒಂಭತ್ತು ಶ್ಲೋಕಗಳನ್ನೂ ಹೇಳಿರುವನು. ಇವಿಷ್ಟೂ ಸೇರಿ, ಹದಿನೆಂಟು ಪರ್ವಗಳಾಗಿವೆ.

ಇದರಿಂದಾಚೆಗೆ ಉಳಿದ ವಿಷಯಗಳನ್ನೊಳಕೊಂಡ ಹರಿವಂಶವೂ, ಭವಿಷ್ಯವೂ (ಖಿಲ) ಗಳಲ್ಲಿ ಸೇರಿಸಲ್ಪಟ್ಟಿವೆ. ಹರಿವಂಶದಲ್ಲಿ ಹನ್ನೆರಡುಸಾವಿರ ಶ್ಲೋಕಗಳು ವ್ಯಾಸಮುನಿಯಿಂದ ಪ್ರೋಕ್ತವಾಗಿವೆ.

ಹೀಗೆ ಭಾರತದಲ್ಲಿರುವ ಪರ್ವಸಂಗ್ರಹಗಳೆಲ್ಲ ಇಲ್ಲಿ ಹೇಳಲ್ಪಟ್ಟಿವೆ. ಹದಿನೆಂಟಕ್ಷೋಹಿಣೀ ಸೈನ್ಯಗಳು ಕುರುಕ್ಷೇತ್ರದಲ್ಲಿ ಭಾರತಯುದ್ಧಕ್ಕಾಗಿ ಕೂಡಿದ್ದುವು. ಭಯಂಕರವಾದ ಆ ಯುದ್ಧವು ಹದಿನೆಂಟು ದಿನಗಳು ನಡೆಯಿತು. ನಾಲ್ಕು ವೇದಗಳನ್ನೂ ಅವುಗಳ ಎಲ್ಲಾ ಅಂಗಗಳೊಡನೆ, ಮತ್ತು ಉಪನಿಷತ್ತುಗಳೊಡನೆ ಅಭ್ಯಸಿಸಿ, ವೇದವೇದಾಂಗಪಾರಂಗತನೆನಿಸಿದ ದ್ವಿಜನಾದರೂ, ಈ ಮಹಾಭಾರತವೆಂಬ ಇತಿಹಾಸವನ್ನು ಓದಿ ತಿಳಿಯದಿದ್ದರೆ, ಅವನು ಎಷ್ಟುಮಾತ್ರಕ್ಕೂ ವಿದ್ಯಾವಂತನೆನಿಸಲಾರನು. ಅಪಾರಬುದ್ಧಿಯುಳ್ಳ ವ್ಯಾಸಮುನಿಯು ಇದನ್ನು ಅರ್ಥಶಾಸ್ತ್ರ, ಧರ್ಮಶಾಸ್ತ್ರ, ಕಾಮಶಾಸ್ತ್ರ, ಈ ಎಲ್ಲಾ ಶಾಸ್ತ್ರಗಳು ಸಂಗ್ರಹರೂಪವಾಗಿ ಹೇಳಿರುವನು. ಗಂಡುಗೋಗಿಲೆಯ ಇಂಪಾದ ಗಾನವನ್ನು ಕೇಳಿದವನಿಗೆ ಕಾಗೆಯ ಕೂಗು ಹೇಗೆ ಇಂಪಾಗಿರುವುದಿಲ್ಲವೋ, ಹಾಗೆಯೇ ಈ ಮಹಾಭಾರತವೆಂಬ ಇತಿಹಾಸವನ್ನು ಕೇಳಿದಮೇಲೆ, ಬೇರೆ ಯಾವುದನ್ನು ಕೇಳಿದರೂ ಹಿತವಾಗಿ ತೋರದು. ಸ್ವರ್ಗ ಮರ್ತ್ಯ ಪಾತಾಳಗಳೆಂಬ (ಆಧ್ಯಾತ್ಮಿಕ, ಆದಿದೈವಿಕ, ಆದಿಭೌತಿಕಗಳೆಂಬ) ಮೂರು ಲೋಕಗಳೂ, ಪಂಚಭೂತಗಳಿಂದಲೇ ಉಂಟಾಗುವಂತೆ, ಕವಿಗಳ ಪ್ರತಿಭೆಗಳೆಲ್ಲವೂ ಈ ಇತಿಹಾಸದಿಂದಲೇ ಉಂಟಾಗುವುವು. ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕುಬಗೆಯ ಜೀವಿಗಳೂ (ಎಂದರೆ, ಮೃಗಮನುಷ್ಯಾದಿಗಳಂತೆ ಗರ್ಭಚೀಲದಿಂದ ಹುಟ್ಟಿದುವುಗಳು, ಪಕ್ಷಿಗಳಂತೆ ಮೊಟ್ಟೆಗಳಿಂದ ಹುಟ್ಟಿದುವು, ಚೇಳು ಮೊದಲಾದುವುಗಳಂತೆ ಶಾಕದಿಂದ ಉತ್ಪನ್ನವಾಗತಕ್ಕುವು, ಭೂಮಿಯನ್ನು ಭೇದಿಸಿಕೊಂಡು ಹುಟ್ಟುವ ಸಸ್ಯಾದಿಗಳು,) ಆಕಾಶದಲ್ಲಿ ಅಡಗಿರು

ವಂತೆ, ಪುರಾಣಗಳೆಲ್ಲ ಈ ಇತಿಹಾಸದಲ್ಲಿಯೇ ಗರ್ಭಿತಗಳಾಗಿವೆಯು ಲ್ಲದೆ, ಈ ಮಹಾಭಾರತವನ್ನು ಅತಿಕ್ರಮಿಸಿದ ಬೇರೆ ವಿಷಯಗಳೇ ಇಲ್ಲ. ಎಲ್ಲಾ ಇಂದ್ರಿಯಗಳಿಗೂ, ನಾನಾವಿಧ ಮನೋವೃತ್ತಿಗಳೇ ಆಧಾರವಾಗಿ ರುವಂತೆ, ಎಲ್ಲಾ ಕಾರ್ಯಗುಣಗಳಿಗೂ ಈ ಇತಿಹಾಸವೇ ಮೂಲಾಧಾರ ವೆನಿಸಿದೆ. ಆಹಾರವಿಲ್ಲದೆ ದೇಹವು ಹೇಗೆ ನಿಲ್ಲಲಾರದೋ, ಹಾಗೆಯೇ ಈ ಮಹಾಭಾರತದ ಆಧಾರವಿಲ್ಲದ ಬೇರೆ ಕಥೆಗಳೊಂದೂ ಭೂಮಿಯಲ್ಲಿ ನೆಲೆ ಗೊಂಡಿರಲಾರವು.

ಪುರೋವೃದ್ಧಿಗೆ ಬರಬೇಕೆಂಬ ಆಸೆಯುಳ್ಳ ಭೃತ್ಯರು, ಒಳ್ಳೇ ಕುಲೀನ ರಾದ ಉತ್ತಮಪ್ರಭುಗಳನ್ನಾಶ್ರಯಿಸುವಂತೆ, ಕವಿಶ್ರೇಷ್ಠರೆಲ್ಲರೂ ಈ ಮಹಾಭಾರತವೆಂಬ ಆಖ್ಯಾನವನ್ನೇ ಆಶ್ರಯಿಸಿರುವರು. ಸಾಧುವಾದ ಗೃಹಸ್ಥನನ್ನು ಬೇರೆ ಮೂರು ಆಶ್ರಮದಲ್ಲಿರತಕ್ಕವರೂ ಅತಿಶಯಿಸಲಾರ ದಂತೆ, ಬೇರೆ ಯಾವ ಕವಿಗಳೂ ಈ ಕಾವ್ಯವನ್ನು ಅತಿಶಯಿಸುವುದಕ್ಕೆ ಸಮರ್ಥರಲ್ಲ.

ಓ ಮಹರ್ಷಿಗಳಿರಾ! ನಿಮಗೆ ಧರ್ಮದಲ್ಲಿಯೇ ಬುದ್ಧಿಯು ಸದಾ ಕಾಲವೂ ಎಚ್ಚರಗೊಂಡಿರಲಿ! ಪರಲೋಕಕ್ಕೆ ಹೋದಾಗಲೂ ಆ ಧರ್ಮವೇ ನಿಮಗೆ ಸಹಾಯಮಾಡತಕ್ಕ ಬಂಧು! ಧನವಾಗಲಿ, ಸ್ತ್ರೀಯರಾಗಲಿ, ಇತರ ಬಂಧುಗಳಾಗಲಿ, ನಿಮ್ಮಿಂದ ಎಷ್ಟೇ ಎಚ್ಚರದಿಂದ ಆದರಿಸಿ ಪೋ ಷಿಸಲ್ಪಟ್ಟರೂ ಅವೊಂದೂ ನಿಮ್ಮ ಸ್ವಂತವೆನಿಸುವುದಿಲ್ಲ. ಅವು ಸ್ಥಿರವೂ ಅಲ್ಲ. ಶ್ರೀಕೃಷ್ಣದ್ವೈಪಾಯನನ (ವ್ಯಾಸಮುನಿಯ) ತುಟಿಗಳಿಂದ ಹೊರಟ ಈ ಭಾರತದ ಮಹಿಮೆಯನ್ನು ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಇದು ಪವಿತ್ರವಾದುದು. ಮನಸ್ಸನ್ನು ಶುದ್ಧಿಗೊಳಿಸಿ, ಪಾಪಗಳನ್ನು ನೀಗಿಸಿ, ಶುಭಗಳನ್ನು ಕೊಡತಕ್ಕುದು. ಇಂತಹ ಭಾರತವನ್ನೋದುವಾಗ ಅದನ್ನು ಆದರಿಸಿ ಕೇಳತಕ್ಕವನಿಗೆ ಪುಷ್ಕರವೆಂಬ ಪುಣ್ಯತೀರ್ಥದ ಸ್ನಾನದಿಂದೇನು? (ಅಥವಾ ಆನೆಯ ಸುಂಡಿಲಿನಿಂದ ಅಭಿಷೇಕಿಸಲ್ಪಡುವ ಪಟ್ಟಾಭಿಷೇಕದಲ್ಲಿ ತಾನೇ ಅತಿಶಯವೇನಿದೆ?). ಬ್ರಾಹ್ಮಣನು ಇಂದ್ರಿಯವಶನಾಗಿ ಹಗಲು ಮಾಡತಕ್ಕ ಪಾತಕಗಳೇನಿದ್ದರೂ, ಈ ಮಹಾಭಾರತವನ್ನೋದುವುದರಿಂದ

ಆ ದಿನದ ಸಂಜೆಯೊಳಗಾಗಿ ಅವು ಅವನನ್ನು ಬಿಟ್ಟುಹೋಗುವುವು. (ಪಾಪಮುಕ್ತನಾಗುವನು) ರಾತ್ರಿಯಲ್ಲಿ ಮನೋವಾಕ್ಕಾಯಗಳಿಂದ ಮಾಡಿದ ಯಾವ ಪಾಪವಾದರೂ ಈ ಗ್ರಂಥಪಠನದಿಂದ ಬೆಳಗಾಗವುದರೊಳಗೆ ಬಿಟ್ಟುಹೋಗುವುದು. ವೇದಶಾಸ್ತ್ರಗಳನ್ನೋದಿದ ಉತ್ತಮಬ್ರಾಹ್ಮಣರಿಗೆ ಸುವರ್ಣಾಲಂಕೃತಗಳಾದ ಕೊಂಬುಗಳುಳ್ಳ ನೂರಾರು ಗೋವುಗಳನ್ನು ದಾನಮಾಡಿದವನಿಗೂ, ಈ ಪುಣ್ಯಕರವಾದ ಮಹಾಭಾರತವನ್ನೋದಿದವನಿಗೂ ಲಭಿಸತಕ್ಕ ಫಲವು ಸಮಾನವೇ! ಅತ್ಯುತ್ತಮವಾಗಿ, ಮಹಾರ್ಥಗಳನ್ನೊಳಕೊಂಡು, ಲೋಕಕ್ಕೆಲ್ಲ ಅವಶ್ಯಪಠನೀಯವಾಗಿರುವ ಮಹಾಭಾರತವೆಂಬ ಇತಿಹಾಸವನ್ನಲ್ಲಿ ಈ ಪರ್ವಸಂಗ್ರಹವೆಂಬ ಭಾಗದಿಂದ ಕೇಳಿದವರಿಗೆ ಸಣ್ಣ ಹಡಗಿನಿಂದ ಮಹಾಸಮುದ್ರವನ್ನು ದಾಟುವಂತೆ, ಆ ಅಪಾರಗ್ರಂಥವು ಇದರಿಂದ ಸುಲಭಗ್ರಾಹ್ಯವಾಗುವುದು.

ಇದು ಎರಡನೆಯ ಅಧ್ಯಾಯವು.

**ಇಲ್ಲಿಗೆ ಪರ್ವಸಂಗ್ರಹಪರ್ವವು ಮುಗಿದುದು.**

# ಪೌಷ್ಯಪರ್ವವು.

ಜನಮೇಜಯುನಿಗೆ ಸರಮೆಯೆಂಬ ದೇವಶುನಿಯಿಂದ ಬಂದ ಶಾಪನಿವೃತ್ತಿಗಾಗಿ, ಸೋಮಶ್ರವನೆಂಬ ಋಷಿಯನ್ನು ತನಗೆ ಪುರೋಹಿತನನ್ನಾಗಿ ವರಿಸಿದುದು. ಆರುಣಿ, ಉಪಮನ್ಯು, ವೈದರೆಂಬ ಧೌಮ್ಯಶಿಷ್ಯರ ಕಥೆ. ವೈದಶಿಷ್ಯನಾದ ಉತಂಕನ ಕಥೆ. ಪೌಷ್ಯನೆಂಬ ರಾಜನ ಕಥೆ.

ಪರೀಕ್ಷಿತ್ಕುಮಾರನಾದ ಜನಮೇಜಯನು ತನ್ನ ಸಹೋದರರೊಡನೆ ಕುರುಕ್ಷೇತ್ರದಲ್ಲಿ ಬಹುದೀರ್ಘಕಾಲದವರೆಗೆ ನಡೆಸತಕ್ಕ ಒಂದು ಸತ್ರಯಾಗವನ್ನಾರಂಭಿಸಿ ನಡೆಸುತಿದ್ದನು. ಅವನಿಗೆ ಶ್ರುತಸೇನ, ಉಗ್ರ

ಸೇನ, ಭೀಮಸೇನರೆಂಬ ಮೂವರು ಸಹೋದರರಿದ್ದರು. ಅವರು ಸತ್ರ ಯಾಗವನ್ನು ನಡೆಸುತ್ತಿದ್ದಾಗ, ಸರಮೆಯೆಂಬ ದೇವಶುನಿಯ (ದೇವಲೋಕದ ಹೆಣ್ಣುನಾಯಿ) ಹೊಟ್ಟೆಯಲ್ಲಿ ಹುಟ್ಟಿದ ಒಂದು ಶುನಕವು, ಆ ಯಾಗ ಸ್ಥಳಕ್ಕೆ ಪ್ರವೇಶಿಸಿತು. ಜನಮೇಜಯನ ಸಹೋದರರು ಆ ನಾಯಿಯನ್ನು ನೋಡಿ ಕೋಪದಿಂದ ಹೊಡೆದಟ್ಟಲು, ಅದು ಅರಚುತ್ತ ತನ್ನ ತಾಯಿಯ ಸಮೀಪಕ್ಕೆ ಬಂದಿತು. ಹೀಗೆ ಅಳುತ್ತಿರುವ ತನ್ನ ಮರಿಯನ್ನು ನೋಡಿ ತಾಯಿಯು "ಅಪ್ಪಾ! ಏತಕ್ಕೆ ಅಳುವೆ? ನಿನ್ನನ್ನು ಹೊಡೆದವರಾರು?" ಎಂದು ಕೇಳಿತು. ಆಗ ಶುನಕವು ತಾಯಿಯನ್ನು ಕುರಿತು "ಅಮ್ಮಾ! ಜನಮೇಜಯನ ಸಹೋದರರು ನನ್ನನ್ನು ಹೊಡೆದರು" ಎಂದಿತು. ಅದಕ್ಕಾ ತಾಯಿಯು "ನೀನೇನೋ ಅವರಲ್ಲಿ ಅಪರಾಧವನ್ನು ಮಾಡಿರಬೇಕು. ಅದರಿಂದಲೇ ಅವರು ನಿನ್ನನ್ನು ಹೊಡೆದರು" ಎಂದಿತು. ಅದಕ್ಕೆ ತಿರುಗಿ ಆ ಶುನಕವು "ಅಮ್ಮಾ! ನಾನು ಯಾವ ತಪ್ಪನ್ನೂ ಮಾಡಲಿಲ್ಲ. ಅಲ್ಲಿನ ಹವಿಸ್ಸುಗಳನ್ನು ನಾನು ಕಣ್ಣೆತ್ತಿಯೂ ನೋಡಲಿಲ್ಲ. ನಾನು ಅಲ್ಲಿ ಯಾವುದನ್ನೂ ನಕ್ಕಿ ಎಂಜಲಾಗಿಸಲೂ ಇಲ್ಲ" ಎಂದಿತು. ಇದನ್ನು ಕೇಳಿ ತಾಯಿಯಾದ ಸರಮೆಯು ಮಗನಲ್ಲಿ ಕನಿಕರಗೊಂಡು ದುಃಖಪಡುತ್ತ, ಜನಮೇಜಯನು ತನ್ನ ತಮ್ಮಂದಿರೊಡನೆ ಯಜ್ಞಮಾಡುತ್ತಿದ್ದ ಸ್ಥಳಕ್ಕೆ ಬಂದಿತು. ಅಲ್ಲಿದ್ದ ಆ ಸಹೋದರರನ್ನು ನೋಡಿ ಕೋಪಗೊಂಡು "ಅಯ್ಯಾ! ನನ್ನ ಮಗುವಾದ ಈ ಶುನಕವು ನಿಮ್ಮಲ್ಲಿ ಯಾವ ಅಪರಾಧವನ್ನೂ ಮಾಡಲಿಲ್ಲ. ನಿಮ್ಮ ಹವಿಸ್ಸುಗಳನ್ನು ಕಣ್ಣೆತ್ತಿಯಾದರೂ ನೋಡಲಿಲ್ಲ. ನಕ್ಕಲೂ ಇಲ್ಲ. ಈ ಅರಿಯದ ಮಗುವನ್ನು ನೀವೇಕೆ ಹೊಡೆದಿರಿ?" ಎಂದು ಕೇಳಿತು. ಅದಕ್ಕಾ ಸಹೋದರರು, ಸಮಾಧಾನವನ್ನೇನೂ ಹೇಳದೆ ಅಲಕ್ಷ್ಯವಾಗಿ ಸುಮ್ಮನಿದ್ದರು. ಆಗ ಸರಮೆಯು ಕೋಪದಿಂದ ಅವರನ್ನು ಕುರಿತು "ಅಯ್ಯಾ! ಈ ನನ್ನ ಮಗು ನಿರಪರಾಧಿಯಾಗಿದ್ದರೂ ನೀವು ನಿಷ್ಕಾರಣವಾಗಿ ಇದನ್ನು ಹೊಡೆದಿರಲ್ಲವೆ? ಇದರಿಂದ ನಿಮಗೆ ಮುಂದೆ ಆಕಸ್ಮಿಕವಾದ ಭಯವೊಂದು ಸಂಭವಿಸುವುದು" ಎಂದು ಶಪಿಸಿತು. ದೇವಶುನಿಯಾದ ಸರಮೆಯು ಹೀಗೆ ಶಪಿಸಿದುದನ್ನು ಕೇಳಿ ಜನಮೇಜಯನು ಬಹಳ ಭಯಪಟ್ಟು, ಹಿಂದುಮುಂದುತೋರದೆ ಬಹಳ ಚಿಂತಾಕುಲ

ನಾದನು. ಸತ್ರಯಾಗವು ಮುಗಿದ ಕೂಡಲೆ ಹಸ್ತಿನಾಪುರಕ್ಕೆ ಹೋದನು. "ತನಗೆ ಸಂಭವಿಸಿದ ಶಾಪರೂಪವಾದ ಶೂನ್ಯದೇವತೆಯನ್ನು ಶಾಂತಿಗೊಳಿಸಲು ಸಮರ್ಥನಾರೋ ಕಾಣೆನಲ್ಲಾ" ಎಂದು ಚಿಂತಿಸುತ್ತ, ಸಮರ್ಥನಾದ ಪುರೋಹಿತನೊಬ್ಬನನ್ನು ಸಂಪಾದಿಸಲು ಪ್ರಯತ್ನಿಸುತ್ತಿದ್ದನು. ಹೀಗಿರುತ್ತ ಒಮ್ಮೆ ಆ ಜನಮೇಜಯನು ಬೇಟೆಗೆ ಹೊರಟು, ತನ್ನ ದೇಶಭಾಗದಲ್ಲಿ ಸುತ್ತುತ್ತಿರುವಾಗ, ಒಂದು ಕಡೆಯಲ್ಲಿ ಒಂದಾನೊಂದು ಋಷ್ಯಾಶ್ರಮವು ಅವನಿಗೆ ಕಾಣಿಸಿತು. ಅಲ್ಲಿ ಶ್ರುತಶ್ರವನೆಂಬ ಒಬ್ಬ ಋಷಿಯಿದ್ದನು. ಅವನಿಗೆ ಸೋಮಶ್ರವನೆಂಬ ಪುತ್ರನೊಬ್ಬನಿದ್ದನು. ಆ ಋಷಿಕುಮಾರನು ಬಹಳ ಶ್ರದ್ಧೆಯಿಂದ ತಪಸ್ಸನ್ನು ನಡೆಸುತ್ತಿದ್ದನು. ಜನಮೇಜಯನು ನೆಟ್ಟಗೆ ಆ ಶ್ರುತಶ್ರವನ ಬಳಿಗೆ ಹೋಗಿ ನಮಸ್ಕರಿಸಿ "ಓ ಮಹಾತ್ಮಾ! ನಿನ್ನ ಮಗನನ್ನು ನನಗೆ ಪುರೋಹಿತನನ್ನಾಗಿ ಕಳುಹಿಸಿಕೊಡಬೇಕು" ಎಂದು ಪ್ರಾರ್ಥಿಸಿದನು.

ಅದಕ್ಕಾ ಋಷಿಯು "ಓ ಜನಮೇಜಯಾ! ಈ ಪುತ್ರನು ನನಗೆ ಒಂದಾನೊಂದು ನಾಗಕನ್ಯೆಯಲ್ಲಿ ಹುಟ್ಟಿದವನು. ಇವನು ಮಹಾತಪಸ್ವಿ, ವೇದಾಧ್ಯಯನವನ್ನು ಚೆನ್ನಾಗಿ ಬಲ್ಲವನು, ನನ್ನಂತೆಯೇ ತಪೋಬಲವುಳ್ಳವನು. ಒಂದಾನೊಂದು ಹೆಣ್ಣುಹಾವು ನನ್ನ ರೇತಸ್ಸನ್ನು ಕುಡಿಯಲು ಅದರ ಗರ್ಭದಲ್ಲಿ ಇವನು ಜನಿಸಿದನು. ಶಿವನಿಂದ ಪ್ರೇರಿಸಲ್ಪಟ್ಟ ಕೃತ್ಯೆಯನ್ನು (ಶೂನ್ಯದೇವತೆಯನ್ನು) ಹೊರತು ಬೇರೆ ಎಲ್ಲಾ ಪಾಪದೇವತೆಯನ್ನೂ ನಿಗ್ರಹಿಸಲು ಈತನಿಗೆ ಸಾಮರ್ಥ್ಯವುಂಟು. ಹಾಗಿದ್ದರೂ ಇವನಿಗೆ ಗೂಢವಾದ ಒಂದಾನೊಂದು ವ್ರತನಿಯಮವುಂಟು. ಏನೆಂದರೆ, ಈತನು ಯಾವನಾದರೂ ಒಬ್ಬ ಬ್ರಾಹ್ಮಣನು ತನ್ನ ಬಳಿಗೆ ಬಂದು ಯಾವುದಾದರೂ ಒಂದು ಅರ್ಥವನ್ನು ಯಾಚಿಸಿದರೆ, ಆ ಕ್ಷಣವೇ ಅದನ್ನು ಅವನಿಗೆ ಕೊಟ್ಟುಬಿಡುವನು. ಇದಕ್ಕೆ ನೀನು ಸಮ್ಮತಿಸುವುದಾದರೆ ನಿನ್ನೊಡನೆ ಇವನನ್ನು ಕರೆದುಕೊಂಡುಹೋಗಬಹುದು" ಎಂದನು. ಅದಕ್ಕಾ ಜನಮೇಜಯನು "ಮಹಾತ್ಮಾ! ಹಾಗೆಯೇ ಆಗಲಿ" ಎಂದು ಹೇಳಿ, ಆ ಹೊಸ ಪುರೋಹಿತನನ್ನು ತನ್ನೊಡನೆ ಕರೆದುಕೊಂಡು, ಹಿಂತಿರುಗಿ ತನ್ನ

ರಾಜಧಾನಿಗೆ ಬಂದು ತನ್ನ ಸಹೋದರರನ್ನು ಕರೆದು "ಸಹೋದರರೇ! ಇದೋ! ಇವನನ್ನು ನಾನು ಪುರೋಹಿತನನ್ನಾಗಿ ವರಿಸಿರುವೆನು. ಈತನು ಹೇಗೆ ಹೇಳುವನೋ ಆ ವಿಷಯದಲ್ಲಿ ನೀವು ಹಿಂದುಮುಂದು ವಿಚಾರಿಸದೆ ಒಡನೆಯೇ ನಡೆಸಬೇಕು" ಎಂದನು. ಜನಮೇಜಯನು ಹೇಳಿದಂತೆಯೇ ಸಹೋದರರು ಆ ಪುರೋಹಿತನ ವಾಕ್ಯಾನುಸಾರವಾಗಿ ನಡೆದುಕೊಳ್ಳುತ್ತಿದ್ದರು. ಜನಮೇಜಯನು ತನ್ನ ಸಹೋದರರಿಗೆ ಹೀಗೆಂದು ನಿಯಮಿಸಿದ ಮೇಲೆ, ತಕ್ಷಶಿಲೆಯೆಂಬ ನಗರಕ್ಕೆ ದಂಡೆತ್ತಿಹೋಗಿ ಆ ದೇಶವನ್ನು ತನ್ನ ವಶಮಾಡಿಕೊಂಡನು

ಇದೇ ಸಮಯದಲ್ಲಿ *(ಅಯೋದನೆಂಬ ನಾಮಾಂತರವುಳ್ಳ) ಧೌಮ್ಯನೆಂಬ ಋಷಿಯಿದ್ದನು. ಆತನು ಕೇವಲಜಲಪಾನದಿಂದಲೇ ಜೀವಿಸುತ್ತಿದ್ದ ಅಪೋದನೆಂಬವನ ಮಗನು. ಅವನಿಗೆ ಮೂರು ಮಂದಿ ಶಿಷ್ಯರು. ಆ ಮೂವರಿಗೂ ಕ್ರಮವಾಗಿ ಉಪಮನ್ಯು, ಆರುಣಿ ಮತ್ತು ಬೈದನೆಂದು ಹೆಸರು. ಈ ಮೂವರು ಶಿಷ್ಯರಲ್ಲಿ ಪಾಂಚಾಲದೇಶೀಯನಾದ ಆರುಣಿಯೆಂಬವನನ್ನು ನೋಡಿ ಆ ಋಷಿಯು "ಶಿಷ್ಯಾ! ನೀನು ಹೋಗಿ ಗದ್ದೆಗೆ ನೀರು ಬಿಡುವ ತೂಬನ್ನು ಕಟ್ಟಿ ಬಾ" ಎಂದು ಹೇಳಿ ಕಳುಹಿಸಿದನು. ಗುರುವಿನ ಆಜ್ಞೆಯಂತೆ ಆರುಣಿಯು ಗದ್ದೆಗೆ ಹೋಗಿ, ಅದರ ತೂಬನ್ನು ಮುಚ್ಚಲು ಎಷ್ಟೋ ಪ್ರಯತ್ನಿಸಿಯೂ ಅವನಿಂದ ಸಾಧ್ಯವಾಗಲಿಲ್ಲ ಅದಕ್ಕಾಗಿ ಆತನು ಬಹಳ ಕಷ್ಟಪಟ್ಟು ಕೊನೆಗೆ ಬಹಳ ಹೊತ್ತು ಆಲೋಚಿಸಿ, "ಇರಲಿ! ಇದಕ್ಕೆ ಬೇರೊಂದುಪಾಯವನ್ನು ಮಾಡುವೆನು" ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು, ಆ ತೂಬಿಗೆ ಅಡ್ಡಲಾಗಿ ಮಲಗಿಬಿಟ್ಟನು. ಆಗ ನೀರು ಹೊರಗೆ ಬಾರದೆ ನಿಂತುಹೋಯಿತು. ಆಮೇಲೆ ಒಮ್ಮೆ ಧೌಮ್ಯನು ತನ್ನ ಉಳಿದ ಇಬ್ಬರು ಶಿಷ್ಯರನ್ನು ಕುರಿತು "ಏನಿದು? ಪಾಂಚಾಲದೇಶದಿಂದ ಬಂದ ಆರುಣಿಯು ಎಲ್ಲಿಹೋದನು" ಎಂದು ಕೇಳಿದನು. ಅದಕ್ಕವರು "ಮಹಾತ್ಮಾ! ತೂಬನ್ನು ಕಟ್ಟಿ ಬರಬೇಕೆಂದು ನೀವೇ ಅವ

* ಅಯೋಧನೆಂದರೆ ಉಕ್ಕಿನ ಹಲ್ಲುಗಳುಳ್ಳವನು. ಅಪೋದನೆಂದೂ ಪಾಠಾಂತರವು.

ನನ್ನು ಕಳುಹಿಸಲಿಲ್ಲವೇ" ಎಂದರು ಇದನ್ನು ಕೇಳಿದೊಡನೆ ಗುರುವು ಬೆಜ್ಜರಬಿದ್ದು "ಹೌದು! ನಿಜವೇ! ಅವನನ್ನು ಕಳುಹಿಸಿ ಬಹಳ ಹೊತ್ತಾಯಿತು. ಆದುದರಿಂದ ನಾವೂ ಅದೇ ಸ್ಥಳಕ್ಕೆ ಹೋಗಿ ನೋಡುವೆವು" ಎಂದು ಹೇಳಿ, ಆ ಇಬ್ಬರು ಶಿಷ್ಯರೊಡನೆ ಆ ತೂಬಿದ್ದ ಕಡೆಗೆ ಬಂದು "ಓ ಆರುಣೀ! ಪಾಂಚಾಲ್ಯಾ! ಎಲ್ಲಿರುವೆ? ವತ್ಸಾ! ಬಾ!" ಎಂದು ಘಟ್ಟಿಯಾಗಿ ಕೂಗಿದನು. ಈ ಕೂಗನ್ನು ಕೇಳಿದೊಡನೆ ಆರುಣಿಯು ತಟ್ಟನೆ ಮೇಲೆದ್ದು, ಉಪಾಧ್ಯಾಯನ ಬಳಿಗೆ ಬಂದು "ಗುರುವರ್ಯ್ಯಾ! ಇದೋ! ಬಂದೆನು. ಈ ಕಂಡಿಯಿಂದ ನುಗ್ಗಿಬರುವ ನೀರಿನ ವೇಗವನ್ನು ತಡೆಯಲು ಎಷ್ಟೆಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಅದಕ್ಕಾಗಿ ಆ ರಂಧ್ರಕ್ಕೆ ಅಡ್ಡಲಾಗ ನಾನೇ ಮಲಗಿದ್ದೆನು. ತಾವು ಕೂಗಿದ ಶಬ್ದವನ್ನು ಕೇಳದೊಡನೆ ಅದನ್ನು ಬಿಟ್ಟು ಎದ್ದುಬಂದೆನು. ಇದೋ ನಮಸ್ಕರಿಸುವೆನು. ಮತ್ತೇನಾಜ್ಞೆ!" ಎಂದನು. ಇದನ್ನು ಕೇಳಿ ಉಪಾಧ್ಯಾಯನು "ವತ್ಸಾ! ನೀನು ಗದ್ದೆಯ ತೆವರಿಯನ್ನು ಕಿತ್ತುಕೊಂಡುಬಂದುದರಿಂದ, ನಿನಗೆ "**ಉದ್ದಾಲಕ**"ನೆಂಬ ಹೆಸರಿರಲಿ! ಮತ್ತು ಗುರುಭಕ್ತಿಯಿಂದ ನೀನು ನನ್ನ ಆಜ್ಞೆಯನ್ನು ಕ್ರಮವಾಗಿ ನಡೆಸಿದೆಯಾದುದರಿಂದ, ಮುಂದೆ ನೀನು ಶ್ರೇಯಸ್ಸನ್ನು ಹೊಂದುವೆ. ಸಮಸ್ತವೇದಗಳೂ, ಸಕಲ ಧರ್ಮಶಾಸ್ತ್ರಗಳೂ ನಿನ್ನ ಮನಸ್ಸಿಗೆ ತಾನಾಗಿ ಹೊಳೆಯಲಿ" ಎಂದು ಆಶೀರ್ವದಿಸಿದನು. ಹೀಗೆ ಆಚಾರ್ಯನಿಂದ ಅನುಗ್ರಹೀತನಾಗಿ ಆರುಣಿಯು ಆಮೇಲೆ ತನಗೆ ಇಷ್ಟವಾದ ದೇಶಕ್ಕೆ ಹೊರಟುಹೋದನು.

ಆಮೇಲೆ ಮತ್ತೊಮ್ಮೆ ಅಯೋದನೆಂಬ ಧೌಮ್ಯನು ಉಪಮನ್ಯುವೆಂಬ ತನ್ನ ಮತ್ತೊಬ್ಬ ಶಿಷ್ಯನನ್ನು ಕರೆದು "ವತ್ಸ! ಉಪಮನ್ಯೂ! ನೀನು ದನಗಳನ್ನು ಮೇಯಿಸಿಕೊಂಡು ಬಾ" ಎಂದು ನಿಯಮಿಸಿದನು. ಆ ಶಿಷ್ಯನೂಕೂಡ ಉಪಾಧ್ಯಾಯನ ಆಜ್ಞೆಯಂತೆ ಹಗಲೆಲ್ಲಾ ಹಸುಗಳನ್ನು ಮೇಯಿಸುತ್ತಿದ್ದು, ಸಾಯಂಕಾಲದಲ್ಲಿ ತನ್ನ ಗುರುವಿನ ಆಶ್ರಮಕ್ಕೆ ಬಂದು ತನ್ನ ಉಪಾಧ್ಯಾಯನ ಮುಂದೆ ನಿಂತು ನಮಸ್ಕರಿಸಿದನು. ಆಗ ಉಪಾಧ್ಯಾಯನು ತನ್ನ ಶಿಷ್ಯನಾದ ಆ ಉಪಮನ್ಯುವು ಚೆನ್ನಾಗಿ ಪುಷ್ಟಿಯು

ಬ್ಬಿ ಪುಷ್ಟಿಹೊಂದಿರುವುದನ್ನು ನೋಡಿ "ವತ್ಸ! ಉಪಮನ್ಯೂ! ನಿನ್ನ ದೇಹವು ಬಹಳ ಪುಷ್ಟಿಹೊಂದಿರುವುದಲ್ಲಾ! ನೀನು ಹೇಗೆ ಜೀವನಮಾಡುತ್ತಿರುವೆ? ಯಾವ ಆಹಾರವನ್ನು ತೆಗೆದುಕೊಳ್ಳುತ್ತಿರುವೆ?" ಎಂದು ಕೇಳಿದನು. ಅದಕ್ಕಾ ಶಿಷ್ಯನು "ಆಚಾರ್ಯಾ! ನಾನು ಭಿಕ್ಷೆಯಿಂದ ಜೀವಿಸುತ್ತಿರುವೆನು" ಎಂದು ಉತ್ತರಕೊಟ್ಟನು. ಅದನ್ನು ಕೇಳಿ ಉಪಾಧ್ಯಾಯನು "ವತ್ಸಾ! ನೀನು ತಂದ ಭಿಕ್ಷೆಯನ್ನು ಮೊದಲು ನನಗೆ ಒಪ್ಪಿಸದೆ ನೀನೇ ಉಪಯೋಗಿಸಬಹುದೆ?" ಎಂದನು. ಅದಕ್ಕಾ ಶಿಷ್ಯನು "ಇನ್ನು ಮುಂದೆ ಹಾಗೆಯೇ ಮಾಡುವೆ"ನೆಂದು ಹೇಳಿ, ಭಿಕ್ಷೆಯನ್ನು ತಂದಾಗಲೆಲ್ಲಾ ಅದನ್ನು ಗುರುವಿನ ಮುಂದೆ ತಂದಿಡುತ್ತಿದ್ದನು. ಗುರುವು ಆ ಶಿಷ್ಯನು ತಂದ ಭಿಕ್ಷೆಯನ್ನೆಲ್ಲ ತಾನೇ ಇಟ್ಟುಕೊಂಡು, ಅವನನ್ನು ಕಳುಹಿಸಿಬಿಡುತ್ತಿದ್ದನು. ಆಗಲೂ ಶಿಷ್ಯನು ಗುರುವಿನ ಆಜ್ಞೆಗೆ ಬದ್ಧನಾಗಿ ಹಗಲೆಲ್ಲಾ ಹಸುಗಳನ್ನು ಮೇಯಿಸುತ್ತ, ಹೊತ್ತುಮುಳುಗುವ ಸಮಯಕ್ಕೆ ಹಿಂತಿರುಗಿ, ಉಪಾಧ್ಯಾಯನ ಮನೆಗೆ ಬಂದು, ಅವನ ಮುಂದೆ ನಿಂತು ನಮಸ್ಕರಿಸಿದನು. ಆಗಲೂ ಆತನ ದೇಹವು ಸ್ವಲ್ಪವೂ ಕೃಶವಾಗದೆ ಉಬ್ಬಿರುವುದನ್ನು ನೋಡಿ ಆಶ್ಚರ್ಯದಿಂದ "ವತ್ಸ! ಉಪಮನ್ಯು! ನೀನು ತಂದ ಭಿಕ್ಷೆಯಲ್ಲಿ ಸ್ವಲ್ಪವನ್ನಾದರೂ ಉಳಿಸದೆ ನಾನೇ ತೆಗೆದುಕೊಳ್ಳುತ್ತಿರುವೆನಲ್ಲಾ! ಈಗ ನೀನು ಜೀವನಮಾಡುವುದು ಹೇಗೆ?" ಎಂದನು. ಅದಕ್ಕಾ ಶಿಷ್ಯನು "ಸ್ವಾಮೀ! ಮೊದಲು ಸಾರಿ ಎತ್ತಿತಂದ ಭಿಕ್ಷೆಯನ್ನು ನಿಮ್ಮಲ್ಲಿ ಒಪ್ಪಿಸಿಬಿಟ್ಟು, ತಿರುಗಿ ಮತ್ತೊಮ್ಮೆ ಭಿಕ್ಷೆಯನ್ನೆತ್ತಿ ಅದರಿಂದ ನಾನು ಜೀವನವನ್ನು ನಡೆಸಿಕೊಳ್ಳುತ್ತಿರುವೆನು" ಎಂದನು. ಅದನ್ನು ಕೇಳಿ ತಿರುಗಿ ಗುರುವು ಶಿಷ್ಯನನ್ನು ಕುರಿತು "ಉಪಮನ್ಯೂ! ಹೀಗೆ ಮಾಡುವುದುಕೂಡ ಗುರುಕುಲಕ್ಕೆ ಉಚಿತವಾದ ನಡತೆಯಲ್ಲ. ಏಕೆಂದರೆ, ನೀನು ಹೀಗೆ ಮಾಡುವುದರಿಂದ ಭಿಕ್ಷೆಯೆತ್ತಿ ಜೀವಿಸುತ್ತಿರುವ ಇತರರ ಜೀವನಕ್ಕೆ ಹಾನಿಯನ್ನು ತರುವೆಯಲ್ಲವೆ? ನೀನು ಹೀಗೆಯೇ ಮಾಡುತ್ತಿದ್ದರೆ ಲೋಭಿಯೆನಿಸಿಕೊಳ್ಳುವೆ" ಎಂದನು. ಅದನ್ನು ಕೇಳಿ ಶಿಷ್ಯನು 'ಅಪ್ಪಣೆ' ಎಂದು ಹೇಳಿ, ಎಂದಿನಂತೆ ಹಸುಗಳನ್ನು ಕಾಯುತ್ತಿದ್ದನು. ಹೀಗೆ ಗುರುವಿನ ಆಜ್ಞೆಗೆ ಬದ್ಧನಾಗಿ ಹಗಲೆಲ್ಲಾ ಹಸುಗಳನ್ನು ಕಾಯು

ತ್ತಿದ್ದು, ಸಂಜೆಗೆ ಮನೆಗೆ ಬಂದು ಉಪಾಧ್ಯಾಯರಿಗೆ ನಮಸ್ಕರಿಸಿ ಮುಂದೆ ನಿಲ್ಲಲು, ಆಗಲೂ ಆ ಶಿಷ್ಯನು ಮೊದಲಿನಂತೆಯೇ ದೇಹಪುಷ್ಟಿಯುಳ್ಳವನಾಗಿರುವುದನ್ನು ನೋಡಿ "ವತ್ಸಾ! ಏನಿದು? ನೀನು ತಂದ ಭಿಕ್ಷೆಯನ್ನೆಲ್ಲ ನಾನೇ ತೆಗೆದುಕೊಳ್ಳುತ್ತಿರುವೆನು. ತಿರುಗಿ ಎರಡನೆಯಸಾರಿ ನೀನು ಭಿಕ್ಷೆಯನ್ನೆತ್ತತಕ್ಕವನಲ್ಲ. ಹಾಗಿದ್ದರೂ ನಿನ್ನ ಮೈ ಬಡವಾಗದೆ ಉಬ್ಬಿರುವುದು. ನೀನು ಹೇಗೆ ಜೀವನಮಾಡುತ್ತಿರುವೆ?" ಎಂದನು. ಅದಕ್ಕಾ ಶಿಷ್ಯನು "ಸ್ವಾಮಿಾ! ಹಸುಗಳ ಹಾಲನ್ನು ಕುಡಿದು ನಾನು ಜೀವಿಸುತ್ತಿರುವೆನು" ಎಂದನು. ಅದನ್ನು ಕೇಳಿ ಉಪಾಧ್ಯಾಯನು "ಉಪಮನ್ಯೋ! ಇದೂ ಸರಿಯಲ್ಲ. ಆ ಹಸುಗಳ ಹಾಲನ್ನಾದರೂ ಉಪಯೋಗಿಸಲು ನಾನು ನಿನಗೆ ಅನುಮತಿಯನ್ನು ಕೊಡಲಿಲ್ಲವಲ್ಲ" ಎಂದನು. ಅದಕ್ಕಾ ಶಿಷ್ಯನು "ಇನ್ನುಮೇಲೆ ಹಾಗೆಯೇ ನಡೆದುಕೊಳ್ಳುವೆನು" ಎಂದು ಪ್ರತಿಜ್ಞೆಮಾಡಿ, ಎಂದಿನಂತೆ ಪಶುಗಳನ್ನು ಮೇಯಿಸುತ್ತಿದ್ದು, ಸಂಜೆಗೆ ಮನೆಗೆ ಬಂದು ಗುರುವಿನ ಮುಂದೆ ನಿಂತು ನಮಸ್ಕರಿಸಿದನು. ಆಗಲೂ ಆ ಶಿಷ್ಯನ ದೇಹವು ಮೊದಲಿನಂತೆಯೇ ಮಾಂಸಪುಷ್ಟಿಯಿಂದಿರುವುದನ್ನು ನೋಡಿ "ವತ್ಸಾ! ನೀನೇನೋ ಮೊದಲು ಸಂಪಾದಿಸಿ ತಂದ ಭಿಕ್ಷೆಯನ್ನು ನನಗೆ ಒಪ್ಪಿಸುತ್ತಿರುವೆ. ಎರಡನೆಯಸಾರಿ ಎತ್ತುವುದಿಲ್ಲ. ಹಸುಗಳ ಹಾಲನ್ನೂ ಕುಡಿಯುವುದಿಲ್ಲವೆಂದು ಪ್ರತಿಜ್ಞೆಮಾಡಿಕೊಟ್ಟಿರುವೆ. ನಿನ್ನ ದೇಹವೇನೋ ಇನ್ನೂ ಚೆನ್ನಾಗಿಯೇ ಉಬ್ಬಿರುವುದು. ನಿನ್ನ ಜೀವನಕ್ರಮವು ಹೇಗೆ? ಹೇಳು" ಎಂದನು. ಅದಕ್ಕಾ ಶಿಷ್ಯನು "ಆಚಾರ್ಯಾ! ಈ ಕರುಗಳು ತಾಯಿಯ ಮೊಲೆಯನ್ನು ಕುಡಿಯುತ್ತಿರುವಾಗ ಅವುಗಳ ಕಡೆಬಾಯಿಯಿಂದ ಚೆಲ್ಲಿ ಬೀಳುವ ನೊರೆಯನ್ನು ಕುಡಿದು ಜೀವಿಸುತ್ತಿರುವೆನು" ಎಂದನು. ಅದಕ್ಕಾ ಗುರುವು ತಿರುಗಿ ಅವನನ್ನು ಕುರಿತು "ಅಯ್ಯೋ! ಇದೂ ಅಧರ್ಮವು! ಈ ಕರುಗಳು ಬಹು ದಯಾಗುಣವುಳ್ಳವುಗಳು. ನಿನ್ನಲ್ಲಿ ಕನಿಕರದಿಂದಲೇ ಇವು ಹೆಚ್ಚಾಗಿ ನೊರೆಯನ್ನು ಹೊರಕ್ಕೆ ಚೆಲ್ಲಿಬಿಡುತ್ತಿರಬಹುದು. ನೀನು ಆ ನೊರೆಗೆ ಆಸೆಪಟ್ಟರೆ, ಆ ಕರುಗಳ ಜೀವನಕ್ಕೆ ನೀನಾಗಿ ಕಲ್ಲುಹಾಕಿದಂತಾಗುವುದು. ಆದುದರಿಂದ ನೀನು ಆ ನೊರೆಯನ್ನೂ ಕುಡಿಯಬಾರದು" ಎಂದನು. ಶಿಷ್ಯನು ಹಾಗೆಯೇ ಆಗಲೆಂದು

ಪ್ರತಿಜ್ಞೆಮಾಡಿ, ಮುಂದೆ ಆಹಾರವನ್ನೇನೂ ತೆಗೆದುಕೊಳ್ಳದೆಯೇ ಹಸುಗಳನ್ನು ಮೇಯಿಸಿಕೊಂಡು ಬರುತ್ತಿದ್ದನು. ಗುರುವಿನ ಆಜ್ಞೆಗೆ ಬದ್ಧನಾಗಿ ಆ ಶಿಷ್ಯನು ಭಿಕ್ಷಾನ್ನವನ್ನು ಭುಜಿಸದೆ ಬಿಟ್ಟನು. ಎರಡನೆಯ ಸಾರಿ ಭಿಕ್ಷೆಯೆತ್ತುವುದನ್ನೂ ಬಿಟ್ಟನು. ಹಸುಗಳ ಹಾಲನ್ನೂ ಕುಡಿಯಲೊಲ್ಲನು! ಕರುಗಳ ಬಾಯಿಂದ ಚೆಲ್ಲಿದ ನೊರೆಯನ್ನೂ ಉಪಯೋಗಿಸನು! ಹೀಗಿದ್ದು ಒಮ್ಮೆ ಕಾಡಿನಲ್ಲಿ ಹಸುಗಳನ್ನು ಕಾಯುತ್ತಿರುವಾಗ ಹಸಿವನ್ನು ತಡೆಯಲಾರದೆ ಎಕ್ಕದ ಎಲೆಗಳನ್ನು ತಿಂದುಬಿಟ್ಟನು. ಹೀಗೆ ಬಹಳ ಕಹಿಯೂ, ಕಾರವೂ, ಕಟುವೂ ಆಗಿ, ಬಹಳ ತೀಕ್ಷ್ಣವೇಗವುಳ್ಳ ಎಕ್ಕದೆಲೆಗಳನ್ನು ತಿಂದುದರಿಂದ, ಅವನ ಕಣ್ಣುಗಳು ಕೆಟ್ಟುಹೋಗಿ ಕುರುಡನಾದನು. ಹೀಗೆ ಕುರುಡನಾಗಿ ಕಾಡಿನಲ್ಲಿ ಅತ್ತಿತ್ತ ಅಲೆದಾಡುತ್ತ ಒಂದಾನೊಂದು ಬಾವಿಯಲ್ಲಿ ಬಿದ್ದುಬಿಟ್ಟನು. ಹಾಗೆಯೇ ಸೂರ್ಯಾಸ್ತಮಯವಾಯಿತು. ಇಷ್ಟರಲ್ಲಿ ಇತ್ತಲಾಗಿ ಉಪಾಧ್ಯಾಯನು, ಸೂರ್ಯನು ಅಸ್ತಮಿಸಿದರೂ ತನ್ನ ಶಿಷ್ಯನಾದ ಉಪಮನ್ಯುವು ಕಾಡಿನಿಂದ ಹಿಂತಿರುಗಿ ಬಾರದುದನ್ನು ನೋಡಿ, ಇತರ ಶಿಷ್ಯರನ್ನು ಕುರಿತು "ಓ ವಟುಗಳೇ! ಏನಿದು? ಉಪಮನ್ಯುವು ಹೋಗಿ ಬಹಳ ಹೊತ್ತಾದರೂ ಇನ್ನೂ ಹಿಂತಿರುಗಿ ಬರಲಿಲ್ಲವಲ್ಲ! ನಾನು ಅವನ ಜೀವನೋಪಾಯಗಳಿಗೆಲ್ಲ ಅಡ್ಡಿಮಾಡಿದುದನ್ನು ನೋಡಿ ಅವನು ಕೋಪದಿಂದ ಹಿಂತಿರುಗಿ ನನ್ನಲ್ಲಿಗೆ ಬಾರದೆ ಇರಬಹುದು. ಆದುದರಿಂದ ನಾವೆಲ್ಲರೂ ಅವನನ್ನು ಹುಡುಕಿ ಕರೆತರಬೇಕು" ಎಂದು ಹೇಳಿ, ತನ್ನ ಶಿಷ್ಯರೊಡನೆ ಕಾಡಿಗೆ ಹೊರಟನು. ಅಲ್ಲಿ ಅವನನ್ನು ಕರೆಯುವುದಕ್ಕಾಗಿ ಉಚ್ಚಧ್ವನಿಯಿಂದ "ಓ ಉಪಮನ್ಯೂ! ವತ್ಸಾ! ಎಲ್ಲಿರುವೆ! ಬಾ!" ಎಂದು ಕೂಗಿದನು. ಬಾವಿಯಲ್ಲಿ ಬಿದ್ದಿದ್ದ ಉಪಮನ್ಯುವಿಗೆ ಉಪಾಧ್ಯಾಯನು ಕರೆದ ಧ್ವನಿಯು ಕೇಳಿಸಿತು. ಅಲ್ಲಿಂದಲೇ ಅವನು "ಸ್ವಾಮಿ! ಇದೋ! ನಾನು ಈ ಬಾವಿಯಲ್ಲಿ ಬಿದ್ದಿರುವೆನು" ಎಂದನು. ಅದನ್ನು ಕೇಳಿ ಗುರುವು ಸಮೀಪಕ್ಕೆ ಬಂದು "ವತ್ಸ! ನೀನು ಈ ಬಾವಿಯಲ್ಲಿ ಬಿದ್ದುದು ಹೇಗೆ?" ಎಂದು ಕೇಳಲು, ಶಿಷ್ಯನು "ಮಹಾತ್ಮಾ! ನಾನು ಕ್ಷುದ್ಬಾಧೆಯನ್ನು ತಡೆಯಲಾರದೆ ಎಕ್ಕದೆಲೆಗಳನ್ನು ತಿಂದುದರಿಂದ ಕಣ್ಣುಗಳು ಕೆಟ್ಟು ಕುರುಡನಾದೆನು. ಕಣ್ಣುಕಾ

ಣದೆ ಅತ್ತಿತ್ತ ಅಲೆದಾಡುತ್ತ ಈ ಬಾವಿಯಲ್ಲಿ ಬಿದ್ದೆನು" ಎಂದನು. ಅದಕ್ಕೆ ಉಪಾಧ್ಯಾಯನು "ವತ್ಸ! ಚಿಂತೆಯಿಲ್ಲ. ದೇವವೈದ್ಯರಾದ ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿ ಪ್ರಾರ್ಥಿಸು. ಅವರು ನಿನಗೆ ಕಣ್ಣುಗಳನ್ನು ಕೊಡುವರು" ಎಂದನು ಗುರುವಿನ ಆಜ್ಞೆಯಂತೆ ಉಪಮನ್ಯುವು ಕೆಲವು *ಋಕ್ಕುಗಳಿಂದ ಅಶ್ವಿನೀದೇವತೆಗಳನ್ನು ಸ್ತುತಿಸುವನು.

"ಓ ದೇವವೈದ್ಯರೇ! ಅಶ್ವಿನೀದೇವತೆಗಳೇ! ನಿಮ್ಮಿಬ್ಬರನ್ನೂ ನಾನು ಈ ವಾಕ್ಯಗಳಿಂದ ಸ್ತುತಿಸುವೆನು. ನೀವಾದರೋ "ಪ್ರಪೂರ್ವಗರು". (ಎಲ್ಲಾ ದೇವತೆಗಳಿಗಿಂತಲೂ ಮುಂದಾಗಿ ಯಜ್ಞಶಾಲೆಗೆ ಹೋಗತಕ್ಕವರು.) ಮತ್ತು ನೀವು 'ಪೂರ್ವಜರು' ಎಂದರೆ, ಗರ್ಭೋತ್ಪತ್ತಿಗೆ ಮೊದಲೇ, (ಕುದುರೆಗಳ ಸ್ವಭಾವವನ್ನನುಸರಿಸಿ ಮುಖಸಂಯೋಗಮಾತ್ರದಿಂದ) ಹುಟ್ಟಿದವರು. ನೀವು ಅಗ್ನಿಸಮಾನರು. ಸ್ವಸಾಮರ್ಥ್ಯದಿಂದ ಅನಂತ ರೂಪಗಳನ್ನು ಧರಿಸಬಲ್ಲವರು. ಸೂರ್ಯನಿಂದ ಹುಟ್ಟಿದವರು. ವೇಗವಾದ ನಡೆಯುಳ್ಳವರು. ರಜೋಗುಣವಿಲ್ಲದವರು. ಸಮಸ್ತ ಲೋಕಗಳಲ್ಲಿಯೂ ತಡೆಯಿಲ್ಲದೆ ವಿಮಾನಗಳನ್ನು ನಡೆಸತಕ್ಕವರು. ಸುವರ್ಣಾಭರಣಗಳಿಂದ ಅಲಂಕೃತರಾದವರು. ಆರೋಗ್ಯಮೂಲಕವಾಗಿ ಶಕ್ತಿಯನ್ನುಂಟುಮಾಡತಕ್ಕವರು. ಪರಲೋಕದಲ್ಲಿಯೂ ಹಿತವನ್ನುಂಟುಮಾಡತಕ್ಕವರು. (ಭಕ್ತರನ್ನು ಆಪತ್ತಿನಲ್ಲಿ ರಕ್ಷಿಸುವುದಕ್ಕಾಗಿ ಮುಂದುವರಿಯತಕ್ಕವರು) ಅಸತ್ಯವಿಲ್ಲದವರು. (ನಾಸಾಪುಟದಿಂದ ಹುಟ್ಟಿದವರು.) ದರ್ಶನೀಯವಾದ ಸುಂದರಾಕಾರವುಳ್ಳವರು. ಎಸಳಾದ ಮೂಗುಳ್ಳವರು. ವಿಶೇಷವಾಗಿ ಜಯಶಾಲಿಗಳು. ನೇಗೆಯುವರು ನೂಲಿನಲ್ಲಿರುವ ಕೊಳೆಯನ್ನು ನೀಗಿಸಿ, ಬಿಳಿಯ ನೂಲನ್ನು ನೇದು ವಸ್ತ್ರವನ್ನು ಹೇಗೆ ರಚಿಸುವರೋ, ಹಾಗೆ ನೀವು ಸೂರ್ಯಪುತ್ರರಾದುದರಿಂದ, ಆ ಸೂರ್ಯನ ಬಲದ ಮೇಲೆ ಶ್ಯಾಮಕುಷ್ಠವೆಂಬ ತೊನ್ನುವ್ಯಾಧಿಯನ್ನು ನೀಗಿಸಿ, ಆಶ್ರಿತರಿಗೆ

---

* ಋಗ್ವೇದದ ಎಂಟನೇ ಅಷ್ಟಕದಲ್ಲಿ ಅಶ್ವಿನೀದೇವತೆಗಳ ಸ್ತುತಿರೂಪವಾದ ಋಕ್ಕುಗಳ ಅರ್ಥವೇ ಇಲ್ಲಿ ಹೇಳಲ್ಪಟ್ಟಿದೆ. ಇದರಲ್ಲಿ ಅಶ್ವಿನೀದೇವತೆಗಳನ್ನು ಮುಂದಿಟ್ಟುಕೊಂಡು ಪರಬ್ರಹ್ಮವನ್ನೇ ಸ್ತುತಿಸುವಹಾಗೆ ಅರ್ಥಸ್ಫೂರ್ತಿಯಾಗುವುದು.

ಕಾಂತಿಯುಕ್ತವಾದ ವರ್ಣೋತ್ಕರ್ಷವನ್ನು (ಅಥವಾ ಕಣ್ಣನ್ನು) ಅನುಗ್ರಹಿಸತಕ್ಕವರು.

ಓ ಅಶ್ವಿನೀ ದೇವತೆಗಳಿರಾ! ಗರುಡನಿಗೆ ಸಮಾನವಾದ ಪರಾಕ್ರಮವುಳ್ಳ *ಒಂದು ವೃಕದ (ತೋಳದ) ಬಲದಿಂದ ನಿಗೃಹೀತವಾಗಿ ಕೆಳಗೆ ಬಿದ್ದಿದ್ದ ವರ್ತಿಕೆಯೆಂಬ ಪಕ್ಷಿಯನ್ನು ಬಿಡಿಸಿ, ನೀವು ಜೀವದಾನವನ್ನು ಮಾಡಿದವರು. ಇಂದ್ರನೇ ಮೊದಲಾದ ಬೇರೆ ಅನೇಕದೇವತೆಗಳಿದ್ದರೂ, ಅಸಮಾಚೀನವಾದ ಗೋವುಗಳನ್ನು ಅವರು ರಕ್ಷಿಸಲು ಶಕ್ತರಲ್ಲದಕಾರಣದಿಂದ, ದ್ವಿಜರು ದಿನಾರಂಭದಲ್ಲಿ ಅರುಣನನ್ನು ಹೇಗೋಹಾಗೆ ಸೋಮಯಾಗದ ಆರಂಭದಲ್ಲಿ ಯಜಮಾನನು ಮೊಟ್ಟಮೊದಲು ಯಾವ ನಿಮ್ಮಿಬ್ಬರನ್ನೇ ಸ್ತೋತ್ರಮಾಡುವನೋ, ಅಂತಹ ನಿಮಗೆ ನನ್ನ ಪೂರ್ಣ ವಂದನವು.

ಬೇರೆಬೇರೆ †ಅನೇಕಗೋಷ್ಠ (ಕೊಟ್ಟಿಗೆ) ಗಳಲ್ಲಿ ಇರತಕ್ಕವುಗಳಾಗಿ, ಒಬ್ಬ ಅಧ್ವರ್ಯುವಿನಿಂದಲೇ ಕರೆಯಲ್ಪಡತಕ್ಕವುಗಳಾಗಿರುವ ಮುನ್ನೂರರುವತ್ತು ಗೋವುಗಳಿಂದ ಒಂದು ಸಂವತ್ಸರಕಾಲದವರೆಗೆ ಲಭಿಸುವ ತುಪ್ಪದಿಂದಲೂ, ಹಾಲಿನಿಂದಲೂ ಲಭಿಸುವ ಧರ್ಮಕ್ಕೆ ಯಾರು ಭಾಗಿಗಳೋ ಅಂತಹ ಅಶ್ವಿನೀದೇವತೆಗಳಿಗೆ ನಮಸ್ಕರಿಸುವೆನು.

ಓ ಅಶ್ವಿನೀದೇವತೆಗಳಿರಾ! ಯಾವ ಚಕ್ರದ ಮಧ್ಯದಲ್ಲಿರುವ ನಾಭಿಗೆ (ಗುಂಭಕ್ಕೆ) ‡ಏಳುನೂರಿಪ್ಪತ್ತು ಅರಗಳು ನಾಟಲ್ಪಟ್ಟಿವೆಯೋ, ಯಾವ ಚಕ್ರವು ಎಂದೆಂದಿಗೂ ಸವೆಯದೆ, ನೇಮಿಯೂ ಇಲ್ಲದೆ (ಅಥವಾ

---

* ಇದು ವೇದದ ಋಕ್ಕುಗಳಲ್ಲಿರುವ ಒಂದು ಕಥೆ.

† ಇಲ್ಲಿ ಬೇರೆಬೇರೆ ಗೋಷ್ಠಗಳೆಂದರೆ ಅನೇಕ ದೇಶಗಳು. ಗೋವುಗಳೆಂದರೆ ಮುನ್ನೂರರುವತ್ತು ದಿನಗಳು. ಕರೆಯುವನೆಂದರೆ ಆ ದಿನಗಳನ್ನೆಳೆಯುವ ಸೂರ್ಯನು. ಕಿರಣವೇ ಅವನು ಕರೆಯತಕ್ಕ ಹಾಲು.

‡ ಏಳುನೂರಿಪ್ಪತ್ತು ಅರಗಳಿಂದ ಕೂಡಿದ ಚಕ್ರವೆಂದರೆ ರಾತ್ರಿ ಮತ್ತು ಹಗಲೆಂಬ ಏಳುನೂರಿಪ್ಪತ್ತು ಅರಗಳುಳ್ಳ ಸಂವತ್ಸರವೆಂಬ ಅನಂತವಾದ ಕಾಲಚಕ್ರವೆಂದು ಭಾವವು. ಹೀಗೆಯೇ ಮುಂದೆಯೂ ಹನ್ನೆರಡು ಅರಗಳೆಂದರೆ ಹನ್ನೆರಡು ತಿಂಗಳು, ಆರು ನಾಭಿಗಳೆಂದರೆ ಆರು ಋತುಗಳು.

ಚಕ್ರದ ನೇಮಿಯು ಇದ್ದ ಸ್ಥಳದಲ್ಲಿಯೇ ಇದ್ದು) ಸುತ್ತುತ್ತಿರುವುದೋ, ಅಂತಹ ಸೂರ್ಯನ ರಥಚಕ್ರವನ್ನು ನಡೆಸತಕ್ಕ ನಿಮಗೆ ನಮಸ್ಕಾರವು. ಮಾಯೆಯಿಂದ ಆಶ್ರಯಿಸಲ್ಪಟ್ಟ ನಿಮಗೆ ನಮಸ್ಕಾರವು.

ಬೇರೆ ಯಾವ ಚಕ್ರವು ಹನ್ನೆರಡು ಅರಗಳಿಂದಲೂ, ಆರು ನಾಭಿಗಳಿಂದಲೂ, ಒಂದೇ ಅಚ್ಚಿನಿಂದಲೂ ಕೂಡಿದುದಾಗಿ, ಸ್ವರ್ಗಕ್ಕೆ ಸಾಧಕವಾಗಿರುವುದೋ, ಯಾವ ಚಕ್ರವನ್ನು ಸಮಸ್ತಜೀವರಾಶಿಗಳೂ ಆಶ್ರಯಿಸಿ ನಡೆಯುತ್ತಿರುವುವೋ, ಅಂತಹ (ಕಾಲ) ಚಕ್ರದಲ್ಲಿ ಸಿಕ್ಕಿ ನರಳುತ್ತಿರುವ ನನ್ನ ದುಃಖವನ್ನು ಅಶ್ವಿನೀದೇವತೆಗಳು ಬಿಡಿಸಲಿ!

ಓ ಅಶ್ವಿನೀದೇವತೆಗಳಿರಾ! ನಾನಾಕರ್ಮಸಮರ್ಥರಾದ ನೀವೇ ಜಲದಲ್ಲಿ ಸೋಮವೆಂಬ ಅಮೃತವನ್ನು ನಿರ್ಮಿಸಿದಿರಿ! ನೀವೇ ಮೇರುಗಿರಿಯನ್ನು ಬಿಟ್ಟು ಭೂಮಿಗೆ ಬರುತ್ತಾ ಪ್ರಾಣಿಗಳಿಗೆ ಅನ್ನಾದಿಗಳ ಮೂಲಕವಾಗಿ ಬಲವನ್ನು ಕೊಡತಕ್ಕ ವೃಷ್ಟಿಯನ್ನೂ ಕೊಟ್ಟು ಕಾಪಾಡುವಿರಿ.

ಎಲೈ ಅಶ್ವಿನೀದೇವತೆಗಳಿರಾ! ನೀವಿಬ್ಬರೂ ಸೋಮಯಾಗದಲ್ಲಿ ಎಲ್ಲರಿಗೂ ಮುಂದಾಗಿ ಬರತಕ್ಕವರು. (ನೀವು ಇಂದ್ರಾದಿ ದಶ ದಿಕ್ಪಾಲಕರನ್ನೂ, ದೇವತೆಗಳನ್ನೂ ನಿಮ್ಮ ಆಗಮನದಿಂದ ಪ್ರತ್ಯಕ್ಷೀಕರಿಸತಕ್ಕವರು) ಆಮೇಲೆ ಯಾಗದ ಪ್ರಧಾನಭಾಗದಲ್ಲಿ ಸಂಬಂಧಿಸಿದ ಆ ದಿಗ್ದೇವತೆಗಳನ್ನು ಹಿಂಬಾಲಿಸಿ ಋಷಿಗಳು ಬರುವರು. ಹೀಗೆ ಮೊದಲು ನಿಮ್ಮ ಆಗಮನವೇ ಉಳಿದ ದೇವಾದಿಗಳ ಆಗಮನಕ್ಕೂ ಕಾರಣವಾದುದರಿಂದ, ನೀವು ದೇವತೆಗಳ ಮತ್ತು ಮನುಷ್ಯರ ಸ್ತೋತ್ರಕ್ಕೆ ಭಾಗಿಗಳಾಗಿರುವಿರಿ.

ಓ ವಿಶ್ವೇದೇವತೆಗಳಿರಾ! ನೀವು ನಾನಾವರ್ಣವುಳ್ಳವುಗಳಾಗಿ, ಸೃಷ್ಟ್ಯಾದಿಗಳಿಗೆ ಕಾರಣಗಳಾಗಿ, ಅನೇಕ ರೂಪಗಳಾಗಿರುವ ಯಾವ ಕಿರಣಗಳನ್ನು ಪ್ರಕಾಶಗೊಳಿಸುತ್ತಿರುವಿರೋ, ನಿಮ್ಮ ಸಂಬಂಧವುಳ್ಳ ಅಂತಹ ಸೂರ್ಯಕಿರಣಗಳು ಸಮಸ್ತ ಭುವನಗಳನ್ನೂ ಆವರಿಸಿರುವುವು. ಆ

ಕಿರಣಗಳೂಕೂಡ ನಿಮ್ಮನ್ನನುಸರಿಸಿಯೇ ನಡೆಯುವುದರಿಂದ, ದೇವ, ಮಾನವಾದಿಗಳೆಲ್ಲರೂ ನಿಮ್ಮನ್ನೇ ಅನುಸರಿಸಿ ಸ್ತುತಿಸುತ್ತಿರುವರು.

ಓ ಅಶ್ವಿನೀದೇವತೆಗಳಿರಾ! ನೀವು ಪದ್ಮಮಾಲಾಧಾರಿಗಳು! ಮರಣವಿಲ್ಲದವರು! ಯಜ್ಞವರ್ಧಕರು! ಲೋಕಪ್ರಸಿದ್ಧರು! ನೀವೇ ಮೊಟ್ಟಮೊದಲು ಸೋಮಯಾಗಕ್ಕೆ ಬರತಕ್ಕವರು. ನಿಮ್ಮನ್ನು ಬಿಟ್ಟು ಇಂದ್ರಾದಿ ದೇವತೆಗಳು ಆ ಯಾಗಾದಿ ಸ್ಥಾನಗಳಲ್ಲಿ ದೇವಯೋಗ್ಯವಾದ ಹವಿಸ್ಸನ್ನು ಪಡೆಯಲಾರರು. ಇಂತಹ ನಿಮ್ಮಿಬ್ಬರನ್ನೂ ನಾನು ಮನಸಾ ಧ್ಯಾನಿಸುವೆನು.

ಓ ಅಶ್ವಿನೀದೇವತೆಗಳಿರಾ! ನೀವು *ಮುಖಸಂಯೋಗಮಾತ್ರದಿಂದ ಯೌವನದಶೆಯೊಡನೆಯೇ ಗರ್ಭದಿಂದ ಜನನವನ್ನು ಪಡೆದವರು. ಮನುಷ್ಯರು ಮೊದಲಾದ ಇತರ ಪ್ರಾಣಿಗಳಾದರೋ ಒಂಭತ್ತು ತಿಂಗಳವರೆಗೆ ಗರ್ಭವಾಸದುಃಖವನ್ನು ಅನುಭವಿಸಿ ಹುಟ್ಟುವರು. ಅಂತಹ ಗರ್ಭದಿಂದ ಹುಟ್ಟಿದವರು ಹುಟ್ಟಿದಕೂಡಲೆ ತಾಯಿಯ ಹಾಲನ್ನು ಕುಡಿಯುವರು. ಮನುಷ್ಯಯೋಗ್ಯವಾದ ಇಂತಹ ಹೀನಜನನವು ಮರಣಧರ್ಮವಿಲ್ಲದ ನಿಮಗಿಲ್ಲ. ಇಂತಹ ನೀವು ನನಗೆ ಕಣ್ಣುಗಳನ್ನು ಕೊಟ್ಟು ಬದುಕಿಸಿರಿ.

---

* ಇಲ್ಲಿ "ಮುಖೇನ ಗರ್ಭಂ ಲಭತಾಂ ಯುವಾನೌ ಗತಾಸುರೇತತ್ ಪ್ರಪದೇನ ಸೂತೇ। ಸದ್ಯೋಜಾತೋ ಮಾತರಮತ್ತಿ ಗರ್ಭಃ। ತಾವಶ್ವಿನೌ ಮುಂಚಥೋ ಜೀವಸೇ ಗಾಮ್" ಎಂದು ಮೂಲವು. ಇದಕ್ಕೆ "ಯುವಕ ಯುವತಿಯರಿಬ್ಬರೂ ಮುಖದಿಂದ ಗರ್ಭವನ್ನು ಧರಿಸಿ, ಉಸಿರಿಲ್ಲದ ಪ್ರಾಣಿಯು ಆ ಗರ್ಭವನ್ನು ಕಾಲಿಂದ ಪ್ರಸವಿಸುವುದೆಂದೂ, ಹುಟ್ಟಿದ ಶಿಶುವು ಒಡನೆಯೇ ತಾಯಿಯನ್ನೇ ತಿನ್ನುವುದೆಂದೂ, ಅಂತಹ ಅಶ್ವಿನೀದೇವತೆಗಳಾದ ನೀವು ಲೋಕಜೀವನಕ್ಕಾಗಿ ಸೂರ್ಯಕಿರಣಗಳನ್ನು ವ್ಯಾಪಿಸುವ ಹಾಗೆ ಮಾಡುವಿರೆಂದೂ ಇಲ್ಲಿ ಅರ್ಥಾಂತರವೊಂದುಂಟು. ಇದರ ಗೂಢಾರ್ಥವೇನೆಂದರೆ, ಭೂಮ್ಯಾಕಾಶಗಳೆರಡೂ ಸೂರ್ಯರಶ್ಮಿ ಮುಖದಿಂದ ಭೂಮಿಯ ಜಲವನ್ನೆಳೆದು ಗರ್ಭವನ್ನು ಧರಿಸಿ, ಆಕಾಶಮಾರ್ಗವೆಂಬ ಪಾದದಿಂದ ಅದನ್ನು ಮಳೆಯರೂಪವಾಗಿ ಪ್ರಸವಿಸಿದ ಮೇಲೆ, ಗರ್ಭರೂಪವಾದ ಆ ವರ್ಷಜಲವೇ ತನ್ನ ತಾಯಿಯೆನಿಸಿದ ಭೂಮಿಯನ್ನು ನುಂಗುವುದೆಂದರೆ ಆವರಿಸುವುದೆಂದು ಭಾವವು. ಇದರಿಂದ ಅಶ್ವಿನೀದೇವತೆಗಳು ಸೂರ್ಯರಶ್ಮಿಯೊಡನೆ ಸೇರಿದ್ದು ಮಳೆಗೆ ಕಾರಣಭೂತರಾಗುವರೆಂದು ಅರ್ಥವು.

ನಿಮ್ಮ ಗುಣಗಳನ್ನೆಲ್ಲ ಎತ್ತಿಹೇಳಿ ನಿಮ್ಮನ್ನು ಸ್ತುತಿಸಲು ನಾನು ಶಕ್ತನಲ್ಲ. ಕಣ್ಣಿಲ್ಲದವನಾದ. ನಾನು ಈಗ ದಾರಿ ತಿಳಿಯದೆ ತಡಬಡಿಸುತ್ತಾ ಈ ದುರ್ಗಮವಾದ ಕೂಪದಲ್ಲಿ ಬಿದ್ದೆನು. ನಿಮ್ಮಲ್ಲಿ ಶರಣುಹೊಕ್ಕಿರುವೆನು. ನನ್ನನ್ನು ರಕ್ಷಿಸಿ ಕಾಪಾಡಬೇಕು'' ಎಂದು ಹೇಳಿ ಇನ್ನೂ ಅನೇಕ ಋಕ್ಕುಗಳಿಂದ ಆ ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿದನು.

ಹೀಗೆ ಸ್ತುತಿಸಲ್ಪಟ್ಟ ಅಶ್ವಿನೀದೇವತೆಗಳು, ಅವನಿಗೆ ಪ್ರತ್ಯಕ್ಷರಾಗಿ ''ಓ ಋಷಿಕುಮಾರಾ! ನಿನ್ನ ಸ್ತೋತ್ರಕ್ಕೆ ಮೆಚ್ಚಿದೆವು. ಇದೋ! ನಿನಗಾಗಿ ಇದೊಂದು ದೋಸೆಯನ್ನು ತಂದಿರುವೆವು. ಇದನ್ನು ಭಕ್ಷಿಸು. ಇದರಿಂದ ನಿನಗೆ ಕ್ಷೇಮವುಂಟು'' ಎಂದರು. ಅದಕ್ಕಾ ಶಿಷ್ಯನು ''ಎಲೈ ಮಹಾತ್ಮರೇ! ನೀವು ಹೇಳಿದುದೇನೂ ತಪ್ಪಲಾರದು. ಆದರೆ, ನಾನು ಇದನ್ನು ಗುರುವಿಗೆ ನಿವೇದಿಸದೆ ಉಪಯೋಗಿಸಲಾರೆನು'' ಎಂದನು. ಅದನ್ನು ಕೇಳಿ ಅಶ್ವಿನೀದೇವತೆಗಳು ''ವತ್ಸಾ! ನೀನು ಚಿಂತಿಸಬೇಡ! ಹಿಂದೊಮ್ಮೆ ನಿಮ್ಮ ಗುರುವೂ ಹೀಗೆಯೇ ನಮ್ಮನ್ನು ಸ್ತೋತ್ರಮಾಡಲು, ಅವನಿಗೆ ನಾವು ಇದೇ ಅಪೂಪವನ್ನು (ದೋಸೆ) ಅನುಗ್ರಹಿಸಿಕೊಟ್ಟೆವು. ಅವರು ಅದನ್ನು ತನ್ನ ಗುರುವಿಗೆ ಒಪ್ಪಿಸದೆ ತಾವೇ ಉಪಯೋಗಿಸಿದರು. ನಿನ್ನ ಉಪಾಧ್ಯಾಯರೇ ಹೀಗೆ ಮಾಡಿರುವಾಗ ನೀನೇಕೆ ಉಪಯೋಗಿಸಬಾರದು?'' ಎಂದರು. ಅದಕ್ಕಾ ಉಪಮನ್ಯುವು ''ಓ ಮಹಾತ್ಮರೇ! ನಾನು ತಿರುಗಿ ನಿಮ್ಮಲ್ಲಿ ಪ್ರಾರ್ಥಿಸಿಕೊಳ್ಳುವೆನು. ನಾನು ಮಾತ್ರ ಗುರುವಿಗೆ ನಿವೇದಿಸದೆ ಈ ಅಪೂಪವನ್ನು ಭಕ್ಷಿಸಲಾರೆನು'' ಎಂದನು. ಆಗ ದೇವತೆಗಳು ''ವತ್ಸಾ! ನಿನ್ನ ಗುರುಭಕ್ತಿಗೆ ಮೆಚ್ಚಿದೆವು. ನಿನ್ನ ಉಪಾಧ್ಯಾಯರಿಗೆ ಉಕ್ಕಿನ ಹಲ್ಲುಗಳುಂಟು. ನಿನ್ನ ಹಲ್ಲುಗಳು ಅದಕ್ಕೆಮೇಲೆ ಸುವರ್ಣಮಯಗಳಾಗುವುವು. ನಿನಗೆ ಮೊದಲಿನಂತೆ ಕಣ್ಣುಗಳು ಬರಲಿ! ನೀನು ಅನೇಕ ಶ್ರೇಯಸ್ಸುಗಳನ್ನು ಹೊಂದುವೆ'' ಎಂದರು. ಹೀಗೆ ಉಪಮನ್ಯುವು ಅಶ್ವಿನೀದೇವತೆಗಳ ವರಬಲದಿಂದ ಕಣ್ಣುಗಳನ್ನು ಪಡೆದು, ಉಪಾಧ್ಯಾಯನಬಳಿಗೆ ಬಂದು ಅಭಿವಾದನಮಾಡಿ, ನಡೆದ ಸಂಗತಿಗಳನ್ನೆಲ್ಲ ತಿಳಿಸಿದನು. ಉಪಾಧ್ಯಾಯನು ಅವನಲ್ಲಿ ಪ್ರೀತನಾಗಿ ''ವತ್ಸಾ!

ಅಶ್ವಿನೀದೇವತೆಗಳು ಹೇಳಿದಂತೆ ನಿನಗೆ ಮುಂದೆ ಶ್ರೇಯಸ್ಸುಂಟು. ಸಮಸ್ತ ವೇದಗಳೂ, ಸಕಲ ಧರ್ಮಶಾಸ್ತ್ರಗಳೂ ನಿನಗೆ ಪ್ರಕಾಶಿಸುವುವು" ಎಂದನು.

ಹೀಗೆ ಉಪಮನ್ಯುವಿನ ಪರೀಕ್ಷೆಯು ಮುಗಿದಮೇಲೆ, ಧೌಮ್ಯನು ಬೈದನೆಂಬ ಮೂರನೆಯ ಶಿಷ್ಯನನ್ನು ನೋಡಿ "ವತ್ಸ ಬೈದಾ! ನಾನು ಹೇಳುವವರೆಗೆ ಇಲ್ಲಿಯೇ ನನ್ನ ಮನೆಯಲ್ಲಿರು. ಸ್ವಲ್ಪಕಾಲದವರೆಗೆ ನನ್ನಲ್ಲಿಯೇ ಶುಶ್ರೂಷೆಯನ್ನು ಮಾಡುತ್ತಿರಬೇಕು. ಅದರಿಂದಲೇ ನಿನಗೆ ವಿದ್ಯಾಲಾಭವುಂಟು" ಎಂದನು. ಗುರುವಿನ ಆಜ್ಞೆಯಂತೆ ಆ ಬೈದನು ಯಾವಾಗಲೂ ಶಶ್ರೂಷೆಯನ್ನು ಮಾಡುತ್ತಾ ಬಹುಕಾಲದವರೆಗೆ ಗುರುಕುಲದಲ್ಲಿಯೇ ವಾಸಿಸುತಿದ್ದನು. ಗುರುವು ಎತ್ತುಗಳಮೇಲೆ ಹೇಗೋಹಾಗೆ ಅವನಮೇಲೆ ಹೊರಬಾರದ ಹೊರೆಗಳನ್ನು ಹೊರಿಸುತ್ತಾ (ದುರ್ಭರವಾದ ಕಾರ್ಯಭಾರವನ್ನು ಆತನಮೇಲೆ ವಿನಿಯೋಗಿಸುತ್ತಾ) ಅವನಿಂದ ಕೆಲಸಗಳನ್ನು ತೆಗೆಯುತ್ತಿದ್ದನು. ಆ ಶಿಷ್ಯನೂ ಕೂಡ ಚಳಿ, ಗಾಳಿ, ಬಿಸಿಲು, ಹಸಿವು, ಬಾಯಾರಿಕೆ ಇವೆಲ್ಲವನ್ನೂ ಸಹಿಸಿಕೊಂಡು ಗುರುವಿನ ಯಾವ ಮಾತಿಗೂ ಪ್ರತಿಹೇಳದೆ ನಡೆದುಕೊಳ್ಳುತ್ತಿದ್ದನು. ಬಹುಕಾಲದಮೇಲೆ ಗುರುವಿಗೆ ಅವನಲ್ಲಿ ಕನಿಕರಹುಟ್ಟಿ, ಅವನ ಭಕ್ತಿಗೆ ಮೆಚ್ಚಿ ಅವನನ್ನು ಅನುಗ್ರಹಿಸಿದನು. ಆಚಾರ್ಯಾನುಗ್ರಹದಿಂದ ಅವನು ಶ್ರೇಯಸ್ಸನ್ನು ಹೊಂದಿ ಸರ್ವಜ್ಞನಾದನು. ಆ ಬೈದನಿಗೆ ಈ ವಿಧವಾದ ಪರೀಕ್ಷೆಯು ನಡೆಯಿತು. ಆಮೇಲೆ ಆತನು ಉಪಾಧ್ಯಾಯನಿಂದ ಅನುಮತಿಹೊಂದಿ ಸಮಾವರ್ತನವೆಂಬ ಬ್ರಹ್ಮಚರ್ಯವ್ರತವನ್ನು ಮುಗಿಸಿಕೊಂಡು ಗುರುಕುಲವನ್ನು ಬಿಟ್ಟುಹೋಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದನು.

ಬೈದನು ಹೀಗೆ ಗೃಹಸ್ಥಾಶ್ರಮದಲ್ಲಿರುವಾಗ ಅವನಿಗೂ ಮೂರು ಮಂದಿ ಶಿಷ್ಯರಾದರು. ಆದರೆ, ಆತನು ಶಿಷ್ಯರನ್ನು ತನಗೆ ಶುಶ್ರೂಷೆ ಮಾಡುವುದಕ್ಕಾಗಲಿ, ಬೇರೆ ಕೆಲಸಗಳಿಗಾಗಲಿ ನಿಯಮಿಸುತ್ತಿರಲಿಲ್ಲ. ಅವರಿಗೆ ಯಾವ ಆಜ್ಞೆಯನ್ನೂ ಕೊಡುತ್ತಿರಲಿಲ್ಲ. ಏಕೆಂದರೆ, ಆ ಬೈದನು ಗುರುಕುಲವಾಸದಲ್ಲಿ ತನಗುಂಟಾದ ಕಷ್ಟಗಳನ್ನೆಲ್ಲಾ ಅನುಭವಿಸಿ ತಿಳಿದವನಾದುದರಿಂದ, ತನ್ನ ಶಿಷ್ಯರಿಗೆ ಅಂತಹ ಕಷ್ಟವನ್ನು ಕೊಡಲು ಇಷ್ಟ

ಪಡಲಿಲ್ಲ. ಹೀಗಿರುವಾಗ ಒಮ್ಮೆ ಜನಮೇಜಯನೆಂದೂ, ಪೌಷ್ಯನೆಂದೂ ಹೆಸರುಳ್ಳ ಇಬ್ಬರು ಕ್ಷತ್ರಿಯರು ಆ ಬೈದನ ಬಳಿಗೆ ಬಂದು, ತಮಗೆ ಉಪಾಧ್ಯಾಯ (ಪುರೋಹಿತ) ನಾಗಿರಬೇಕೆಂದು ಅವನನ್ನು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಂತೆ ಬೈದನು ಯಜ್ಞಕಾರ್ಯಕ್ಕಾಗಿ ಪ್ರಯಾಣ ಹೊರಡುವಾಗ, ತನ್ನ ಶಿಷ್ಯರಲ್ಲಿ ಒಬ್ಬನಾದ ಉತಂಕನೆಂಬವನನ್ನು ನೋಡಿ "ವತ್ಸ ಉತಂಕಾ! ನಾನು ಹೋಗಿಬರುವೆನು. ಮನೆಯಲ್ಲಿ ಯಾವ ವಿಷಯಕ್ಕೂ ಲೋಪವಿಲ್ಲದಂತೆ ನೀನು ಗೃಹಕೃತ್ಯವನ್ನು ಸರಿಯಾಗಿ ನೋಡಿಕೊಳ್ಳಬೇಕು" ಎಂದು ನಿಯಮಿಸಿ ದೇಶಾಂತರಕ್ಕೆ ಹೊರಟನು. ಆಮೇಲೆ ಇತ್ತಲಾಗಿ ಉತಂಕನು ಗುರುವಿನ ಆಜ್ಞೆಯಂತೆ ನಡೆಯುತ್ತ ಗುರುಕುಲವಲ್ಲಿಯೇ ಇರುತಿದ್ದನು. ಹೀಗೆ ಅವನು ಗುರುಕುಲದಲ್ಲಿರುವಾಗ, ಅವನ ಇಂದ್ರಿಯಜಯವನ್ನು ಪರೀಕ್ಷಿಸುವುದಕ್ಕಾಗಿ ಕೆಲವು ವೃದ್ಧಸ್ತ್ರೀಯರು ಒಂದಾಗಿ ಸೇರಿಬಂದು, ಆ ಉತಂಕನನ್ನು ನೋಡಿ "ವತ್ಸಾ! ಈಗ ನಿನ್ನ ಉಪಾಧ್ಯಾಯರಾದರೋ ಊರನ್ನು ಬಿಟ್ಟು ದೇಶಾಂತರಕ್ಕೆ ಹೋಗಿರುವರು. ನಿನ್ನ ಉಪಾಧ್ಯಾಯನ ಪತ್ನಿಯು ಈ ದಿನವೇ ಋತುಸ್ನಾನ ಮಾಡಿರುವಳು. ಈಕೆಯ ಋತುಕಾಲವು ವ್ಯರ್ಥವಾಗದಂತೆ ನೀನು ನಡೆದುಕೊಳ್ಳಬೇಕು. ಇದಕ್ಕಾಗಿ ಅವಳು ಬಹಳ ವ್ಯಸನಪಡುತ್ತಿರುವಳು. (ನಿನ್ನ ಉಪಾಧ್ಯಾಯರು ಮನೆಯಲ್ಲಿ ಯಾವ ವಿಷಯಕ್ಕೂ ಕೊರತೆಯಿಲ್ಲದಂತೆ ನೋಡಿಕೊಳ್ಳಬೇಕೆಂದು ನೇಮಿಸಿರುವರಲ್ಲವೆ?)" ಎಂದರು. ಅದಕ್ಕೆ ಉತಂಕನು "ಎಲೌ! ಸ್ತ್ರೀಯರಾದ ನೀವು ಬುದ್ಧಿಯಿಲ್ಲದೆ ಹೇಳಿದಮಾತ್ರಕ್ಕೆ ನಾನು ಇಂತಹ ಅಕಾರ್ಯಕ್ಕೆ ಪ್ರಯತ್ನಿಸುವೆನೆ? ಆ ಕಾರ್ಯವನ್ನು ಮಾಡಬೇಕೆಂದು ನನ್ನ ಉಪಾಧ್ಯಾಯರು ಹೇಳಿಹೋಗಿಲ್ಲ" ಎಂದು ಉತ್ತರವನ್ನು ಹೇಳಿದನು. ಅದರಿಂದಾಚೆಗೆ ಬಹುಕಾಲಕ್ಕೆ ಮೇಲೆ ಉಪಾಧ್ಯಾಯನು ದೇಶಾಂತರದಿಂದ ಹಿಂತಿರುಗಿ ಮನೆಗೆ ಬಂದು, ಉತಂಕನ ನಡೆವಳಿಕೆಗಳನ್ನೆಲ್ಲ ಕೇಳಿ ಬಹಳ ಸಂತೋಷಿಸಿ "ವತ್ಸ ಉತಂಕಾ! ನಿನಗೆ ಇಷ್ಟವಾದುದೇನನ್ನು ನಾನು ನಡೆಸಲಿ? ನಿನಗೆ ಬೇಕಾದುದನ್ನು ಕೇಳು. ನೀನು ಧರ್ಮಾತಿಕ್ರಮವಿಲ್ಲದೆ ನನಗೆ ಶುಶ್ರೂಷೆಮಾಡಿದೆ. ಇದರಿಂದ ನಮ್ಮಿಬ್ಬರ ಅನ್ಯೋನ್ಯಪ್ರೀತಿಯು ಚೆನ್ನಾಗಿ ವೃದ್ಧಿಯಾಯಿತು. ಇನ್ನು

ನೀನು ಹೋಗಬಹುದು. ನಿನ್ನ ಕೋರಿಕೆಗಳೆಲ್ಲಾ ಕೈಗೂಡಲಿ'' ಎಂದನು. ಇದನ್ನು ಕೇಳಿ ಉತಂಕನು ''ಆಚಾರ್ಯ! ನಿಮಗಾದರೂ ನಾನು ಯಾವ ಪ್ರಿಯವನ್ನುಂಟುಮಾಡಲಿ? ಯಾವನು (ಆಚಾರ್ಯನು) ಧರ್ಮವನ್ನು ವಿಾರಿ ಆಜ್ಞಾಪಿಸುವನೋ, ಯಾವನು (ಶಿಷ್ಯನು) ಧರ್ಮವನ್ನು ವಿಾರಿ ಕೇಳುವನೋ, ಆ ಇಬ್ಬರಲ್ಲಿ ಯಾವನಾದರೂ ಒಬ್ಬನು ದ್ವೇಷಕ್ಕೆ ಪಾತ್ರನಾಗುವನು. ಕೊನೆಗೆ ಮರಣಕ್ಕೂ ಗುರಿಯಾಗುವನು'' ಎಂದು ಹಿರಿಯರು ಹೇಳಿರುವರು. ಆದುದರಿಂದ ನಿಮ್ಮ ಅನುಮತಿಯಿಂದಲೇ ನಾನು ಹೋಗಿ, ನಿಮಗೆ ಬೇಕಾದ ಧನವನ್ನು ತಂದು ದಕ್ಷಿಣಾರ್ಥವಾಗಿ ಒಪ್ಪಿಸಬೇಕೆಂದಿರುವೆನು'' ಎಂದನು. ಅದಕ್ಕಾ ಉಪಾಧ್ಯಾಯನು ''ಶಿಷ್ಯಾ! ನೀನು ಇನ್ನೂ ಕೆಲವು ದಿನಗಳವರೆಗೆ ಇಲ್ಲಿಯೇ ಇರಬೇಕು'' ಎಂದನು. ಆಮೇಲೆ ಮತ್ತೊಮ್ಮೆ ಉತಂಕನು ಉಪಾಧ್ಯಾಯನನ್ನು ಕುರಿತು ''ಆಚಾರ್ಯ! ಇನ್ನಾದರೂ ನನಗೆ ಆಜ್ಞೆಯನ್ನು ಕೊಡಿರಿ! ನೀವು ಕೋರಿದಷ್ಟು ಧನವನ್ನು ಗುರುದಕ್ಷಿಣೆಯಾಗಿ ತಂದುಕೊಡುವೆನು'' ಎಂದನು. ಅದಕ್ಕಾ ಉಪಾಧ್ಯಾಯನು ''ವತ್ಸಾ! ಬಾರಿಬಾರಿಗೂ ನೀನು ನನಗಾಗಿ ಗುರುದಕ್ಷಿಣೆಯನ್ನು ತಂದೊಪ್ಪಿಸುವೆನೆಂದು ನಿರ್ಬಂಧಿಸುತ್ತಿರುವೆ. ಹಾಗಿದ್ದರೆ ಅದೋ! ಅಲ್ಲಿ ನನ್ನ ಪತ್ನಿಯಿರುವಳು. ಅವಳನ್ನು ಕೇಳು. ಅವಳು ಯಾವುದನ್ನು ಕೋರುವಳೋ ಅದನ್ನು ತಂದುಕೊಡು'' ಎಂದನು. ಅದರಂತೆ ಉತಂಕನು ಗುರುಪತ್ನಿಯ ಬಳಿಗೆ ಹೋಗಿ ''ಅಮ್ಮಾ! ನಮ್ಮ ಉಪಾಧ್ಯಾಯರು ನನ್ನನ್ನು ಮನೆಗೆ ಹೋಗಲು ಅನುಮತಿ ಕೊಟ್ಟಿರುವರು. ಆದರೆ ನಾನು ನಿಮಗೆ ಇಷ್ಟವಾದ ಗುರುದಕ್ಷಿಣೆಯನ್ನು ತಂದೊಪ್ಪಿಸಿ, ವಿಮುಕ್ತನಾಗಿ ಹೋಗಬೇಕೆಂದು ಕೋರುವೆನು. ಆದುದರಿಂದ ಗುರುದಕ್ಷಿಣೆಗಾಗಿ ನಾನು ಏನನ್ನು ತಂದುಕೊಡಬೇಕೋ ಅದನ್ನು ದೇವಿಯರು ಆಜ್ಞಾಪಿಸಬೇಕು'' ಎಂದನು. ಇದನ್ನು ಕೇಳಿ ಗುರುಪತ್ನಿಯು ''ವತ್ಸ ಉತಂಕಾ! ಪೌಷ್ಯನೆಂಬ ರಾಜನ ಅರಮನೆಗೆ ಹೋಗಿ, ಅಲ್ಲಿ ರಾಜಪತ್ನಿಯು ಕಿವಿಯಲ್ಲಿ ಧರಿಸಿರುವ ಓಲೆಗಳನ್ನು ಕೇಳಿ ತೆಗೆದುಕೊಂಡು ಬಾ. ಇಂದಿಗೆ ನಾಲ್ಕನೆಯ ದಿನದಲ್ಲಿ ನಾನು ಆ ಓಲೆಗಳನ್ನು ಧರಿಸಿ ಅಲಂಕರಿಸಿಕೊಂಡು, ಬ್ರಾಹ್ಮಣರಿಗೆ ನನ್ನ ಕೈಯಿಂದ ಭೋಜನವನ್ನು

ಬಡಿಸಬೇಕೆಂದು ಕೋರುವೆನು. ಹೇಗಾದರೂ ನೀನು ಈ ನನ್ನ ಕೋರಿಕೆಯನ್ನು ಈಡೇರಿಸಬೇಕು. ಹಾಗೆಮಾಡಿದರೆ ಮಾತ್ರವೇ ನೀನು ಓದಿದ ವಿದ್ಯೆಯು ಫಲಿಸುವುದು. ಇಲ್ಲದಿದ್ದರೆ ನಿನಗೆ ಶ್ರೇಯಸ್ಸಿಲ್ಲ" ಎಂದಳು. ಈ ಮಾತನ್ನು ಕೇಳಿದೊಡನೆ ಉತಂಕನು ಪ್ರಯಾಣ ಹೊರಟುಬರುತ್ತ ದಾರಿಯಲ್ಲಿ ಒಂದು ದೊಡ್ಡ ಆಕಾರವುಳ್ಳ ವೃಷಭವನ್ನೂ, ಅದರಮೇಲೆ ಏರಿ ಕುಳಿತಿರುವ ಬಹಳ ದೊಡ್ಡ ಪುರುಷಾಕೃತಿಯೊಂದನ್ನೂ ನೋಡಿದನು. ಆ ಪುರುಷನು ಉತಂಕನನ್ನು ನೋಡಿ "ಓ ಕುಮಾರಾ! ಇದೋ! ಈ ಎತ್ತಿನ ಸಗಣಿಯಿದೆ! ಇದನ್ನು ಭಕ್ಷಿಸು" ಎಂದನು. ಉತಂಕನು ಅದಕ್ಕೆ ಸಮ್ಮತಿಸದಿರಲು, ಆ ಪುರುಷನು ತಿರುಗಿ ಅವನನ್ನು ಕುರಿತು "ಉತಂಕಾ! ಚಿಂತಿಸಬೇಡ ಇದನ್ನು ತಿನ್ನು! ನಿಮ್ಮ ಉಪಾಧ್ಯಾಯನೂ ಹಿಂದೊಮ್ಮೆ ಇದನ್ನು ಭಕ್ಷಿಸಿರುವನು" ಎಂದನು. ಈ ಮಾತನ್ನು ಕೇಳಿದೊಡನೆ ಉತಂಕನು "ಹಾಗಿದ್ದರೆ ಸರಿ" ಎಂದು ಆ ಎತ್ತಿನ ಸಗಣಿಯನ್ನು ತಿಂದು, ಗಂಜಲವನ್ನೂ ಕುಡಿದು, ಮೇಲೆದ್ದು, ಕೂಡಲೇ ಆತುರದಿಂದ ಆಚಮನವನ್ನೂ ಮಾಡದೆ ಮುಂದೆ ಹೊರಟನು. ನೆಟ್ಟಗೆ ಪೌಷ್ಯರಾಜನ ಅರಮನೆಗೆ ಬಂದು ಆ ರಾಜನು ಕುಳಿತಿರುವುದನ್ನು ಕಂಡು ಸಮೀಪಕ್ಕೆ ಬಂದು ಆಶೀರ್ವಾದಗಳನ್ನು ಮಾಡಿ "ಓ ಕ್ಷತ್ರಿಯೋತ್ತಮಾ! ನಾನು ಒಂದು ವಸ್ತುವನ್ನಪೇಕ್ಷಿಸಿ ನಿನ್ನಬಳಿಗೆ ಬಂದಿರುವೆನು" ಎಂದನು. ಅದಕ್ಕಾ ರಾಜನು ಥಟ್ಟನೆ ಮೇಲೆದ್ದು ಆ ಋಷಿಗೆ ಅಭಿವಾದನಮಾಡಿ, "ಓ ಮಹಾತ್ಮಾ! ನಾನು ಪೌಷ್ಯನು. ನನ್ನಿಂದ ನಿನಗೇನಾಗಬೇಕು" ಎಂದನು. ಅದಕ್ಕಾ ಉತಂಕನು "ರಾಜಾ! ನಾನು ಗುರುದಕ್ಷಿಣೆಗಾಗಿ ಕುಂಡಲಗಳನ್ನು ಕೋರಿಬಂದಿರುವೆನು. ನಿನ್ನ ಪತ್ನಿಯು ಕಿವಿಯಲ್ಲಿ ಧರಿಸಿರುವ ಕುಂಡಲಗಳನ್ನು ನನಗೆ ಕೊಡಿಸಬೇಕು" ಎನಲು, ಪೌಷ್ಯನು "ನೀನು ನೆಟ್ಟಗೆ ಅಂತಃಪುರಕ್ಕೆ ಹೋಗಿ ನನ್ನ ಪತ್ನಿಯನ್ನೇ ಕೇಳಿ ತೆಗೆದುಕೊಳ್ಳಬಹುದು" ಎಂದನು. ಅದರಂತೆ ಉತಂಕನು ಅಂತಃಪುರಕ್ಕೆ ಹೋದನು. ಅಲ್ಲಿ ರಾಜಪತ್ನಿಯು ಕಾಣಿಸಲಿಲ್ಲ. ಹಿಂತಿರುಗಿ ಪೌಷ್ಯನಬಳಿಗೆ ಬಂದನು. ರಾಜನನ್ನು ನೋಡಿ ಬೇಸರದಿಂದ "ಓ ರಾಜಾ! ನೀನು ಸುಳ್ಳಾಡಿ ಹೀಗೆ ನನ್ನನ್ನು ವಂಚಿಸುವುದು ನ್ಯಾಯವೆ? ನಿನ್ನ ಪತ್ನಿಯು

ಅಂತಃಪುರದಲ್ಲಿಲ್ಲ. ಅವಳು ನನಗೆ ಕಾಣಿಸಲಿಲ್ಲ" ಎಂದನು. ಆ ಬ್ರಾಹ್ಮಣನು ಹೀಗೆ ಹೇಳಿದೊಡನೆ, ಪೌಷ್ಯನು ಕ್ಷಣಕಾಲದವರೆಗೆ ತನ್ನಲ್ಲಿ ತಾನು ಆಲೋಚಿಸುತಿದ್ದು ಆಮೇಲೆ ಉತಂಕನನ್ನು ನೋಡಿ "ಬ್ರಾಹ್ಮಣಾ! ನೀನು ನಿಶ್ಚಯವಾಗಿ ಅಶುಚಿಯಾಗಿರಬೇಕು. ಚೆನ್ನಾಗಿ ಜ್ಞಾಪಿಸಿಕೊಂಡು ನೋಡು. ಆಚಾರಹೀನರಿಗೂ, ಅಶುದ್ಧರಿಗೂ ನನ್ನ ಪತ್ನಿಯು ಕಾಣಿಸಲಾರಳು. ಅವಳು ಬಹಳ ಶುದ್ಧವಾದ ಪಾತಿವ್ರತ್ಯವುಳ್ಳವಳು. ನೀನು ಅಶುಚಿಯಾಗಿರುವುದರಿಂದಲೇ ಅವಳು ನಿನ್ನ ಕಣ್ಣಿಗೆ ಕಾಣಿಸದಿರಬೇಕು" ಎಂದನು. ರಾಜನು ಹೀಗೆ ಹೇಳಿದಮೇಲೆ ಉತಂಕನಿಗೆ ಹಿಂದೆ ನಡೆದ ಸಂಗತಿಯು ಸ್ಮರಣಕ್ಕೆ ಬಂದಿತು. ಆಗ ಅವನು ರಾಜನನ್ನು ನೋಡಿ "ರಾಜೇಂದ್ರಾ! ನೀನು ಹೇಳಿದುದು ವಾಸ್ತವವು. ನಾನು ಯಾವುದೋ ಒಂದನ್ನು ಭಕ್ಷಿಸಿ ಆಚಮನವನ್ನು ಮಾಡದೆ ಆತುರದಿಂದ ಬಂದುಬಿಟ್ಟೆನು" ಎಂದನು. ಅದಕ್ಕಾ ಪೌಷ್ಯನು "ನೀನು ಆತುರದಿಂದ ಆಚಮನಮಾಡದೆ ಬಂದುದು ನಿನ್ನ ತಪ್ಪಲ್ಲವೇ?" ಎನಲು ಉತಂಕನು "ಹೌದು ನಾನು ಅಶುಚಿಯೇ" ಎಂದು ತನ್ನ ತಪ್ಪನ್ನು ಒಪ್ಪಿಕೊಂಡು, ಒಡನೆಯೇ ಕೈಕಾಲುಗಳನ್ನೂ ಮುಖವನ್ನೂ ತೊಳೆದು, ಪೂರ್ವಾಭಿಮುಖವಾಗಿ ಕುಳಿತು, ನೊರೆಯಿಲ್ಲದೆಯೂ, ಬೆಂಕಿಯಲ್ಲಿಟ್ಟು ಕಾಯಿಸದೆಯೂ ಇರುವ ಶುದ್ಧ ಜಲವನ್ನು ಹೃದಯಪರ್ಯಂತವಾಗಿ ಮುಟ್ಟಿಬರುವಂತೆ ಮೂರಾವರ್ತಿ ಆಚಮನವನ್ನು ಮಾಡಿ, ಕಣ್ಣು, ಕಿವಿ, ಮೂಗು ಮುಂತಾದ ಅವಯವಗಳನ್ನು ನೀರಿನಿಂದ ಎರಡೆರಡುಸಾರಿ ಒರಸಿಕೊಂಡು ತಿರುಗಿ ಅಂತಃಪುರಕ್ಕೆ ಹೋದನು. ಅಲ್ಲಿ ರಾಜಪತ್ನಿಯು ಕಾಣಿಸಿದಳು. ಈ ಬ್ರಾಹ್ಮಣನನ್ನು ನೋಡಿದೊಡನೆಯೇ ಆಕೆಯು ಮೇಲೆದ್ದು, ಇದಿರುಗೊಂಡು ಬಂದು ನಮಸ್ಕರಿಸಿ, "ಓ ಮಹಾತ್ಮಾ! ನಿನಗೆ ಸ್ವಾಗತವು. ನನ್ನಿಂದಾಗಬೇಕಾದುದೇನು? ಆಜ್ಞಾಪಿಸಬೇಕು" ಎಂದಳು. ಆಗ ಉತಂಕನು "ಅಮ್ಮಾ! ನನ್ನ ಗುರುವಿಗಾಗಿ ನಿನ್ನ ಕಿವಿಯಲ್ಲಿರುವ ಓಲೆಗಳನ್ನು ನಾನು ಯಾಚಿಸುವೆನು. ನೀನು ನನ್ನ ಕೋರಿಕೆಯನ್ನು ಈಡೇರಿಸಬೇಕು" ಎಂದನು. ಇವನ ಸದುದ್ದೇಶಕ್ಕೆ ಆ ರಾಜಪತ್ನಿಯು ಸಂತೋಷಪಟ್ಟು ತನ್ನಲ್ಲಿ ತಾನು "ಇವನು ದಾನಕ್ಕೆ ಯೋಗ್ಯವಾದ ಸತ್ಪಾತ್ರವಾದುದರಿಂದ ಇಲ್ಲವೆಂದು ಹೇಳಿ

ಇವನನ್ನು ಕಳುಹಿಸಬಾರದು" ಎಂದು ನಿಶ್ಚಯಿಸಿ, ಒಡನೆಯೇ ತನ್ನ ಕಿವಿಯೋಲೆಗಳನ್ನು ಅವನ ಕೈಯಲ್ಲಿಟ್ಟು "ಓ ವಿಪ್ರೋತ್ತಮಾ! ಎಚ್ಚರಿಕೆ! ನಾಗರಾಜನಾದ ತಕ್ಷಕನಿಗೆ ಈ ಕುಂಡಲಗಳಲ್ಲಿ ಬಹಳ ಆಸೆಯುಂಟು. ಬಹಳ ಜಾಗರೂಕತೆಯಿಂದ ನೀನು ಇದನ್ನು ಕಾಪಾಡಿ ತೆಗೆದುಕೊಂಡು ಹೋಗಬೇಕು" ಎಂದಳು. ಅದಕ್ಕೆ ಉತಂಕನು "ಆ ಚಿಂತೆಯು ನಿನಗೇಕೆ? ನೀನು ನಿಶ್ಚಿಂತಳಾಗಿರು. ನಾಗರಾಜದಾದ ತಕ್ಷಕನು ನನ್ನನ್ನೇನೂ ಮಾಡಲಾರನು. ನನ್ನ ಮೇಲೆ ಅವನ ಕೈಯೇನೂ ಸಾಗಲಾರದು" ಎಂದು ಹೇಳಿ ಆ ರಾಜಪತ್ನಿಯ ಅನುಮತಿಯನ್ನು ಪಡೆದು ಅಲ್ಲಿಂದ ಅವಳ ಪತಿಯಾದ ಪೌಷ್ಯನ ಬಳಿಗೆ ಬಂದು "ಓ ರಾಜಾ! ನಾನು ತೃಪ್ತನಾದೆನು. ನನ್ನ ಕೋರಿಕೆಯು ಕೈಗೂಡಿತು" ಎಂದನು. ಆಗ ಪೌಷ್ಯರಾಜನು ಉತಂಕನನ್ನು ನೋಡಿ "ಓ ಮಹಾತ್ಮಾ! ಇದೇನು ದೊಡ್ಡದು? ನಿಮ್ಮಂತಹ ಸತ್ಪಾತ್ರವು ದೊರೆಯುವುದಲ್ಲವೇ ದುರ್ಲಭವು. ಬಹುಕಾಲಕ್ಕೆ ನಿಮ್ಮಂತವರ ಸಮಾಗಮವು ಲಭ್ಯವು. ನೀವು ಗುಣವಂತರಾದ ಅತಿಥಿಗಳಾದುದರಿಂದ, ನೀವು ಇಲ್ಲಿರುವಾಗಲೇ ನಾನೊಂದು ಶ್ರಾದ್ಧವನ್ನು ನಡೆಸಬೇಕೆಂದಿರುವೆನು. ಅದಕ್ಕಾಗಿ ನೀವು ಸ್ವಲ್ಪ ಅವಕಾಶವನ್ನು ತೆಗೆದುಕೊಂಡು ನನ್ನ ಕೋರಿಕೆಯನ್ನು ಸಲ್ಲಿಸಬೇಕು" ಎಂದನು. ಉತಂಕನು "ರಾಜೇಂದ್ರಾ! ನಾನು ಸಿದ್ಧನಾಗಿಯೇ ಇರುವೆನು. ನಿನ್ನ ಶಕ್ತಿಗೆ ತಕ್ಕಂತೆ ಶೀಘ್ರದಲ್ಲಿಯೇ ಅನ್ನಾದಿಗಳನ್ನು ಸಿದ್ಧಪಡಿಸು" ಎಂದನು. ಆದರಂತೆ ರಾಜನು ತನ್ನ ಶಕ್ತಿಗನುಸಾರವಾಗಿ ಅನ್ನಾದಿಗಳನ್ನು ಸಿದ್ಧಪಡಿಸಿ ಆ ಬ್ರಾಹ್ಮಣನಿಗೆ ಭೋಜನವನ್ನಿಕ್ಕಿದನು. ಆಗ ಉತಂಕನು ಎಲೆಯಮುಂದೆ ಕುಳಿತು ಆ ಅನ್ನವನ್ನು ಮುಟ್ಟಿನೋಡಿದಾಗ, ಅದು ಆರಿಹೋಗಿದ್ದುದಲ್ಲದೆ, ಆ ಅನ್ನದಲ್ಲಿ ಒಂದು ಕೂದಲುಕೂಡ ಕಾಣಿಸಿತು. ಅದನ್ನು ನೋಡಿದೊಡನೆ ಉತಂಕನು ಆ ಅನ್ನವು ಅಶುಚಿಯೆಂದು ತಿಳಿದು ರಾಜನನ್ನು ನೋಡಿ "ರಾಜಾ! ನೀನು ಹೀಗೆ ನನಗೆ ಅಶುಚಿಯಾದ ಅನ್ನವನ್ನಿಕ್ಕಿದೆ. ಆದುದರಿಂದ ನೀನು ಅಂಧನಾಗು" ಎಂದು ಬೈದನು. ಆಗ ಪೌಷ್ಯನು "ಓ ಬ್ರಾಹ್ಮಣಾ! ನಿರ್ದುಷ್ಟವಾದ ಈ ಅನ್ನವನ್ನು ನೀನು

ದೂಷಿಸುತ್ತಿರುವೆಯಾದುದರಿಂದ ನೀನು ಸಂತತಿಯಿಲ್ಲದವನಾಗು'' ಎಂದು ಪ್ರತಿಯಾಗಿ ಬೈದನು.

ಅದಕ್ಕೆ ಉತಂಕನು "ಓ ರಾಜಾ! ನೀನು ಅಶುದ್ಧವಾದ ಅನ್ನವನ್ನು ಬಡಿಸಿಯೂ ಹೀಗೆ ಪ್ರತಿಶಾಪವನ್ನು ಕೊಡುವುದು ಯುಕ್ತವಲ್ಲ. ನೀನೇ ಇದನ್ನು ಕಣ್ಣಾರೆ ನೋಡು'' ಎಂದು ನಿರ್ಬಂಧಿಸಿ ತೋರಿಸಲು, ಪೌಷ್ಯನು ಆ ಅನ್ನವನ್ನು ಚೆನ್ನಾಗಿ ನೋಡಿದಮೇಲೆ ಅದು ಅಶುಚಿಯೆಂಬುದು ಸ್ಪಷ್ಟವಾಗಿ ಅವನಿಗೆ ತಿಳಿಯಿತು. ಆಗ ಆ ರಾಜನು ತಲೆಯನ್ನು ಬಿಚ್ಚಿಕೊಂಡಿದ್ದ ಒಬ್ಬ ಸ್ತ್ರೀಯು ಆ ಅನ್ನವನ್ನು ಮಾಡಿ ತಂದಿರುವಳೆಂದೂ, ಆ ಅನ್ನವು ಆರಿಹೋಗಿರುವುದಲ್ಲದೆ ತಲೆಕೂದಲು ಅದರಲ್ಲಿ ಬಿದ್ದಿರುವುದರಿಂದ, ಅದು ಅಶುದ್ಧವೆಂದೂ ತಿಳಿದು, ಆ ಋಷಿಯನ್ನು ಸಮಾಧಾನಪಡಿಸುತ್ತಾ "ಓ ಮಹಾತ್ಮಾ! ಆರಿಹೋದ, ಮತ್ತು ಕೂದಲುಬಿದ್ದು ಅಶುಚಿಯಾದ ಈ ಅನ್ನವನ್ನು ಅಜ್ಞಾನದಿಂದಲೇ ಬಡಿಸಿದುದಾಯಿತು. ತಿಳಿಯದೆ ನಡೆದುಹೋದ ಈ ಅಪರಾಧವನ್ನು ಮನ್ನಿಸಬೇಕು. ನನಗೆ ಕುರುಡುತನವು ಬಾರದಂತೆ ಕರುಣಿಸಬೇಕು'' ಎಂದು ದೈನ್ಯದಿಂದ ಪ್ರಾರ್ಥಿಸಿದನು. ಅವನ ದೈನ್ಯವನ್ನು ನೋಡಿ ಉತಂಕನು "ರಾಜಾ! ನನ್ನ ಬಾಯಿಂದ ಹೊರಟ ಮಾತು ಸುಳ್ಳಾಗಲಾರದು. ಆದುದರಿಂದ ಅಂಧತ್ವವನ್ನು ನೀನು ಸ್ವಲ್ಪಕಾಲವಾದರೂ ಅನುಭವಿಸಿಯೇ ತೀರಬೇಕು. ಆದರೆ ಶೀಘ್ರದಲ್ಲಿಯೇ ಆ ಅಂಧತ್ವವು ನಿನಗೆ ಬಿಟ್ಟುಹೋಗಲಿ. ನೀನು ಕೊಟ್ಟ ಶಾಪವೂ ನನಗೆ ತಗುಲದಿರಲಿ'' ಎಂದನು. ಅದಕ್ಕೆ ಪೌಷ್ಯನು "ನಾನೂ ಶಾಪವನ್ನು ತಿರುಗಿಸಲಾರೆನು ಏಕೆಂದರೆ, ನನ್ನ ಹೃದಯದಲ್ಲಿದ್ದ ನಿನ್ನಮೇಲಿನ ಕೋಪವು ಇನ್ನೂ ಶಾಂತವಾಗಿಲ್ಲ. ನೀನು ಕೇಳಿಲ್ಲವೇನು? ಬ್ರಾಹ್ಮಣನಿಗೆ ಹೃದಯವು ನವನೀತದಂತೆ ಮೃದುವಾಗಿದ್ದು, ಮಾತಿನಲ್ಲಿ ತೀಕ್ಷ್ಣಧಾರೆಯುಳ್ಳ ಕತ್ತಿಯಿಡಲ್ಪಟ್ಟಿರುವುದು. ಕ್ಷತ್ರಿಯನಲ್ಲಿ ಇವೆರಡೂ ಮಾರ್ಪಟ್ಟು, ಅವನ ಮಾತು ಬೆಣ್ಣೆಯಂತೆಯೂ, ಹೃದಯವು ತೀಕ್ಷ್ಣವಾದ ಕತ್ತಿಯಂತೆಯೂ ಇರುವುದು'' ಎಂಬೀ ನೀತಿವಾಕ್ಯವುಂಟಲ್ಲವೇ? ಆದುದರಿಂದ ನಾನು ತೀಕ್ಷ್ಣಹೃದಯನು. ಈಗ ಕೊಟ್ಟ

ಶಾಪವನ್ನು ವಾರಿಸಲಾರೆನು, ಹೋಗು" ಎಂದನು. ಅದಕ್ಕಾ ಉತಂಕನು "ಓ ರಾಜಾ! ಇದಾವ ನ್ಯಾಯವು? ನೀನು ಬಡಿಸಿದ ಅನ್ನವು ಅಶುಚಿಯಾಗಿರುವುದನ್ನು ನೀನೇ ಕಣ್ಣಾರೆ ನೋಡಿದೆ. ನಿನ್ನ ತಪ್ಪನ್ನೂ ಒಪ್ಪಿಕೊಂಡು ನನ್ನಲ್ಲಿ ಮನ್ನಣೆಯನ್ನೂ ಕೇಳಿದೆ. ಅದಕ್ಕೆ ಮೊದಲು ನೀನು ನಿಜಸ್ಥಿತಿಯನ್ನು ತಿಳಿಯದೆ ಕೋಪದಿಂದ ನಿರ್ದುಷ್ಟವಾದ ಅನ್ನವನ್ನು ನಾನು ದೂಷಿಸಿದೆನೆಂದೂ, ಅದಕ್ಕಾಗಿ ನನಗೆ ಸಂತಾನವಿಲ್ಲದೆ ಹೋಗಲೆಂದೂ ಶಪಿಸಿದೆ. ಅನ್ನವು ನಿರ್ದುಷ್ಟವಾಗಿದ್ದರಲ್ಲವೇ ನಿನ್ನ ಶಾಪವು ನನ್ನಮೇಲೆ ಫಲಿಸಬೇಕು? ಅನ್ನವು ದುಷ್ಟವಾಗಿದ್ದುದರಿಂದ ನಿನ್ನ ಶಾಪವು ನನ್ನಮೇಲೆ ಕೆಂದಲಾರದು. ಇನ್ನು ನಾನು ಹೋಗಿಬರುವೆನು" ಎಂದು ಹೇಳಿ ಆ ಕುಂಡಲವನ್ನು ತೆಗೆದುಕೊಂಡು ಉತಂಕನು ಹೊರಟುಬಿಟ್ಟನು.

ಹೀಗೆ ದಾರಿಯಲ್ಲಿ ಬರುತ್ತಿರುವಾಗ ಉತಂಕನು, ದಿಗಂಬರನಾದ ಕ್ಷಪಣಕನೊಬ್ಬನು ಇದಿರಾಗಿ ಬರುತ್ತಿದ್ದುದನ್ನು ಕಂಡನು. ಆದರೆ ಆ ಕ್ಷಪಣಕನು ಒಮ್ಮೊಮ್ಮೆ ಕಣ್ಣಿಗೆ ಕಾಣಿಸುತ್ತ, ತಿರುಗಿತಿರುಗಿ ಅದೃಶ್ಯನಾಗುತ್ತಲಿದ್ದನು. ಇಷ್ಟರಲ್ಲಿ ಉತಂಕನು ತಾನು ತಂದಿದ್ದ ಕುಂಡಲಗಳನ್ನು ಒಂದುಕಡೆ ನೆಲದಮೇಲಿಟ್ಟು, ಶೌಚಾಚಮನಾದಿಗಳನ್ನು ಮಾಡಿಬರುವುದಕ್ಕೆ ನೀರಿಗಿಳಿದನು. ಇದೇ ಸಮಯವನ್ನು ಕಾಯುತಿದ್ದ ಕ್ಷಪಣಕನು, ವೇಗದಿಂದ ಬಂದು ಆ ಕುಂಡಲಗಳನ್ನು ಎತ್ತಿಕೊಂಡು ಮೇಲೆಹಾರಿ ಓಡಲಾರಂಭಿಸಿದನು. ಉತಂಕನು ಇದನ್ನು ನೋಡಿ ಅವನನ್ನು ಹಿಡಿಯಬೇಕೆಂದು ಆತುರದಿಂದ ತನ್ನ ಆಚಮನಾದಿಗಳನ್ನು ಮುಗಿಸಿಕೊಂಡು, ಶುಚಿಯಾಗಿ ನಿಯಮವನ್ನು ಹಿಡಿದು, ದೇವತೆಗಳಿಗೂ, ಗುರುಗಳಿಗೂ ನಮಸ್ಕರಿಸಿ, ಮಹಾವೇಗದಿಂದ ಆ ಕ್ಷಪಣಕನನ್ನು ಬೆನ್ನಟ್ಟಿಹೋಗಿ, ಕೊನೆಗೆ ಅವನನ್ನು ಹಿಡಿದುಬಿಟ್ಟನು. ಈ ಖುಷಿಯು ತನ್ನ ಕೈಯಿಂದ ಅವನನ್ನು ಮುಟ್ಟಿದೊಡನೆ, ಅವನು ತನ್ನ ಕ್ಷಪಣಕರೂಪವನ್ನು ಬಿಟ್ಟು, ತಕ್ಷಕಸ್ವರೂಪನ್ನು ತಳೆದು, ಮುಂದೆ ನೆಲದಲ್ಲಿದ್ದ ಒಂದಾನೊಂದು ದೊಡ್ಡ ಬಿಲವನ್ನು ಪ್ರವೇಶಿಸಿ, ನಾಗಲೋಕದಲ್ಲಿದ್ದ ತನ್ನ ಮನೆಯನ್ನು ಸೇರಿಬಿಟ್ಟನು. ಹಾಗಿದ್ದರೂ ಬಿಡದೆ ಉತಂಕನು ಆ ರಾಜಪತ್ನಿಯು ಹೇಳಿದ ಮಾತನ್ನು

ಮನಸ್ಸಿನಲ್ಲಿ ಸ್ಮರಿಸಿಕೊಂಡು ಆ ಬಿಲವನ್ನು ತನ್ನ ದಂಡಕಾಷ್ಠದಿಂದ ತೋಡುವುದಕ್ಕೆ ಆರಂಭಿಸಿದನು. ಆದರೆ ಅವನಿಂದ ಸಾಧ್ಯವಾಗಲಿಲ್ಲ. ಅದಕ್ಕಾಗಿ ಅವನು ಬಹಳ ಕಷ್ಟಪಡುತ್ತಿರುವುದನ್ನು ನೋಡಿ ದೇವೇಂದ್ರನಿಗೆ ಅವನಲ್ಲಿ ಕನಿಕರವು ಹುಟ್ಟಿತು. ಆಗ ಇಂದ್ರನು ಆ ಬ್ರಾಹ್ಮಣನಿಗೆ ಸಹಾಯಮಾಡಿಬರುವಂತೆ ತನ್ನ ವಜ್ರಾಯುಧಕ್ಕೆ ಆಜ್ಞಾಪಿಸಲು, ಆ ಬ್ರಾಹ್ಮಣನ ದಂಡುಕೋಲಿಗೆ ವಜ್ರಾಯುಧಶಕ್ತಿಯುಂಟಾಗಿ ಆ ಬಿಲವನ್ನು ಸುಲಭವಾಗಿ ಅಗೆಯಲು ಸಾಧ್ಯವಾಯಿತು. ಉತಂಕನು ಆ ಬಿಲದ ಮಾರ್ಗವಾಗಿಯೇ ಮುಂದೆ ಹೋಗಿ ಮೇರೆಯಿಲ್ಲದ ನಾಗಲೋಕವನ್ನು ನೋಡಿದನು. ಅಲ್ಲಿಯಾದರೋ ಅನೇಕ ಗೋಪುರಗಳೂ, ಉಪ್ಪರಿಗೆಗಳೂ, ವಲಭಿಗಳೂ, ನೂರಾರು ನಿರ್ಯೂಹಗಳೂ ಕಂಗೊಳಿಸುತ್ತಿರುವುವು. ಆಶ್ಚರ್ಯಕರವಾದ ಬಗೆಬಗೆಯ ಕ್ರೀಡಾಸ್ಥಾನಗಳು ಅನೇಕವಾಗಿರುವುವು. ಅದನ್ನೆಲ್ಲ ನೋಡುತ್ತ ಉತಂಕನು ಕೆಲವು ಶ್ಲೋಕಾರ್ಥಗಳಿಂದ ಅಲ್ಲಿ ನಾಗರನ್ನು ಸ್ತೋತ್ರಮಾಡಿದನು.

## ಉತಂಕನು ಮಾಡಿದ ನಾಗಸ್ತುತಿ.

"ಐರಾವತವೆಂಬ ನಾಗರಾಜನ ಆಳ್ವಿಕೆಗೊಳಪಟ್ಟವರಾಗಿಯೂ, ಯುದ್ಧದಲ್ಲಿ ವಿಶೇಷ ಪ್ರಖ್ಯಾತರಾಗಿಯೂ, ವಾಯುಪ್ರೇರಿತವಾಗಿ ಮಿಂಚುಗಳೊಡಗೂಡಿದ ಮೇಘಗಳು ಮಳೆಸುರಿಸುವಂತೆ ಶರವರ್ಷಗಳನ್ನು ಕರೆಯುತಕ್ಕವರಾಗಿಯೂ, ಸುಂದರರೂಪಿಗಳೂ, ಚಿತ್ರಕುಂಡಲಧಾರಿಗಳೂ ಆಗಿ, ಐರಾವತಕುಲದಲ್ಲಿ ಹುಟ್ಟಿದ ನೀವು ನಾಕಪೃಷ್ಠದಲ್ಲಿ ದೇವತೆಗಳು ಹೇಗೋ ಹಾಗೆ ಇಲ್ಲಿ ಪ್ರಕಾಶಿಸುವಿರಿ. ಗಂಗಾನದಿಯ ಉತ್ತರತೀರದಲ್ಲಿ ನಾಗರಿಗೆ ನಿವಾಸಗಳಾದ ಅನೇಕ ಸ್ಥಾನಗಳಾವಾವುವುಂಟೋ ಅಲ್ಲಿನ ಮಹಾನಾಗರನ್ನೆಲ್ಲ ಕೂಡ ನಾನು ಪ್ರಾರ್ಥಿಸಿ ಸ್ತುತಿಸುವೆನು."

"ಐರಾವತವೆಂಬ ನಾಗವೊಂದು ಹೊರತು ಬೇರೆ ಯಾರು ತಾನೇ ಸೂರ್ಯಕಿರಣಗಳೆಂಬ ಸೇನಾಸಮೂಹದಲ್ಲಿ ಸಂಚರಿಸಲು ಧೈರ್ಯಗೊಂಡಿರುವರು ?"

" ಧೃತರಾಷ್ಟ್ರನೆಂಬ ನಾಗರಾಜನನ್ನು, *ಇಪ್ಪತ್ತೆಂಟುಸಾವಿರದ ಎಂಟುನೂರು ಮಂದಿ ಇತರ ನಾಗರು, ಸೂರ್ಯನ ರಥದ ಕುದುರೆಗಳಿಗೆ ಕಟ್ಟಿದ ಹಗ್ಗಗಳಂತೆ ಸಮೀಪವಾಗಿಯೂ, ದೂರವಾಗಿಯೂ ತತ್ತದುಚಿತಸ್ಥಾನಗಳಲ್ಲಿ ಹಿಂಬಾಲಿಸಿ ಹೋಗುವರು. ನಾನು ಐರಾವತನಾಗನ ಜ್ಯೇಷ್ಠ ಭ್ರಾತೃಗಳಿಗೂ ನಮಸ್ಕರಿಸುವೆನು. ಪೂರ್ವದಲ್ಲಿ ಕುರುಕ್ಷೇತ್ರದಲ್ಲಿಯೂ, ಖಾಂಡವವನದಲ್ಲಿಯೂ ವಾಸಿಸುತಿದ್ದ ತಕ್ಷಕನನ್ನು ಈಗ ನಾನು ನನ್ನ ಕುಂಡಲಗಳಿಗಾಗಿ ಸ್ತುತಿಸುವೆನು. ತಕ್ಷಕ ಅಶ್ವಸೇನರೆಂಬವರಿಬ್ಬರೂ, ಯಾವಾಗಲೂ ಒಂದಾಗಿಯೇ ಕುರುಕ್ಷೇತ್ರದ ಇಕ್ಷುಮತೀ ನದಿಯ ತೀರದಲ್ಲಿ ವಾಸಿಸತಕ್ಕವರು. ತನಗೆ ನಾಗರಾಜ್ಯ ಪಟ್ಟವನ್ನು ಕೋರಿ, ಮಹದ್ಯುಮವೆಂಬ ತೀರ್ಥದಲ್ಲಿ ವಾಸವಮಾಡುತ್ತಿರುವ ತಕ್ಷಕನ ಕೊನೆಯ ಮಗನಾದ ಶ್ರುತಸೇನನೆಂಬ ಮಹಾತ್ಮನಿಗೂ ನನ್ನ ನಮಸ್ಕಾರವಿರಲಿ " ಎಂದು ಒಬ್ಬೊಬ್ಬರನ್ನಾಗಿ ಸ್ತೋತ್ರಮಾಡಿದನು.

ಎಷ್ಟು ಪ್ರಾರ್ಥಿಸಿದರೂ ಕುಂಡಲಗಳು ಅವನಿಗೆ ಲಭಿಸಲಿಲ್ಲ. ಅದಕ್ಕಾಗಿ ಆ ಬ್ರಹ್ಮಋಷಿಯು ಬಹಳ ಚಿಂತಾಕ್ರಾಂತನಾಗಿ, ಅಲ್ಲಲ್ಲಿ ಸುತ್ತಿ ನೋಡುತ್ತಿರುವಾಗ ಇಬ್ಬರು ಸ್ತ್ರೀಯರು ಮಗ್ಗದಲ್ಲಿ ನೂಲನ್ನು ಹಾಕಿ ಲಾಳಿಗಳಿಂದ ಬಟ್ಟೆ ನೇಯುತ್ತಿದ್ದುದನ್ನು ಕಂಡನು. ಬಟ್ಟೆಯಲ್ಲಿ ಕಪ್ಪು ಬಿಳುಪು ಬಣ್ಣದ ನೂಲುಗಳೆರಡೂ ಕಲೆತಿದ್ದುವು. ಮತ್ತು ಹನ್ನೆರಡು ಅರಗಳುಳ್ಳ ಒಂದು ಚಕ್ರವನ್ನು ಆರು ಮಂದಿ ಕುಮಾರರು ತಿರುಗಿಸುತ್ತಿದ್ದರು. ಇಷ್ಟಲ್ಲದೆ ದರ್ಶನೀಯವಾದ ಆಕಾರವುಳ್ಳ ಒಬ್ಬ ಪುರುಷನನ್ನೂ, ಒಂದು ಕುದುರೆಯನ್ನೂ ಅಲ್ಲಿ ಕಂಡನು. ಒಡನೆಯೇ ಉತಂಕನು ಮಂತ್ರಸ್ವರೂಪಗಳಾದ ಶ್ಲೋಕಾರ್ಥಗಳಿಂದ ಅವರೆಲ್ಲರನ್ನೂ ಸ್ತೋತ್ರಮಾಡತೊಡಗಿದನು.

" ಇಪ್ಪತ್ತುನಾಲ್ಕು ಗಿಣ್ಣುಗಳುಳ್ಳುದಾಗಿ, ಎಂದಿಗೂ ನಾಶವಿಲ್ಲದುದಾಗಿ, ಯಾವಾಗಲೂ ಸುತ್ತುತ್ತಿರುವ ಈ ಚಕ್ರದ ನಡುವೆ ಮುನ್ನೂರರು

---

* ಸೂರ್ಯನ ಗತಿಯಲ್ಲಿ ಹೆಚ್ಚು ಕಡಿಮೆಯಿಲ್ಲದಂತೆ, ಒಂದೇ ನೆಲೆಯಲ್ಲಿರಿಸಲು ಕಾರಣವಾದ ಶಕ್ತಿಯನ್ನೇ ಕಡಿವಾಳಗಳನ್ನಾಗಿ ಉಕ್ತ ನಾಗನೆಂದರ್ಥವು.

ವತ್ತು ಅಡ್ಡಗಡ್ಡಿಗಳಿವೆ. ಆ ಚಕ್ರವನ್ನು ಆರುಮಂದಿ ಕುಮಾರರು ತಿರುಗಿಸುತ್ತಿರುವರು. ಪ್ರಪಂಚವನ್ನೆಲ್ಲ ಆವರಿಸತಕ್ಕ ರೂಪವುಳ್ಳ ಇಬ್ಬರು ಯುವತಿಯರು, ಕರಿಯವೂ, ಬಿಳಿಯವೂ ಆದ ನೂಲೆಳೆಗಳನ್ನು ಹಾಸಿಕೊಂಡು ಸಮಸ್ತ ಭುವನಗಳನ್ನೂ, ಪ್ರಾಣಿವರ್ಗಗಳನ್ನೂ ಯಾವಾಗಲೂ ಪರಿವರ್ತಿಸುತ್ತ ವಸ್ತ್ರವನ್ನು ನೇಯುತ್ತಿರುವರು.

ವಜ್ರಧಾರಿಯೂ, ಲೋಕಪಾಲಕನೂ, ವೃತ್ರ ನಮುಚಿಗಳೆಂಬ ರಾಕ್ಷಸರನ್ನು ಸಂಹರಿಸಿದವನೂ, ಎರಡು ಕೃಷ್ಣವಸ್ತ್ರಗಳನ್ನು ಧರಿಸಿದವನೂ ಆದ ಯಾವ ಮಹಾತ್ಮನು ಲೋಕದಲ್ಲಿ ಸತ್ಯ, ಅಸತ್ಯಗಳೆನಿಸಿದ ಆತ್ಮಾನಾತ್ಮಗಳೆರಡನ್ನೂ ಪ್ರತ್ಯೇಕಿಸಿ ತಿಳಿಸುವನೋ, ಯಾವನು ಜಲದಲ್ಲಿ ಜನಿಸಿದ ಪುರಾತನವಾದ ಅಗ್ನಿಯನ್ನೇ ತನ್ನ ವಾಹನಾಶ್ವವನ್ನಾಗಿ ಉಳ್ಳವನೋ, ಯಾವನು ಲೋಕನಿಯಾಮಕನಾಗಿ ತ್ರಿಲೋಕಪ್ರಭುವೆನಿಸಿರುವನೋ ಅಂತಹ ಇಂದ್ರನಿಗೆ ನಮಸ್ಕಾರವು" ಎಂದನು.

ಆಗ ಅಶ್ವಾರೂಢನಾದ ಪುರುಷನು, ಉತಂಕನನ್ನು ನೋಡಿ "ಓ ವಿಪ್ರೋತ್ತಮಾ! ನಿನ್ನ ಸ್ತುತಿಗೆ ಮೆಚ್ಚಿದೆನು. ನಿನಗೆ ಇಷ್ಟವಾದುದನ್ನು ಕೇಳು" ಎನಲು ಉತಂಕನು "ನಾಗರೆಲ್ಲರೂ ನನಗೆ ವಶರಾಗಬೇಕು" ಎಂದನು. ಅದಕ್ಕಾ ಇಂದ್ರನು ತಿರುಗಿ ಉತಂತಕನನ್ನು ಕುರಿತು "ಓ ಬ್ರಾಹ್ಮಣಾ! ಹಾಗಿದ್ದರೆ ನೀನು ಈ ಕುದುರೆಯ ಪೃಷ್ಠದ ಕಡೆಯಲ್ಲಿ ಊದು" ಎಂದನು. ಅದರಂತೆ ಉತಂಕನು ಆ ಕುದುರೆಯ ಪೃಷ್ಠ (ಅಪಾನ)ದಲ್ಲಿ ಊದುತ್ತ ಬರಲು, ಆ ಕುದುರೆಯ ಶರೀರದ ಎಲ್ಲಾ ರೋಮರಂಧ್ರಗಳಿಂದಲೂ ಅಗ್ನಿಜ್ವಾಲೆಗಳು ಹೊಗೆಯೊಡನೆ ಹೊರಡಲಾರಂಭಿಸಿದುವು. ಇದರಿಂದ ನಾಗಲೋಕಕ್ಕೆ ಅತಿತೀಕ್ಷ್ಣವಾದ ತಾಪವು ತಗುಲಿತು. ಆಗ ತಕ್ಷಕನು ಅಗ್ನಿಭಯದಿಂದ ತತ್ತಳಿಸುತ್ತ, ಬೇರೆ ದಾರಿತೋರದೆ, ಕುಂಡಲಗಳನ್ನು ಕೈಗೆತ್ತಿಕೊಂಡು ತನ್ನ ಗೃಹದಿಂದ ಹೊರಟು "ಸ್ವಾಮಿ! ಈ ಕುಂಡಲಗಳನ್ನು ಗ್ರಹಿಸಬೇಕು" ಎಂದನು. ಉತಂಕನು ಅವುಗಳನ್ನು ಪ್ರತಿಗ್ರಹಿಸಿ, ಆಮೇಲೆ ತನ್ನಲ್ಲಿ ತಾನು "ಈ ದಿವಸವೇ ನಮ್ಮ ಗುರುಪತ್ನಿಯು ನಡೆಸಬೇಕಾದ ವ್ರತದಿನವು. ನಾನಾದರೋ ಬಹುದೂರಕ್ಕೆ ಬಂದು



ಪುಟ ೯೫. ಇಂದ್ರನು ತಕ್ಷಕನಿಂದ ಕುಂಡಲಗಳನ್ನು ಉತಂಕನ ಕೈಗೆ ಕೊಡಿಸಿ, ಅವನನ್ನು ತನ್ನ ಕುದುರೆಯ ಮೇಲೇರಿಸಿ ಕಳುಹಿಸಿದುದು.

ಬಟ್ಟಿರುವೆನು. ನಾನು ಹೇಗೆ ಇದನ್ನು ಸಕಾಲಕ್ಕೆ ಆಕೆಯ ಕೈಗೆ ಸೇರಿಸ ಬಲ್ಲೆನು?" ಎಂದು ಚಿಂತಿಸುತ್ತಿದ್ದನು. ಹೀಗೆ ಚಿಂತಿಸುತ್ತಿರುವಾಗ ಆ ಪುರುಷನು "ಉತಂಕಾ! ಏಕೆ ಚಿಂತಿಸುವೆ? ಈ ಕುದುರೆಯನ್ನೇ ಏರಿ ಹೋಗು. ಇದು ನಿನ್ನನ್ನು ಕ್ಷಣಮಾತ್ರದಲ್ಲಿ ಉಪಾಧ್ಯಾಯನ ಗೃಹಕ್ಕೆ ಸೇರಿಸಬಲ್ಲುದು" ಎಂದನು. ಇದನ್ನು ಕೇಳಿ 'ಒಳ್ಳೆಯದು' ಎಂದು ಕುದುರೆಯನ್ನೇರಿ ಉಪಾಧ್ಯಾಯಗೃಹಕ್ಕೆ ಬಂದನು. ಇಷ್ಟರಲ್ಲಿಯೇ ಅತ್ತ ಲಾಗಿ ಉಪಾಧ್ಯಾಯಪತ್ನಿಯು ಸ್ನಾನಮಾಡಿ ತಲೆಯನ್ನಾರಿಸಿಕೊಳ್ಳುತ್ತ ಕುಳಿತುಕೊಂಡು ಉತಂಕನು ಇನ್ನೂ ಬರಲಿಲ್ಲವೆಂಬ ಕೋಪದಿಂದ ಅವ ನಿಗೆ ಶಾಪವನ್ನು ಕೊಡುವುದಕ್ಕೆ ನಿಶ್ಚಯಿಸಿದ್ದಳು. ಇಷ್ಟರಲ್ಲಿಯೇ ಉತಂ ಕನು ಬಂದು ಅವಳಿಗೆ ನಮಸ್ಕರಿಸಿ ಕುಂಡಲಗಳನ್ನು ಕೊಟ್ಟನು. ಆಗ ಆಕೆಯು ಅವನನ್ನು ನೋಡಿ "ಉತಂಕಾ! ನೀನು ಸರಿಯಾದ ಕಾಲಕ್ಕೆ, ಸರಿಯಾದ ಸ್ಥಳಕ್ಕೆ ಇದನ್ನು ತಂದುಕೊಟ್ಟೆ! ವತ್ಸಾ! ನಿನಗೆ ಸ್ವಾಗತವು. ನೀನು ಇನ್ನೂ ಬರಲಿಲ್ಲವೆಂಬ ಕೋಪದಿಂದ ಈಗಲೇ ನಿನ್ನನ್ನು ಶಪಿಸುವು ವುದರಲ್ಲಿದ್ದೆನು. ಇನ್ನು ನಿನಗೆ ಶೀಘ್ರದಲ್ಲಿಯೇ ಶ್ರೇಯಸ್ಸುಂಟು. ನಿನ್ನ ಇಷ್ಟಸಿದ್ಧಿಯಾಗಲಿ" ಎಂದಳು. ಆಮೇಲೆ ಉತಂಕನು "ಆಚಾರ್ಯಾ! ಈ ಕಾರ್ಯದಲ್ಲಿ ನಾಗರಾಜನಾದ ತಕ್ಷಕನು ನನಗೆ ವಿಘ್ನವನ್ನುಂಟುಮಾ ಡಿದನು. ಇದರಿಂದ ನಾನು ನಾಗಲೋಕಕ್ಕೆ ಹೋಗಬೇಕಾಯಿತು. ಅಲ್ಲಿ ಇಬ್ಬರು ಸ್ತ್ರೀಯರು ಮಗ್ಗದಲ್ಲಿ ವಸ್ತ್ರವನ್ನು ನೇಯುತ್ತಿದ್ದುದನ್ನು ಕಂಡೆನು. ಆ ಮಗ್ಗದಲ್ಲಿ ನೂಲೆಳೆಗಳು ಬಿಳಿಯವೂ, ಕರಿಯವೂ ಸೇರಿದ್ದುವು. ಅದೇ ನೆಂದು ತಿಳಿಯದು. ಮತ್ತು ಅಲ್ಲಿ ಹನ್ನೆರಡು ಅಡ್ಡಗಡ್ಡಿಗಳುಳ್ಳ ಚಕ್ರ ವನ್ನು ಕಂಡೆನು. ಅದನ್ನು ಆರು ಮಂದಿ ಕುಮಾರರು ತಿರುಗಿಸುತ್ತಿದ್ದರು. ಆ ಚಕ್ರವಾವುದು? ಆಮೇಲೆ ಒಬ್ಬ ಪುರುಷನನ್ನೂ ಒಂದು ದೊಡ್ಡ ಕುದುರೆಯನ್ನೂ ನೋಡಿದೆನು. ಅದರ ಸಂಗತಿಯೇನು? ದಾರಿಯಲ್ಲಿ ಹೋಗುತ್ತಿರುವಾಗ ಒಂದು ದೊಡ್ಡ ಎತ್ತನ್ನೂ, ಅದರಮೇಲೆ ಕುಳಿತಿದ್ದ ಒಬ್ಬ ಮಹಾಪುರುಷನನ್ನೂ ಕಂಡೆನು. ಆ ಪುರುಷನು ನನ್ನನ್ನು ಕಂಡೊ ಡನೆ ಬಹಳ ಉಪಚಾರಪೂರ್ವಕವಾಗಿ "ಉತಂಕಾ! ಈ ವೃಷಭದ ಸಗಣಿ ಯನ್ನು ಭಕ್ಷಿಸು. ನಿಮ್ಮ ಉಪಾಧ್ಯಾಯರು ಕೂಡ ಇದನ್ನು ಭಕ್ಷಿಸಿರು

ವರು" ಎನಲು ಅವನ ಮಾತಿನಂತೆ ನಾನು ಆ ಎತ್ತಿನ ಸಗಣಿಯನ್ನೂ ತಿಂದೆನು. ಆ ಪುರುಷನಾರು? ಇದರ ತತ್ವವನ್ನೆಲ್ಲ ನೀನು ನನಗೆ ತಿಳಿಸ ಬೇಕು" ಎಂದನು. ಅದಕ್ಕಾ ಉಪಾಧ್ಯಾಯನು "ಓ ವತ್ಸಾ! ನೀನು ನೋಡಿದ ಆ ಸ್ತ್ರೀಯರಿಬ್ಬರೂ ಧಾತಾ, ವಿಧಾತಾ ಎಂಬ ಇಬ್ಬರು ದೇವತೆ ಗಳು. ಕಪ್ಪು ಬಿಳುಪು ಬಣ್ಣದ ನೂಲುಗಳೇ ರಾತ್ರಿ ಹಗಲುಗಳು. ಆ ಚಕ್ರವನ್ನು ತಿರುಗಿಸುತ್ತಿದ್ದ ಆರುಮಂದಿ ಕುಮಾರರು ಆರು ಋತುಗಳು. ಹನ್ನೆರಡು ಅಡ್ಡಗಡ್ಡಿಗಳೂ ದ್ವಾದಶಮಾಸಗಳು. ಚಕ್ರವೇ ಸಂವತ್ಸರವು. ನೀನು ಕಂಡ ಪುರುಷನು ಮೇಘದೇವತೆಯಾದ ಪರ್ಜನ್ಯನು. ನೀನು ಕಂಡ ಅಶ್ವವೇ ಅಗ್ನಿ. ನೀನು ದಾರಿಯಲ್ಲಿ ಕಂಡ ಋಷಭವು ಐರಾವತ ವೆಂಬ ಗಜಶ್ರೇಷ್ಠವು. ಅದನ್ನೇರಿದ್ದ ಪುರುಷನೇ ಇಂದ್ರನು. ನೀನು ಭಕ್ಷಿಸಿದ ಎತ್ತಿನ ಸಗಣಿಯೇ ಅಮೃತವು ಆ ಅಮೃತವನ್ನು ಭಕ್ಷಿಸಿ ದ್ದುದರಿಂದಲೇ ನಾಗಲೋಕದಲ್ಲಿ ನಿನಗೆ ಅಪಾಯವೇನೂ ಸಂಭವಿಸ ಲಿಲ್ಲ. ಭಗವಂತನಾದ ಇಂದ್ರನು ನನಗೆ ಮಿತ್ರನಾದುದರಿಂದ ನಿನ್ನಲ್ಲಿ ಕನಿಕರವಿಟ್ಟು ನಿನ್ನನ್ನು ಹೀಗೆ ಅನುಗ್ರಹಿಸಿದನು. ಅವನ ಅನುಗ್ರಹಬಲ ದಿಂದಲೇ ನೀನು ಕುಂಡಲಗಳನ್ನು ತೆಗೆದುಕೊಂಡು ಹಿಂತಿರುಗಿ ಬರುವಂ ತಾಯಿತು. ಸೌಮ್ಯಾ! ಇನ್ನು ನಿನಗೆ ಅನುಜ್ಞೆಯನ್ನು ಕೊಡುವೆನು. ನಿನ್ನ ಗೃಹಕ್ಕೆ ಹೋಗು. ನಿನಗೆ ಶ್ರೇಯಸ್ಸುಂಟಾಗುವುದು" ಎಂದನು. ಹೀಗೆ ಉಪಾಧ್ಯಾಯನ ಅನುಮತಿಯಿಂದ ಮಹಾತ್ಮನಾದ ಉತಂಕನು ಅಲ್ಲಿಂದ ಹಿಂತಿರುಗಿದನು. ಆದರೆ, ತಕ್ಷಕನಮೇಲೆ ಇವನಿಗುಂಟಾದ ಕೋ ಪವು ಶಾಂತವಾಗಲಿಲ್ಲ. ಅವನಮೇಲೆ ಹಗೆತೀರಿಸಿಕೊಳ್ಳಬೇಕೆಂದು ನಿಶ್ಚ ಯಿಸಿ, ನೆಟ್ಟಗೆ ಹಸ್ತಿನಾಪುರಕ್ಕೆ ಹೋಗಿ, ಅಲ್ಲಿನ ರಾಜನಾದ ಜನಮೇಜಯ ನನ್ನು ಸಂಧಿಸಿದನು. ಈ ಜನಮೇಜಯರಾಜನು ಹಿಂದೆ ಹೇಳಿದ್ದಂತೆ ಆಗಲೇ ತಕ್ಷಶಿಲಾನಗರಕ್ಕೆ ಹೋಗಿ ಅದನ್ನು ಜಯಿಸಿ ಅಲ್ಲಿಂದ ಹಿಂತಿರುಗಿ ಹಸ್ತಿನಾಪುರಕ್ಕೆ ಬಂದಿದ್ದನು. ಹೀಗೆ ಜಯಶೀಲನಾಗಿ ಬಂದು ಮಂತ್ರಿ ಗಳ ನಡುವೆ ಸಂತೋಷದಿಂದ ಸಭಾಸ್ಥಾನದಲ್ಲಿ ಕುಳಿತಿದ್ದ ಜನಮೇಜಯ ರಾಜನನ್ನು ನೋಡಿ ಉತಂಕನು, ಮೊದಲು ಅವನಿಗೆ ಯಥಾವಿಧಿಯಾಗಿ ಜಯಜಯಶಬ್ದಗಳನ್ನು ಹೇಳಿ ಆಶೀರ್ವಾದವನ್ನು ಮಾಡಿ, ಆಮೇಲೆ ಉಚಿ

ತವಾಕ್ಯಗಳಿಂದ ಅವನನ್ನು ಕುರಿತು “ ಓ ರಾಜೋತ್ತಮಾ! ನೀನು ಮಾಡಬೇಕಾದ ಮುಖ್ಯ ಕಾರ್ಯವು ಮತ್ತೊಂದಿರುವಾಗ, ಅರಿಯದ ಬಾಲಕನಂತೆ ಬೇರೆ ಯಾವುದೋ ಒಂದು ಕೆಲಸವನ್ನು ಮಾಡುತ್ತಿರುವೆಯಲ್ಲಾ!” ಎಂದನು. ಇದನ್ನು ಕೇಳಿ ಜನಮೇಜಯನು ಬೆಚ್ಚುರಬಿದ್ದು, ಆ ಉತಂಕನನ್ನು ಯಥೋಚಿತವಾಗಿ ಸತ್ಕರಿಸಿ “ ಓ ವಿಪ್ರೋತ್ತಮಾ! ನಾನು ಪ್ರಜಾಪಾಲನವೆಂಬ ಕ್ಷತ್ರಿಯಧರ್ಮವನ್ನು ಸರಿಯಾಗಿಯೇ ಕಾಪಾಡಿಕೊಂಡು ಬರುತ್ತಿರುವೆನು. ಇದಕ್ಕೂಮೇಲೆ ಈಗ ನಾನು ನಡೆಸಬೇಕಾದ ಪ್ರಧಾನ ಕಾರ್ಯವೇನು? ನೀವು ಯಾವ ಕಾರ್ಯಕ್ಕಾಗಿ ಇಲ್ಲಿಗೆ ಬಂದಿರುವಿರೋ ಅದನ್ನು ತಿಳಿಸಬೇಕು” ಎಂದನು. ಆ ಬ್ರಾಹ್ಮಣೋತ್ತಮನು “ ರಾಜಾ! ನಾನೇನೂ ಸ್ವಕಾರ್ಯಕ್ಕಾಗಿ ಬಂದವನಲ್ಲ. ನಿನ್ನ ಸ್ವಂತಕಾರ್ಯವನ್ನು ಜ್ಞಾಪಿಸುವುದಕ್ಕಾಗಿ ಬಂದೆನು. ಹಿಂದೆ ನಿನ್ನ ತಂದೆಯನ್ನು ಕೊಂದ ದುರಾತ್ಮನಾದ ತಕ್ಷಕನೆಂಬ ಸರ್ಪಕ್ಕೆ ನೀನು ಪ್ರತೀಕಾರಮಾಡಬೇಡವೇ? ಶಾಸ್ತ್ರೋಕ್ತವಾದ ಆ ಕರ್ಮಕ್ಕೆ ಇದು ಸಕಾಲವೆಂದು ನನಗೆ ತೋರುವುದು. ಓ ರಾಜಾ! ಮಹಾತ್ಮನಾದ ನಿನ್ನ ತಂದೆಯ ಮರ್ಯಾದೆಯನ್ನು ನೀನು ಉಳಿಸಬೇಡವೇ? ನಿನ್ನ ತಂದೆಯು ನಿರಪರಾಧಿಯಾಗಿದ್ದರೂ, ದುಷ್ಟಹೃದಯನಾದ ತಕ್ಷಕನಿಂದ ಕಚ್ಚಲ್ಪಟ್ಟು, ವಜ್ರಾಹತವಾದ ವೃಕ್ಷದಂತೆ ಮೃತಿಹೊಂದಿ ಬಿದ್ದನು. ಸರ್ಪಾಧಮನಾದ ಆ ತಕ್ಷಕನು ಬಲದಿಂದಲೂ, ಗರ್ವದಿಂದಲೂ ಬೀಗಿ, ಪಾಪಬುದ್ಧಿಯಿಂದ ನಿನ್ನ ತಂದೆಯನ್ನು, ರಾಜಋಷಿಕುಲಕ್ಕೆ ರಕ್ಷಕನಾದ ದೇವಸಮಾನನಾದ ಆ ಪರೀಕ್ಷಿನ್ಮಹಾರಾಜನನ್ನು, ಕಚ್ಚಿ ಕೊಂದನು. ಆ ಪಾಪಿಯೇ ನಿನ್ನ ತಂದೆಯ ಬಳಿಗೆ ಹೋಗಬೇಕೆಂದಿದ್ದ ಕಾಶ್ಯಪನನ್ನೂ ಅಲ್ಲಿಗೆ ಹೋಗದಂತೆ ತಪ್ಪಿಸಿದನು. ಮಹಾರಾಜಾ! ಆ ಪಾಪಿಯನ್ನು ಸರ್ಪಯಾಗದ ಮೂಲಕವಾಗಿ ಉರಿಯುವ ಬೆಂಕಿಯಲ್ಲಿ ಹೋಮಮಾಡಬೇಕು. ಆ ಯಾಗಕ್ಕೆ ನೀನು ಶೀಘ್ರದಲ್ಲಿಯೇ ಪ್ರಯತ್ನಿಸು. ನೀನು ಇದನ್ನು ಮಾಡಿದರೆಮಾತ್ರವೇ ನಿನ್ನ ತಂದೆಯ ಸಾಲವನ್ನು ತೀರಿಸಿದಂತಾಗುವುದು. ನನಗೂ ಇದರಿಂದ ವಿಶೇಷಪ್ರಿಯವನ್ನುಂಟುಮಾಡಿದಂತಾಗುವುದು. ಅನಘಾ! ಭೂಪಾಲಕಾ! ಓ ಮಹಾರಾಜಾ! ಇದರಿಂದ ನನಗೆ ಹೇಗೆ ಪ್ರಿಯವೆಂದು ಕೇಳುವೆಯಾ? ನಾನು

ಗುರುದಕ್ಷಿಣಾರ್ಥವಾಗಿ ಹೋದಾಗ ಆ ದುರಾತ್ಮನು ನನ್ನ ಕೆಲಸಕ್ಕೂ ವಿಘ್ನವನ್ನು ಮಾಡಿದನು'' ಎಂದನು. ಈ ಮಾತನ್ನು ಕೇಳಿದೊಡನೆ ಜನಮೇಜಯನಿಗೆ ತಂದೆಯ ಮರಣದಿಂದುಂಟಾದ ದುಃಖವು ಕೋಪ ರೂಪವಾಗಿ ಜ್ವಲಿಸಲಾರಂಭಿಸಿತು. ಉರಿಯುವ ಬೆಂಕಿಗೆ ತುಪ್ಪವನ್ನು ಸುರಿದಂತೆ ಉತಂಕನ ವಾಕ್ಯದಿಂದ ತಕ್ಷಕನಮೇಲೆ ಜನಮೇಜಯನಿಗೆ ಕೋಪವು ಮಿತಿಮೀರಿತು. ಆಗ ರಾಜನು ದುಃಖದಿಂದ ತಪಿಸುತ್ತ ಉತಂಕನ ಇದಿರಾಗಿಯೇ ತನ್ನ ಮಂತ್ರಿಗಳ ಮೂಲಕವಾಗಿ ತನ್ನ ತಂದೆಯು ಲೋಕಾಂತರವನ್ನೈದಿದ ವೃತ್ತಾಂತವನ್ನೆಲ್ಲ ಸವಿಸ್ತರವಾಗಿ ಕೇಳಿದನು. ಹೀಗೆ ಪಿತೃಮರಣವೃತ್ತಾಂತವನ್ನು ಕೇಳಿದ ಜನಮೇಜಯನು, ದುಃಖ ಕೋಪಗಳಿಂದ ಕುದಿಯುತ್ತಿದ್ದನು. (ಜನಮೇಜಯನು ಸರ್ಪಯಾಗವನ್ನು ಮಾಡಲು ಇದು ಒಂದು ಕಾರಣವು).

ಇದು ಮೂರನೆಯ ಅಧ್ಯಾಯವು.

**ಇಲ್ಲಿಗೆ ಪೌಷ್ಯಪರ್ವವು ಮುಗಿದುದು.**



# ಪೌಲೋಮಪರ್ವವು.



ಸೂತ ಶೌನಕರ ಸಂವಾದಮೂಲಕವಾಗಿ ಕಥೆಯ ಉಪೋದ್ಘಾತವು.

ಸೂತಕುಲದಲ್ಲಿ ಹುಟ್ಟಿ, ರೋಮಹರ್ಷಣನ ಮಗನಾಗಿ, ಪೌರಾಣಿಕನೆನಿಸಿಕೊಂಡ ಉಗ್ರಶ್ರವನು, ನೈಮಿಶಾರಣ್ಯದಲ್ಲಿ ಕುಲಪತಿಯಾದ ಶೌನಕ ಮಹಾಮುನಿಯು ನಡೆಸುತಿದ್ದ ಹನ್ನೆರಡುವರ್ಷದ ಸತ್ರಯಾಗದಲ್ಲಿ ಅಭ್ಯಾಗತರಾಗಿದ್ದ ಋಷಿಗಳನಡುವೆ ಬಂದು ಕಲೆತನು. ಪುರಾಣಗಳಲ್ಲಿ ವಿಶೇಷಪರಿಶ್ರಮವನ್ನು ಪಡೆದ ಆ ಸೂತಪೌರಾಣಿಕನು ಮಹರ್ಷಿಗಳೆಲ್ಲರ ಮುಂದೆ ಬದ್ಧಾಂಜಲಿಯಾಗಿ “ಓ ಮಹಾತ್ಮರೇ! ಈಗ ನಾನು ಉತಂಕನ ಚರಿತ್ರವೆಲ್ಲವನ್ನೂ ನಿಮಗೆ ತಿಳಿಸಿದೆನಷ್ಟೆ! ಜನಮೇಜಯನ ಸರ್ಪ

ಯಾಗಕ್ಕೆ ಮತ್ತೊಂದು ಕಾರಣವುಂಟು. ನಿಮಗೆ ಕೇಳುವುದರಲ್ಲಿ ಅಭಿಲಾಷೆಯಿದ್ದರೆ ಅದನ್ನೂ ಹೇಳುವೆನು" ಎಂದನು. ಆಗ ಋಷಿಗಳು "ಓ ರೋಮಹರ್ಷಣಪುತ್ರಾ! ನಿನ್ನಿಂದ ಕಥೆಗಳನ್ನೆಲ್ಲ ಕೇಳಬೇಕೆಂಬುದೇ ನಮ್ಮ ಕೋರಿಕೆ! ನಮಗೆ ನೀನು ಆ ಕಥಾವಿಷಯಗಳನ್ನೆಲ್ಲ ಅವಶ್ಯವಾಗಿ ತಿಳಿಸಬೇಕು. ಆದರೆ, ನಮ್ಮ ಕುಲಪತಿಯಾದ ಭಗವಂತನಾದ ಶೌನಕ ಮುನಿಯು ಈಗ ಅಗ್ನಿಶಾಲೆಯಲ್ಲಿರುವನು. ಅವನು ಆರಂಭಿಸಿರುವ ಸತ್ರಯಾಗವು ದೀರ್ಘಕಾಲದವರೆಗೆ ನಡೆಯಬೇಕಾದುದರಿಂದ, ನಿನ್ನಿಂದ ಎಲ್ಲಾ ಕಥೆಗಳನ್ನೂ ಕೇಳಲು ಈಗ ನಮಗೆ ಅವಕಾಶವುಂಟು. ನಮ್ಮೆಲ್ಲರಿಗೆ ಕುಲಪತಿಯಾದ ಆ ಬ್ರಾಹ್ಮಣೋತ್ತಮನೋ ವಿದ್ಯಾವಂತನು, ಧೀಮಂತನು, ದೇವಾಸುರ ನಾಗ ಗಂಧರ್ವರಲ್ಲಿ, ಮತ್ತು ಮನುಷ್ಯರಲ್ಲಿ, ಯಾರೊಬ್ಬರಿಗೆ ಸಂಬಂಧಪಟ್ಟ ಎಲ್ಲಾ ಕಥೆಗಳನ್ನೂ ಚೆನ್ನಾಗಿ ಬಲ್ಲವನು. ಮತ್ತು ಕಾರ್ಯಸಮರ್ಥನು, ಶಾಸ್ತ್ರಗಳಲ್ಲಿಯೂ ವೇದಭಾಗಗಳಾದ ಆರಣ್ಯಕಗಳಲ್ಲಿಯೂ ಗುರುಸ್ಥಾನವನ್ನು ಪಡೆದವನು, ಸತ್ಯವಾದಿ, ಶಾಂತನು, ತಪಸ್ವಿ, ನಿಯತವ್ರತನು, ನಮ್ಮೆಲ್ಲರಿಗೂ ಪೂಜ್ಯನು. ಅಂತವನು ಈಗ ಸತ್ರಯಾಗದಲ್ಲಿ ದೀಕ್ಷೆಯನ್ನು ವಹಿಸಿರುವನು. ಅವನಿಗಾಗಿ ಸ್ವಲ್ಪ ಹೊತ್ತು ನಾವು ನಿರೀಕ್ಷಿಸುತ್ತಿರುವುದು ಉಚಿತವು. ನಮ್ಮ ಸಭೆಯಲ್ಲಿ ಅವನನ್ನು ಕರೆತಂದು ಅಗ್ರಾಸನವನ್ನು ಕೊಟ್ಟು ಕುಳ್ಳಿರಿಸಿದಮೇಲೆ, ಆ ಬ್ರಾಹ್ಮಣೋತ್ತಮನು ಕೇಳುವ ಕಥೆಗಳನ್ನೆಲ್ಲ ನೀನು ಕ್ರಮವಾಗಿ ವಿವರಿಸಬಹುದು" ಎಂದನು. ಅದಕ್ಕಾ ಸೌತಿಯು "ನಿಮ್ಮಿಷ್ಟದಂತೆಯೇ ಆಗಲಿ! ಮಹಾತ್ಮನಾದ ಆ ಗುರುವು ಬಂದು ಕುಳಿತಮೇಲೆ, ಅವನು ಯಾವಯಾವ ವಿಷಯಗಳನ್ನು ಕುರಿತು ಯಾವಯಾವ ಪ್ರಶ್ನೆಮಾಡುವನೋ ಆಯಾ ಪುಣ್ಯಕಥೆಗಳನ್ನೆಲ್ಲ ಸವಿಸ್ತರವಾಗಿ ಹೇಳುವೆನು" ಎಂದನು.

ಇಷ್ಟರಲ್ಲಿಯೇ ವಿಪ್ರೋತ್ತಮನಾದ ಶೌನಕನು ನಡೆಸಬೇಕಾದ ಕೃತ್ಯಗಳೆಲ್ಲವನ್ನೂ ಯಥಾವಿಧಿಯಾಗಿ ನಡೆಸಿ ಮಂತ್ರಪೂರ್ವಕವಾಗಿ ದೇವಪಿತೃತರ್ಪಣಗಳನ್ನು ಮಾಡಿ ಮುಗಿಸಿದಮೇಲೆ, ಇತ್ತಲಾಗಿ ಯಜ್ಞಶಾಲೆಗೆ ಸೇರಿದಂತೆ ವ್ರತನಿಷ್ಠರೂ, ತಪಸ್ವಿಗಳೂ ಆದ ಬ್ರಹ್ಮರ್ಷಿಗಳೊಡನೆ ಸೂತ

ಪೌರಾಣಿಕನು ಕುಳಿತಿದ್ದ ಸಭೆಗೆ ಬಂದು ಸೇರಿದನು. ಸಭೆಯಲ್ಲಿದ್ದವರೆಲ್ಲರೂ ಪ್ರತ್ಯುತ್ಥಾನಮಾಡಿ ಗೌರವಿಸಿದರು. ಆಗ ಶೌನಕನು ಅಲ್ಲಿದ್ದ ಋತ್ವಿಕ್ಕುಗಳನ್ನೂ, ಸಭೆಯಲ್ಲಿದ್ದ ಇತರರನ್ನೂ ಆದರದಿಂದ ಕುಳ್ಳಿರುವಂತೆ ಹೇಳಿ, ಅವರೆಲ್ಲರೂ ಕುಳಿತಮೇಲೆ ತಾನೂ ಕುಳಿತುಕೊಂಡು ಸೂತನನ್ನು ನೋಡಿ ಹೀಗೆಂದು ಹೇಳುವನು.

ಇದು ನಾಲ್ಕನೆಯ ಅಧ್ಯಾಯವು.



{ ಭೃಗುವಂಶಕ್ರಮವು ಪೌಲೋಮೋಪಾಖ್ಯಾನವು. ಪುಲೋಮನೆಂಬ ರಾಕ್ಷಸನು ಪುಲೋಮೆಯನ್ನು ಕದ್ದುಯ್ದುದು. ಪುಲೋಮನಿಗೂ ಅಗ್ನಿಗೂ ನಡೆದ ಸಂವಾದವು. }

ಶೌನಕನು ಸೂತನನ್ನು ಕುರಿತು “ಸೌತೀ! ಮೊದಲು ನಿನ್ನ ತಂದೆ ರೋಮಹರ್ಷಣನು ಕೃಷ್ಣದ್ವೈಪಾಯನನಲ್ಲಿ ಎಲ್ಲಾ ಪುರಾಣಗಳನ್ನೂ, ಭಾರತವನ್ನೂ ಓದಿದನು. ನೀನೂ ನಿನ್ನ ತಂದೆಯಿಂದ ಅವೆಲ್ಲವನ್ನೂ ಓದಿರುವೆಯಲ್ಲವೇ? ಆ ಪುರಾಣಗಳಲ್ಲಿ ಮಹಾಧೀಮಂತರ ದಿವ್ಯಚರಿತ್ರೆಗಳೂ, ಹೆಸರುಗೊಂಡ ಅನೇಕಪೂರ್ವವಂಶಗಳೂ ಹೇಳಲ್ಪಡುವುವು. ಅವನ್ನು ನಾವು ಹಿಂದೊಮ್ಮೆ ನಿನ್ನ ತಂದೆಯಿಂದ ಕೇಳಿಬಲ್ಲೆವು. ಅವರಲ್ಲಿ ಮೊದಲು ನಮ್ಮ ಭೃಗುವಂಶಚರಿತ್ರವನ್ನು ನಿನ್ನಿಂದ ವಿವರವಾಗಿ ಕೇಳಬೇಕೆಂಬುದು ಈಗ ನಮ್ಮ ಕೋರಿಕೆ. ಆ ಕಥೆಯನ್ನಾರಂಭಿಸು. ನೀನು ಹೇಳುವುದನ್ನೆಲ್ಲಾ ಗ್ರಹಿಸಲು ಶಕ್ತರಾಗಿರುವೆವು” ಎಂದನು.

ಅದಕ್ಕಾ ಸೂತನು “ಓ ಭೃಗುಪುತ್ರಾ! ಹಿಂದೆ ವೈಶಂಪಾಯನನೇ ಮೊದಲಾಗಿ ಮಹಾತ್ಮರಾದ ಅನೇಕವಿಪ್ರೋತ್ತಮರು, ಚೆನ್ನಾಗಿ ಅಧ್ಯಯನಮಾಡಿ, ಇತರರಿಗೂ ಉಪದೇಶಿಸಿದ ಕಥೆಗಳನ್ನೆಲ್ಲ ನಾನೂ ಕೇಳಿರುವೆನು. ಅವನ್ನೆಲ್ಲ ಮೊದಲು ನನ್ನ ತಂದೆಯೂ, ಅವನಿಂದ ನಾನೂ ಅಧ್ಯಯನಮಾಡಿರುವೆವು. ನನಗೆ ತಿಳಿದ ವಿಷಯಗಳೆಲ್ಲವನ್ನೂ ಹೇಳಲು ಸಿದ್ಧನಾಗಿರುವೆನು. ಇಂದ್ರಾದಿ ದೇವತೆಗಳಿಂದಲೂ, ಋಷಿಗಳಿಂದಲೂ

ಮರುದ್ಗಣಗಳಿಂದಲೂ ಪೂಜಿತವಾಗಿ, ಸರ್ವೋತ್ಕೃಷ್ಟವೆನಿಸಿಕೊಂಡ ಆ ಭೃಗುವಂಶ ಚರಿತ್ರವನ್ನೇ, ಅಲ್ಲಲ್ಲಿಗೆ ತಕ್ಕ ಪುರಾಣಕಥೆಗಳೊಡನೆಯೂ ಉಪೋದ್ಘಾತದೊಡನೆಯೂ ನಿಮಗೆ ಹೇಳುವೆನು. ಪೂಜ್ಯನಾದ ಭೃಗುವು ಸ್ವಯಂಭುವಾದ ಬ್ರಹ್ಮದೇವನಿಂದ ವರುಣಯಾಗದಲ್ಲಿ ಅಗ್ನಿಯಿಂದ ಸೃಷ್ಟಿಸಲ್ಪಟ್ಟನೆಂದು ನಾವು ಕೇಳಿರುವೆವು. ಆ ಭೃಗುವಿಗೆ ಚ್ಯವನನೆಂಬವನು ಬಹಳ ಪ್ರೇಮಪಾತ್ರನಾದ ಪುತ್ರನು. ಧಾರ್ಮಿಕನಾದ ಪ್ರಮತಿಯು ಚ್ಯವನನ ಮಗನು. ಪ್ರಮತಿಗೆ ಘೃತಾಚಿಯಲ್ಲಿ ರುರುವೆಂಬವನು ಜನಿಸಿದನು. ರುರುವಿಗೆ ಪ್ರಮದ್ವರೆಯೆಂಬವಳಲ್ಲಿ ವೇದಪಾರಂಗತನೂ, ಧರ್ಮನಿರತನೂ, ತಪಸ್ಸಂಪನ್ನನೂ, ಯಶಸ್ವಿಯೂ ಆದ ಶುನಕನೆಂಬ ಪುತ್ರನು ಹುಟ್ಟಿದನು. ಆ ಶುನಕನೇ ನಿನಗೆ ಕೂಟಸ್ಥನು. ಆತನು ಬಹುಶಾಸ್ತ್ರಗಳನ್ನು ಕೇಳಿ ಬಲ್ಲವನು! ಸತ್ಯವಾದಿ! ನಿಯಮನಿಷ್ಠನು! ಆಹಾರನಿಯಮವುಳ್ಳವನು'' ಎಂದನು. ಅದಕ್ಕಾ ಶೌನಕನು ‘‘ ಓ ಸೂತಪುತ್ರಾ! ಮಹಾತ್ಮನಾದ ಭೃಗುಕುಮಾರನಿಗೆ ಚ್ಯವನನೆಂಬ ಹೆಸರು ಹೇಗೆ ಬಂದಿತು? ಅದರ ವಿವರವನ್ನು ತಿಳಿಸಬೇಕು'' ಎನಲು, ಸೂತನು ‘‘ ಭೃಗುವಿಗೆ ಪುಲೋಮೆಯೆಂದು ಹೆಸರುಗೊಂಡ ಪತ್ನಿಯಿದ್ದಳು. ಅವಳು ಅವನಿಗೆ ಬಹಳ ಪ್ರೀತಿಪಾತ್ರಳಾಗಿದ್ದಳು. ಆಕೆಯು ಭೃಗುವಿನ ವೀರ್ಯದಿಂದ ಗರ್ಭವತಿಯಾದಳು ಯಶಸ್ವಿಯಾದ ಆ ಭೃಗುವಿಗೆ ಅವನಿಗೆ ಸಮಾನಗುಣವುಳ್ಳ ಆ ಧರ್ಮಪತ್ನಿಯಲ್ಲಿ ಗರ್ಭವು ಬೆಳೆಯುತ್ತಿದ್ದಾಗ, ಒಮ್ಮೆ ಧಾರ್ಮಿಕೋತ್ತಮನಾದ ಭೃಗುವು ಸ್ನಾನಾರ್ಥವಾಗಿ ಆಶ್ರಮವನ್ನು ವನ್ನು ಬಿಟ್ಟು ಹೊರಗೆ ಹೋಗಿದ್ದನು. ಈ ಸಮಯವನ್ನು ನೋಡಿ ಪುಲೋಮನೆಂಬ ರಾಕ್ಷಸನು ಆಶ್ರಮದೊಳಗೆ ಪ್ರವೇಶಿಸಿ, ನಿಷ್ಕಳಂಕಳಾಗಿಯೂ, ರೂಪವತಿಯಾಗಿಯೂ ಇರುವ ಭೃಗುಪತ್ನಿಯನ್ನು ನೋಡಿ ಬುದ್ಧಿಗೆಟ್ಟು ಮೋಹಗೊಂಡನು. ಇವನ ದುರುದ್ದೇಶವನ್ನು ತಿಳಿಯದ ಭೃಗುಪತ್ನಿಯು ಆಶ್ರಮಕ್ಕೆ ಅತಿಥಿಯಾಗಿ ಬಂದ ಆ ರಾಕ್ಷಸನನ್ನು ಆದರಿಸಿ, ಫಲಮೂಲಾದಿಗಳನ್ನು ತಂದು ಅವನ ಆಹಾರಕ್ಕಾಗಿ ಕೊಟ್ಟಳು. ಕಾಮಪೀಡಿತನಾದ ಆ ರಾಕ್ಷಸನಾದರೋ ವಿಲಾಸವತಿಯಾದ ಆ ಚಪಲಾಕ್ಷಿಯನ್ನು ಎತ್ತಿಕೊಂಡು ಹೋಗಬೇಕೆಂದು ನಿಶ್ಚಯಿಸಿ, ಅವಳು ಸಲಿಗೆಯಿಂದ ಉಪಚರಿ

ಸುತ್ತಿರುವುದನ್ನು ನೋಡಿ, ತನ್ನ ಕಾರ್ಯವು ಫಲಿಸಿತೆಂದು ಸಂತೋಷ ಹೊಂದಿದನು. ಇದಲ್ಲದೆ ಆಕೆಯನ್ನು ಆ ರಾಕ್ಷಸನು ಸಣ್ಣವಯಸ್ಸಿನಲ್ಲಿಯೇ ಒಮ್ಮೆ ವರಿಸಿದ್ದನಂತೆ! ಆದರೆ ಆಕೆಯ ತಂದೆಯು ಅವಳನ್ನು ಶಾಸ್ತ್ರೋಕ್ತವಾಗಿ ಭೃಗುವಿಗೆ ವಿವಾಹಮಾಡಿಬಿಟ್ಟನು. ಶೌನಕಾ! ಆ ರಾಕ್ಷಸನಿಗೆ ಅವಳಮೇಲೆ ಮೊದಲಿದ್ದ ಪಾಪಬುದ್ಧಿಯು ಹೃದಯವನ್ನು ಬಿಟ್ಟುಹೋಗದೆ, ಆ ಚಿಂತೆಯಲ್ಲಿಯೇ ಇದ್ದನು. ಆದಕ್ಕಾಗಿ ಸಮಯವನ್ನು ನೋಡುತಿದ್ದು, ಈಗ ಒಳ್ಳೆಯ ಅವಕಾಶವು ದೊರೆತುದರಿಂದ, ಅವಳನ್ನು ಎತ್ತಿಕೊಂಡು ಹೋಗಬೇಕೆಂದೇ ನಿಶ್ಚಯಿಸಿ, ಅದಕ್ಕೆ ತಕ್ಕ ಸನ್ನಾಹಗಳನ್ನು ಯೋಚಿಸುತ್ತ, ಅಗ್ನಿಶಾಲೆಯಲ್ಲಿ ಜ್ವಲಿಸುತ್ತಿರುವ ಅಗ್ನಿಹೋತ್ರವನ್ನು ಕುರಿತು ಹೀಗೆಂದು ಕೇಳುವನು. “ಓ ಅಗ್ನಿಹೋತ್ರ! ನೀನು ಸತ್ಯವಾಗಿ ಹೇಳು! ಮೊದಲು ಈಕೆಯು ಯಾರಪತ್ನಿ? ನಿನ್ನನ್ನು ಪ್ರಮಾಣವಾಗಿ ಕೇಳುವೆನು. ದೇವತೆಗಳಿಗೆ ನೀನು ಮುಖವೆನಿಸಿಕೊಂಡಿರುವೆ ಎಲ್ಲವನ್ನೂ ನೀನು ಶುಚಿಮಾಡತಕ್ಕವನು. ನನ್ನ ಪ್ರಶ್ನೆಗೆ ಉತ್ತರವನ್ನು ಕೊಡು. ನಾನಲ್ಲವೇ ಮೊದಲು ಈ ವರವರ್ಣಿನಿಯನ್ನು ಕೈಹಿಡಿದು ವರಿಸಿದವನು? ಮೋಸಗಾರನಾದ ಇವಳ ತಂದೆಯು ಆಮೇಲಲ್ಲವೇ ಇವಳನ್ನು ಭೃಗುವಿಗೆ ಕೊಟ್ಟುದು? ಈಗ ಈ ಸುಂದರಿಯು ಈ ಆಶ್ರಮದಲ್ಲಿ ರಹಸ್ಯವಾಗಿ ಕುಳಿತಮಾತ್ರಕ್ಕೆ ಭೃಗುವಿನ ಭಾರ್ಯೆಯಾಗುವಳೇ? ನೀನೇ ಸತ್ಯವಾಗಿ ಹೇಳು. ನಾನೇನೋ ಈಗ ಇವಳನ್ನು ಈ ಆಶ್ರಮದಿಂದ ಎತ್ತಿಕೊಂಡು ಹೋಗಬೇಕೆಂದೇ ಉದ್ದೇಶಿಸಿರುವೆನು. ಮೊದಲು ನನಗೆ ಭಾರ್ಯೆಯಾದ ಈಕೆಯನ್ನು ಭೃಗುವು ತನ್ನ ಪತ್ನಿಯನ್ನಾಗಿ ಮಾಡಿಕೊಂಡದುನ್ನು ನೋಡಿ, ನನಗುಂಟಾದ ಕೋಪವು ನನ್ನ ಹೃದಯವನ್ನು ದಹಿಸುತ್ತಿರುವುದು. ಈ ಅತಿಕ್ರಮವನ್ನು ನಾನು ಎಂದಿ

---

ಇವಳು ಮಗುವಾಗಿದ್ದಾಗ ಇವಳ ತಾಯಿತಂದೆಗಳು, ಆ ಮಗುವು ಅತ್ತಾಗಲೆಲ್ಲ ಅದನ್ನು ಹೆದರಿಸಿ, ಅಳುವನ್ನು ನಿಲ್ಲಿಸುವುದಕ್ಕಾಗಿ “ಎಲಾ ರಾಕ್ಷಸಾ! ಇವಳನ್ನೆತ್ತಿಕೊಂಡು ಹೋಗು” ಎಂದು ಹೇಳುತಿದ್ದ ವಾಡಿಕೆ. ಇದೇ ಸಮಯದಲ್ಲಿ ಅಲ್ಲಿದ್ದ ಈ ರಾಕ್ಷಸನು ಅವಳನ್ನೆತ್ತಿಕೊಂಡುದರಿಂದ, ಈಗ ಅವನು ಅವಳನ್ನು ಮೊದಲೇ ತಂದೆತಾಯಿಗಳು ತನಗೆ ಕೊಟ್ಟುದಾಗಿಯೂ, ತಾನು ಕೈಹಿಡಿದುದಾಗಿಯೂ ಹೇಳುವನು.

ಗೂ ಸಹಿಸಲಾರೆನು. ಇದೋ! ಈಗಲೇ ಈಕೆಯನ್ನು ಆಶ್ರಮದಿಂದ ಎತ್ತಿಕೊಂಡು ಹೋಗುವೆನು" ಎಂದನು. ಹೀಗೆಂದು ನಿರ್ಧರಿಸಿಕೊಂಡ ರೂ, ಆ ರಾಕ್ಷಸನ ಮನಸ್ಸಿನಲ್ಲಿ ಸಂದೇಹವು ತಲೆದೋರುತ್ತಲೇ ಇದ್ದಿತು. ತಿರುಗಿ ಅವನು ಜ್ವಲಿಸುತ್ತಿರುವ ಅಗ್ನಿಯಮುಂದೆ ನಿಂತು ತನ್ನಲ್ಲಿ ತಾನು "ಈಕೆಯೇನೋ ಬಾಲ್ಯದಲ್ಲಿ ಯಾವುದೋ ಒಂದು ನೆಪದಿಂದ ನನ್ನ ಸ್ವಾಧೀನಕ್ಕೆ ಬಂದಿದ್ದವಳು. ಆಮೇಲೆ ಶಾಸ್ತ್ರೋಕ್ತವಾದ ವಿವಾಹಕ್ರಮದಿಂದ ಭೃಗುವಿಗೆ ಕೊಡಲ್ಪಟ್ಟಿರುವಳು. ಆದುದರಿಂದ ಇವಳು ನನ್ನ ಭಾರ್ಯೆಯೋ? ಇಲ್ಲವೇ ಭೃಗುವಿನ ಭಾರ್ಯೆಯೋ" ಎಂದು ಚಿಂತಿಸುತ್ತಾ, ತಿರುಗಿ ಅಗ್ನಿಯನ್ನು ನೋಡಿ "ಓ ಅಗ್ನಿಪುರುಷಾ! ನೀನಾದರೋ ಸಮಸ್ತಭೂತಗಳೊಳಗೂ ನಿತ್ಯವಾಸಮಾಡುತ್ತಾ, ಅವರ ಪುಣ್ಯಪಾಪಗಳಿಗೆ ಸಾಕ್ಷಿಯಂತಿರುವೆ. ನೀನು ಪ್ರಕೃಷ್ಟವಾದ ಜ್ಞಾನವುಳ್ಳವನು. ನಿನಗೆ ತಿಳಿದುದನ್ನು ಸತ್ಯವಾಗಿ ಹೇಳು. ಈಕೆಯೇನೋ ಮೊದಲು ನನ್ನ ಪತ್ನಿ! ಭೃಗುವು ಈ ಸುಂದರಿಯನ್ನು ಅಕ್ರಮವಾಗಿ ಅಪಹರಿಸಿಕೊಂಡು ಹೋಗಿರುವನು. ಇವಳು ನಿಜವಾಗಿ ನನ್ನ ಭಾರ್ಯೆಯಲ್ಲವೇ? ನೀನೇ ಹೇಳು. ನಿನ್ನ ಅಭಿಪ್ರಾಯವನ್ನು ತಿಳಿದು, ನಿನ್ನ ಕಣ್ಣಮುಂದೆಯೇ ಇವಳನ್ನು ಈ ಆಶ್ರಮದಿಂದ ಎತ್ತಿಕೊಂಡು ಹೋಗುವೆನು. ಸತ್ಯವಾದ ಮಾತನ್ನು ಹೇಳು" ಎಂದು ಬಾರಿಬಾರಿಗೂ ಅಗ್ನಿಯನ್ನು ನಿರ್ಬಂಧಿಸಿ ಪ್ರಶ್ನೆಮಾಡುತಿದ್ದನು. ಇದನ್ನು ಕೇಳಿ ಅಗ್ನಿಯು, ಏನುಹೇಳಬೇಕೆಂದು ತೋರದೆ ಚಿಂತಾಕ್ರಾಂತನಾಗಿ ತನ್ನಲ್ಲಿ ತಾನು "ನಾನು ಈಗ ಸತ್ಯವನ್ನು ಹೇಳಿದರೆ ಬ್ರಹ್ಮವಿದನಾದ ಭೃಗುವು ನನ್ನಲ್ಲಿ ಕೋಪಿಸಿಕೊಂಡು ನನ್ನನ್ನು ಶಪಿಸದೆ ಬಿಡಲಾರನು. ಅಸತ್ಯವನ್ನು ನುಡಿವರೆ ನರಕದಲ್ಲಿ ಬೀಳುವೆನು. ಇದಕ್ಕೇನು ಮಾಡಲಿ?" ಎಂದು ಒಂದು ಕಡೆ ಅಸತ್ಯಕ್ಕೂ, ಮತ್ತೊಂದುಕಡೆ ಭೃಗುಶಾಪಕ್ಕೂ ಭಯಪಡುತ್ತಾ, ಕೊನೆಗೆ ಆ ರಾಕ್ಷಸನನ್ನು ಕರೆದು ಮೆಲ್ಲಗೆ ಅವನ ಕಿವಿಯಲ್ಲಿ "ಓ ದಾನವೋತ್ತಮಾ! ಈ ಪೌಲೋಮಿಯೇನೋ ಮೊಟ್ಟಮೊದಲು ನಿನ್ನಿಂದ ವರಿಸಲ್ಪಟ್ಟವಳೇ! ಆದರೆ ಈಕೆಯನ್ನು ಶಾಸ್ತ್ರವಿಧಿಯಿಂದ ಮಂತ್ರಪೂರ್ವಕವಾಗಿ ನೀನು ವಿವಾಹವಾಗಲಿಲ್ಲ. ಆದುದರಿಂದ ಇವಳ ತಂದೆಯು ಇವಳನ್ನು ಭೃಗುವಿಗೆ ಕ್ರಮವಾಗಿ ಮದುವೆ

ಮಾಡಿಕೊಟ್ಟನು. ಯಶಸ್ವಿಯಾದ ಈಕೆಯ ತಂದೆಯು ಉತ್ತಮವರ ನಿಗೆ ಆಶೆಪಟ್ಟು, ಇವಳನ್ನು ನಿನಗೆ ಕೊಡದೆ, ನನ್ನನ್ನು ಸಾಕ್ಷಿಯಾಗಿಟ್ಟು ಕೊಂಡೇ ಯಥಾವಿಧಿಯಾಗಿ ವೇದೋಕ್ತಕರ್ಮಗಳನ್ನು ನಡೆಸಿ, ಆ ವಿವಾಹ ವನ್ನು ಬೆಳೆಸಿದನು. ಈ ರೀತಿಯಾಗಿ ಇವಳು ಆ ಭೃಗುವಿನ ಭಾರ್ಯೆ ಯೆನಿಸಿಕೊಂಡಳು. ಓ ರಾಕ್ಷಸಾ! ನಾನು ಎಂದಿಗೂ ಸುಳ್ಳಾಡುವವನಲ್ಲ. ಲೋಕದಲ್ಲಿ ಅಸತ್ಯಕ್ಕೆ ಎಂದಿಗೂ ಆದರವಿಲ್ಲ'' ಎಂದನು

ಇದು ಐದನೆಯ ಅಧ್ಯಾಯವು.

{ ಚ್ಯವನನು ಜನಿಸಿದುದು. ಆವನ ತೇಜಸ್ಸಿನಿಂದ ರಾಕ್ಷಸನು ನಶಿಸಿದುದು. ಅಗ್ನಿಗೆ ಭೃಗುವಿನ ಶಾಪವು. }

ಓ ವಿಪ್ರೋತ್ತಮಾ! ಅಗ್ನಿಯು ಹೇಳಿದ ಮಾತನ್ನು ಕೇಳಿದೊಡನೆ ಆ ರಾಕ್ಷಸನು ಹಂದಿಯ ರೂಪವನ್ನು ತಾಳಿ ಮನೋವಾಯುವೇಗಗಳಿಂದ ಆ ಸುಂದರಿಯನ್ನು ಎತ್ತಿಕೊಂಡುಹೊರಟನು. ಹೀಗೆ ರಭಸದಿಂದ ಎತ್ತಿ ಕೊಂಡು ಓಡಿಹೋಗುತ್ತಿರುವಾಗ, ಅವಳ ಗರ್ಭದಲ್ಲಿ ಬೆಳೆಯುತ್ತಿದ್ದ ಮಗುವು ಬಹುರೋಷದೊಡನೆ ಕೆಳಗೆ ಬಿದ್ದಿತು. ಹೀಗೆ ಜಾರಿಬಿದ್ದುದರಿಂದ ಆ ಶಿಶುವಿಗೆ 'ಚ್ಯವನ'ನೆಂಬ ಹೆಸರಾಯಿತು. ಸೂರ್ಯನಂತೆ ತೇಜಸ್ಸಿನಿಂದ ಜ್ವಲಿಸುತ್ತಿರುವ ಆ ಶಿಶುವಿನ ರೋಷಾಗ್ನಿಯಿಂದ ಆಗಲೇ ರಾಕ್ಷಸನು ದಹಿಸಿ ಭಸ್ಮೀಭೂತನಾಗಿ ಬಿದ್ದನು. ಪುಲೋಮೆಯೂ ಮುಕ್ತಳಾಗಿ, ಭೃಗುಕುಲಕ್ಕೆ ಆನಂದವರ್ಧಕನಾದ ತನ್ನ ಶಿಶುವನ್ನು ಎತ್ತಿಕೊಂಡು ಬಹಳ ವ್ಯಸನದಿಂದ ಮುಂದೆ ಹೊರಟಳು. ಈ ಸಂದರ್ಭದಲ್ಲಿ ಲೋಕಪಿತಾ ಮಹನಾದ, ಬ್ರಹ್ಮದೇವನು ನಿಷ್ಕಳಂಕೆಯಾದ ಆ ಭೃಗುಪತ್ನಿಯು ಕಣ್ಣೀ ರುಬಿಟ್ಟು ಅಳುತ್ತಾ ಬರುವುದನ್ನು ಕಂಡು ಕನಿಕರಗೊಂಡು, ತನಗೆ ಸೊಸೆ ಯೆನಿಸಿಕೊಂಡ ಆಕೆಯನ್ನು ಸಮಾಧಾನಪಡಿಸಿದನು. ಅದೇ ಸಮಯ ದಲ್ಲಿ ಅವಳ ಕಣ್ಣಿನಿಂದ ಪ್ರವಹಿಸಿದ ಬಾಷ್ಪಜಲವು, ಅವಳು ಹೋಗುವ ದಾರಿಯುದ್ದಕ್ಕೂ ನದಿಯರೂಪವಾಗಿ ಪ್ರವಹಿಸಿತು. ಹೀಗೆ ಆಕೆಯನ್ನು ಹಿಂಬಾಲಿಸಿ ಚ್ಯವನಾಶ್ರಮಕ್ಕೆ ಸಮೀಪವಾಗಿ ಹರಿಯುತ್ತಿರುವ ಆ ನದಿಗೆ

ಬ್ರಹ್ಮದೇವನು **'ವಧೂಸರ'**ವೆಂದು (ವಧುವಿನಸಂಗಡ ಸರಿದುಹೋದುದು) ಹೆಸರಿಟ್ಟನು. ಓ ಶೌನಕಾ! ಮಹಾತಪಸ್ವಿಯೆನಿಸಿಕೊಂಡ ಭೃಗುಪುತ್ರನಾದ ಚ್ಯವನನು ಜನಿಸಿದ ರೀತಿಯಿದು!

ಆಮೇಲೆ ಭೃಗುವು ಆಶ್ರಮಕ್ಕೆ ಬಂದು ಶಿಶುವಾದ ಚ್ಯವನನನ್ನೂ, ಅದರ ಸಮೀಪದಲ್ಲಿ ತನ್ನ ಪತ್ನಿಯಾದ ಪುಲೋಮೆಯನ್ನೂ ನೋಡಿದನು. ಇವರನ್ನು ಕಂಡೊಡನೆಯೇ ಅವನಿಗೆ ಕೋಪವುಂಟಾಯಿತು. ಆಗ ಅವನು ತನ್ನ ಪತ್ನಿಯನ್ನು ನೋಡಿ "ನೀನು ಇಲ್ಲಿರುವ ಸಂಗತಿಯೇ ಆ ರಾಕ್ಷಸನಿಗೆ ತಿಳಿಯಲು ಅವಕಾಶವಿಲ್ಲ. ನಿನ್ನ ಸಂಗತಿಯನ್ನು ಅವನಿಗೆ ಹೇಳಿದವರಾರು? ವಾಸ್ತವವನ್ನು ಹೇಳು. ಅಂತವನನ್ನು ನಾನು ಈಗಲೇ ನನ್ನ ಶಾಪಕ್ಕೆ ಗುರಿಮಾಡುವೆನು. ನನ್ನ ಶಾಪಕ್ಕೆ ಯಾವನು ತಾನೇ ಹೆದರದಿರುವನು? ಇದು ಯಾರ ತಪ್ಪು? ಬೇಗನೆ ಹೇಳು" ಎಂದನು. ಆಗ ಪುಲೋಮೆಯು ವಿನಯದಿಂದ ಪತಿಯನ್ನು ಕುರಿತು "ಮಹಾತ್ಮಾ! ಅಗ್ನಿಯು ಇದನ್ನು ತಿಳಿಸಿದನು. ಆದರಮೇಲೆ ರಾಕ್ಷಸನು ಕುರರಿಯಂತೆ ದೈನ್ಯದಿಂದ ಕೂಗುತ್ತಿರುವ ನನ್ನನ್ನು ಬಲಾತ್ಕಾರದಿಂದ ಎತ್ತಿಕೊಂಡು ಹೋದನು. ಅವನು ಓಡುತ್ತಿರುವಾಗ ಈ ಶಿಶುವು ಜನಿಸಿತು. ಈ ಪುತ್ರನ ತೇಜಸ್ಸಿನಿಂದಲೇ ನಾನು ಆ ರಾಕ್ಷಸನ ಕೈಯಿಂದ ಬಿಡಿಸಲ್ಪಟ್ಟೆನು. ಆ ರಾಕ್ಷಸನು ದಗ್ಧನಾಗಿ ಸತ್ತನು" ಎಂದಳು. ಮೊದಲೇ ಸುಲಭಕೋಪಿಯಾದ ಆ ಭೃಗುವು ಈ ಮಾತನ್ನು ಕೇಳಿದೊಡನೆ ಮತ್ತಷ್ಟು ಕುಪಿತನಾಗಿ "ಓ ಅಗ್ನೀ! ನೀನು ಸರ್ವಭಕ್ಷಿಯಾಗು" ಎಂದು ಶಪಿಸಿದನು.

ಇದು ಆರನೆಯ ಅಧ್ಯಾಯವು.

---

(ಅಗ್ನಿಯು ಕೋಪದಿಂದ ಭೃಗುವಿಗೆ ಕಾಣದೆ ಮರೆಸಿಕೊಂಡುದು. ಬ್ರಹ್ಮನು ಸಮಾಧಾನವನ್ನು ಹೇಳಿದಮೇಲೆ ಅಗ್ನಿಯು ಸಂತುಷ್ಟನಾದುದು.)

ಭೃಗುವು ಶಾಪವನ್ನು ಕೊಟ್ಟಕೂಡಲೆ, ಅಗ್ನಿಯು ಕೋಪದಿಂದ "ಓ ವಿಪ್ರೋತ್ತಮಾ! ನೀನು ವಿಮರ್ಶೆಮಾಡದೆ ಹೀಗೆ ಶಾಪವನ್ನು

ಕೊಟ್ಟಿರುವೆ. ನಾನಾದರೋ ಧರ್ಮಕ್ಕಾಗಿಯೇ ಪಾಡುಪಡತಕ್ಕವನು. ಸತ್ಯವನ್ನೇ ನುಡಿಯತಕ್ಕವನು. ಹೀಗಿರುವಾಗ ಇತರರು ಬಂದು ನನ್ನಲ್ಲಿ ಏನಾದರೂ ಕೇಳಿದರೆ, ನಿಷ್ಪಕ್ಷಪಾತವಾಗಿ ಸತ್ಯವನ್ನೇ ಹೇಳಬೇಕಲ್ಲವೆ? ಅದರಂತೆ ನಾನು ವಾಸ್ತವವನ್ನು ನುಡಿದೆನು. ಇದರಲ್ಲಿ ತಪ್ಪೇನು? ಸಾಕ್ಷಿಯಾಗಿದ್ದವನು ಯಾವನೇ ಆದರೂ, ತಾನು ಕಣ್ಣಾರೆಕಂಡ ವಿಷಯವನ್ನು ಕುರಿತು ಬೇರೊಬ್ಬರು ಪ್ರಶ್ನೆಮಾಡಿದಾಗ, ತನಗೆ ತಿಳಿದ ವಿಷಯವನ್ನು ಮರೆಸಿ, ಬೇರೆ ವಿಧವಾದ ತಪ್ಪುಸಾಕ್ಷ್ಯವನ್ನು ಹೇಳಿದರೆ, ಅಂತವನು ತನ್ನ ಹಿಂದುಮುಂದಿನ ಏಳೇಳು ತಲೆಮೊರೆಗಳನ್ನೂ ಕೆಡಿಸುವನು. ತತ್ವವನ್ನು ತಿಳಿದಿದ್ದಾಗಲೂ ಒಬ್ಬನು ಆ ವಿಷಯವಾಗಿ ಮಾತನ್ನೇ ಆಡದೆ ಸುಮ್ಮನಿದ್ದರೂಕೂಡ ಅವನಿಗೂ ಅದೇ ಪಾಪವು ಸಂಭವಿಸುವುದು. ಇದಕ್ಕೆ ಸಂದೇಹವಿಲ್ಲ. ಈಗ ನನಗೂ ನಿನ್ನನ್ನು ಶಪಿಸುವುದಕ್ಕೆ ಶಕ್ತಿಯುಂಟು. ಹಾಗಿದ್ದರೂ ಬ್ರಾಹ್ಮಣರು ನನಗೆ ಮಾನ್ಯರಾದುದರಿಂದ ನಾನು ಸುಮ್ಮನಿರುವೆನು. ಓ ಬ್ರಾಹ್ಮಣಾ! ನಿನಗೆ ತಿಳಿದಿದ್ದರೂ ಈಗ ನಾನು ಒಂದು ವಿಷಯವನ್ನು ಹೇಳಬೇಕಾಗಿದೆ. ಇದು ನಿನ್ನ ನೆನಪಿನಲ್ಲಿರಲಿ! ನಾನು ನನ್ನ ತಪಶ್ಶಕ್ತಿಯಿಂದ ಅನೇಕರೂಪಗಳಾಗಿ ವಿಭಾಗಿಸಿಕೊಂಡು, ಅಗ್ನಿಹೋತ್ರಗಳಲ್ಲಿಯೂ, ಸತ್ರಯಾಗಗಳಲ್ಲಿಯೂ ವಿವಾಹವೇ ಮೊದಲಾದ ಗೃಹಕಾರ್ಯಗಳಲ್ಲಿಯೂ, ಇತರ ಯಾಗಗಳಲ್ಲಿಯೂ ಪೂಜಿಸಲ್ಪಡುವೆನು. ವೇದೋಕ್ತವಿಧಿಯಿಂದ ನನ್ನಲ್ಲಿ ಹೋಮಮಾಡಿದ ಹವಿಸ್ಸಿನಿಂದ ಸಮಸ್ತದೇವತೆಗಳೂ, ಪಿತೃಗಳೂ ತೃಪ್ತಿಹೊಂದುವರು. ಸೋಮರಸ, ಹಾಲು, ತುಪ್ಪ ಮುಂತಾಗಿ ಹೋಮಮಾಡತಕ್ಕ ಪವಿತ್ರವಾದ ಹವಿರ್ದ್ರವ್ಯಗಳೇ, ದೇವತೆಗಳ ಮತ್ತು ಪಿತೃಗಳ ರೂಪದಿಂದ ಪರಿಣಮಿಸುವುವು. ದರ್ಶ, ಪೌರ್ಣಮಾಸಯಾಗಗಳೂ ಕ್ರಮವಾಗಿ ಪಿತೃಗಳ ಮತ್ತು ದೇವತೆಗಳ ಪ್ರೀತ್ಯರ್ಥವಾಗಿ ಸಮವಾಗಿ ನಡೆಸಲ್ಪಡುವುವು. ಆದುದರಿಂದ ದೇವತೆಗಳೇ ಪಿತೃಗಳು! ಪಿತೃಗಳೇ ದೇವತೆಗಳು! ಪುಣ್ಯಕಾಲಗಳಲ್ಲಿ ಅವರು ಒಟ್ಟಿಗೆ ಕಲೆತೂ, ಪ್ರತ್ಯೇಕವಾಗಿಯೂ ಕಾಣಿಸುತ್ತಿರುವರು. ಅವರೆಲ್ಲರೂ ನನ್ನ ಮೂಲಕವಾಗಿ ಕೊಟ್ಟುದನ್ನೇ ಭುಜಿಸುವರು. ದೇವತೆಗಳೂ, ಪಿತೃಗಳೂ ನನ್ನನ್ನು ತಮಗೆ ಮುಖವೆಂದು ಹೇಳುವರು. ನನ್ನ ಮೂಲಕವಾ

ಗಿಯೇ ಅಮಾವಾಸ್ಯೆಯಲ್ಲಿ ಪಿತೃಗಳಿಗೂ, ಪೂರ್ಣಿಮೆಯಲ್ಲಿ ದೇವತೆಗಳಿಗೂ ಹೋಮಮಾಡಲ್ಪಡುವುದು. ಹಾಗೆ ಹೋಮಮಾಡಿದ ಹವಿಸ್ಸನ್ನು ನನ್ನ ಮೂಲಕ (ಅಗ್ನಿಮುಖ) ವಾಗಿಯೇ ಅವರು ತೆಗೆದು ಭುಜಿಸುವರು. ಹೀಗೆ ದೇವತೆಗಳಿಗೂ, ಪಿತೃಗಳಿಗೂ ಮುಖವೆನಿಸಿಕೊಂಡ ನಾನು ಸರ್ವಭಕ್ಷಿ ಯೆಂದರೆ ಹೇಗೆ ಒಪ್ಪುವುದು?" ಎಂದು ಹೇಳಿ, ಸ್ವಲ್ಪಕಾಲದವರೆಗೆ ತನ್ನಲ್ಲಿತಾನೇ ಆಲೋಚನೆಮಾಡಿ, ಕೊನೆಗೆ ಕೋಪದಿಂದ ಇದ್ದಕ್ಕಿದ್ದಹಾಗೆ ತನ್ನನ್ನು ತಾನು ಮರೆಸಿಬಿಟ್ಟುಕೊಂಡನು. ಆಗ ಏಕಕಾಲದಲ್ಲಿ ಅಲ್ಲಲ್ಲಿನ ಬ್ರಾಹ್ಮಣರ ಅಗ್ನಿಹೋತ್ರಗಳಲ್ಲಿಯೂ, ಸತ್ರಯಾಗಗಳಲ್ಲಿಯೂ ಇತರ ಯಾಗಗಳಲ್ಲಿಯೂ, ಅಗ್ನಿಯೇ ಇಲ್ಲದಂತಾಯಿತು.

ಹೀಗೆ ಅಗ್ನಿಯು ಕಣ್ಮರೆಯಾದೊಡನೆ, ವೇದೋಕ್ತವಾಗಿ ನಡೆಸಬೇಕಾದ ಓಂಕಾರ, ವಷಟ್ಕಾರ, ಸ್ವಧಾ, ಸ್ವಾಹಾ ಎಂಬಿವೊಂದನ್ನೂ ನಡೆಸಲು ಸಾಧ್ಯವಿಲ್ಲದೆ, ಪ್ರಜೆಗಳೆಲ್ಲರೂ ಬಹಳ ದುಃಖಿತರಾದರು. ಋಷಿಗಳೆಲ್ಲರೂ ಬೆಚ್ಚರಬಿದ್ದು ದೇವತೆಗಳ ಬಳಿಗೆ ಹೋಗಿ "ಓ ಪುಣ್ಯಾತ್ಮರೇ! ಅಗ್ನಿಯಿಲ್ಲದೆ ಯಾಗಾದಿಕ್ರಿಯೆಗಳೆಲ್ಲವೂ ನಿಂತುಹೋಗಿವೆ. ತ್ರೈಲೋಕ್ಯವೂ ತತ್ತಳಿಸುವಂತಾಗಿದೆ. ಮುಂದೆ ಇದಕ್ಕೆ ಏನುಪಾಯವನ್ನು ಮಾಡಬೇಕೋ ಅದನ್ನು ನೀವು ಶೀಘ್ರದಲ್ಲಿ ಯೋಚಿಸಬೇಕು" ಎಂದರು. ಇದನ್ನು ಕೇಳಿ ದೇವತೆಗಳು ಆ ಋಷಿಗಳನ್ನೂ ಸಂಗಡ ಕರೆದುಕೊಂಡು ಬ್ರಹ್ಮದೇವನ ಬಳಿಗೆ ಹೋಗಿ, ನಡೆದ ಸಂಗತಿಯನ್ನು ಆಮೂಲಾಗ್ರವಾಗಿ ಹೇಳತೊಡಗಿ "ಮಹಾಭಾಗಾ! ಭೃಗುಮಹರ್ಷಿಯು ಏನೋ ಒಂದು ಕಾರಣಕ್ಕಾಗಿ ಅಗ್ನಿಯನ್ನೇನೋ ಶಪಿಸಿಬಿಟ್ಟನು. ದೇವತೆಗಳಿಗೆ ಮುಖವೆನಿಸಿಕೊಂಡು, ಸಮಸ್ತಲೋಕಗಳಲ್ಲಿಯೂ ಯಾಗರೂಪವಾಗಿ ಕೊಡುವ ದೇವಭಾಗಗಳನ್ನೆಲ್ಲ ಅವರೆಲ್ಲರಿಗಿಂತಲೂ ಮೊದಲು ಭುಜಿಸಬೇಕಾದ ಅಗ್ನಿಯೇ ಸರ್ವಭಕ್ಷಕನೆನಿಸಿದರೆ ನಮ್ಮ ಗತಿಯೇನು?" ಎಂದರು. ಆಗ ಬ್ರಹ್ಮದೇವನು ಸಮಸ್ತಕ್ಕೂ ಕಾರಣನೂ, ಅವ್ಯಯನೂ ಆದ ಅಗ್ನಿಯನ್ನು ಉಪಾಯದಿಂದ ಕರೆಸಿ, ಮೃದುವಾಕ್ಯಗಳಿಂದ ಅವನನ್ನು ಕುರಿತು "ಓ ವೀತಿಹೋತ್ರಾ! ಸಮಸ್ತಲೋಕಗಳಿಗೂ ನೀನೇ ಆದಿಯೂ, ಅಂತ್ಯವೂ

ಆಗಿರುವೆ. ಎಂದರೆ, ನೀನೇ ಲೋಕಕರ್ತನು. ಮೂರು ಲೋಕಗಳಲ್ಲಿ ನಡೆ ಸಬೇಕಾದ ಕರ್ಮಗಳೆಲ್ಲವನ್ನೂ ನೀನೇ ನಡೆಸುತ್ತ, ಆ ಕರ್ಮಗಳಮೂಲಕ ವಾಗಿ ಆ ಲೋಕಗಳಿಗೆಲ್ಲ ನೀನೇ ಧಾರಕನು ಹೀಗೆ ನೀನು ಸಮಸ್ತಲೋಕ ಗಳಿಗೂ ಈಶ್ವರನೆನಿಸಿಕೊಂಡಿರುವುದರಿಂದ, ಕರ್ಮಗಳಿಗೆ ಯಾವ ಲೋಪ ವೂ ಬಾರದಹಾಗೆ ವರ್ತಿಸಬೇಕು. ಹುತಾಶನಾ! ಎಲ್ಲವನ್ನೂ ನಡೆಸ ತಕ್ಕವನು ನೀನೇ ಆಗಿರುವಾಗಲೂ ಹೀಗೇಕೆ ತಿಳಿವಳಿಕೆಯಿಲ್ಲದವನಂತಿ ರುವೆ? ನೀನೇ ಲೋಕಗಳನ್ನೆಲ್ಲ ಪವಿತ್ರಮಾಡತಕ್ಕನು. ಸಮಸ್ತ ಪ್ರಾಣಿ ಗಳಿಗೂ ನೀನೇ ಗತಿ! ಭೃಗುವು ಕೊಟ್ಟ ಶಾಪಕ್ಕಾಗಿ ನೀನು ಅಷ್ಟೇನೂ ಚಿಂತಿಸಬೇಕಾದುದಿಲ್ಲ. ಆ ಋಷಿಶಾಪವೇನೋ ತಪ್ಪಲಾರದು. ಹಾಗಿ ದ್ದರೂ ನಿನ್ನ ಶರೀರದ ಸರ್ವಭಾಗಗಳಿಂದಲೂ ನೀನು ಎಲ್ಲವನ್ನೂ ಭಕ್ಷಿಸ ತಕ್ಕವನಾಗಲಾರೆ. ನಿನ್ನ ಅಪಾನ (ಹಿಂಭಾಗ) ದಲ್ಲಿರುವ ಜ್ವಾಲೆಗಳು ಮಾ ತ್ರ ಎಲ್ಲವನ್ನೂ ಭಕ್ಷಿಸತಕ್ಕುದಾಗಿರಲಿ. ಮಾಂಸಭಕ್ಷಕ ಪ್ರಾಣಿದೇಹದಲ್ಲಿ ರುವ ಅಗ್ನಿಯೇ ಸಮಸ್ತವನ್ನೂ ಭಕ್ಷಿಸತಕ್ಕುದಾಗಲಿ. ಇದಲ್ಲದೆ ಸೂರ್ಯ ಕಿರಣಗಳ ಸ್ಪರ್ಶಮಾತ್ರದಿಂದ ಎಲ್ಲವೂ ಪರಿಶುದ್ಧವಾಗಿ ಎಣಿಸಲ್ಪಡುವಂತೆ, ನಿನ್ನ ಜ್ವಾಲೆಗಳಿಂದ ದಹಿಸಲ್ಪಟ್ಟಮಾತ್ರಕ್ಕೆ ಅವೆಲ್ಲವೂ ಪರಿಶುದ್ಧಗಳೇ ಆಗು ವುವು. ಅಗ್ನೀ! ನೀನು ಮಹಾ ತೇಜಸ್ವಿ! ನೀನೇ ಎಲ್ಲರ ವಾಕ್ಕುಗಳಲ್ಲಿಯೂ ನೆಲೆಗೊಂಡಿರುವೆ. ಆದುದರಿಂದ ಭೃಗುಮುನಿಯು ಶಾಪವಾಕ್ಯವೂ ನಿನ್ನಿಂ ದಲೇ ಪ್ರೇರಿತವಾಗಿ ಬಂದುದು. ಆದುದರಿಂದ ಆ ಶಾಪವನ್ನು ನೀನು ಸುಳ್ಳು ಮಾಡಿದರೆ ನಿನ್ನ ಶಕ್ತಿಯನ್ನೇ ನೀನು ನಿಗ್ರಹಿಸಿದಂತಾಗುವುದು. ನೀನು ಅದನ್ನು ಸತ್ಯವಾಗಿ ಮಾಡಿ ಗೌರವವನ್ನು ಕೊಡಬೇಕು. ಸರ್ವಸಮರ್ಥ ನಾದ ನಿನಗೆ ಇದೊಂದೂ ಅಸಾಧ್ಯವಲ್ಲ. ನಿನ್ನ ಮುಖವಾಗ ದೇವತೆಗಳಿಗೆ ಸಲ್ಲಬೇಕಾದ ಭಾಗವನ್ನೂ, ನಿನ್ನ ಭಾಗವನ್ನೂ ಅಂಗೀಕರಿಸು" ಎಂದನು ಅಗ್ನಿಯು ಬ್ರಹ್ಮದೇವನ ಮಾತಿಗೆ ಒಪ್ಪಿ, ಅದರಂತೆ ನಡೆಸುವುದಾಗಿ ಹೇಳಿ ಹೊರಟುಹೋದನು. ದೇವತೆಗಳೂ, ಋಷಿಗಳೂ ಸಂತುಷ್ಟರಾಗಿ ಅಲ್ಲಿಂದ ಹಿಂತಿರುಗಿದರು. ಋಷಿಗಳು ಮೊದಲಿನಂತೆ ಕರ್ಮವನ್ನಾರಂಭಿಸಿ ನಡೆಸಿದರು. ಆಕಾಶದಲ್ಲಿ ದೇವತೆಗಳೂ, ಲೋಕದಲ್ಲಿ ಸಮಸ್ತ ಪ್ರಾಣಿಗಳೂ ಸಂತೋಷ ಹೊಂದಿದುವು. ಅಗ್ನಿಯೂ ಮನಸ್ಸಿನಲ್ಲಿದ್ದ ಕಲ್ಮಷವನ್ನು ಬಿಟ್ಟು ಸಂತುಷ್ಟಿ

ಹೊಂದಿದನು. ಹೀಗೆ ಭೃಗುವಿನಿಂದ ಅಗ್ನಿಗೆ ಶಾಪವುಂಟಾಯಿತು. ಈ ಅಗ್ನಿಶಾಪಕ್ಕೆ ಸಂಬಂಧಪಟ್ಟ ಕಥೆಯನ್ನೂ, ಪುಲೋಮನೆಂಬ ರಾಕ್ಷಸನ ನಾಶವನ್ನೂ, ಚ್ಯವನನ ಉತ್ಪತ್ತಿಕ್ರಮವನ್ನೂ ನಿನಗೆ ತಿಳಿಸಿದುದಾಯಿತು

ಇದು ಏಳನೆಯ ಅಧ್ಯಾಯವು.



{ ರುರುಚರಿತ್ರವು. ಮೇನಕೆಯ ಮಗಳಾದ ಪ್ರಮದ್ವತಿಯನ್ನು ರುರುವು ವಿವಾಹವಾದುದು. ಪ್ರಮದ್ವತಿಯನ್ನು ಹಾವು ಕಚ್ಚಿದುದು. ರುರುವಿನ ದುಃಖವು. }

ಓ ಬ್ರಾಹ್ಮಣೋತ್ತಮಾ! ಭೃಗುಪುತ್ರನಾದ ಚ್ಯವನನಿಗೆ ಸುಕನ್ಯೆಯಲ್ಲಿ ಪ್ರಮತಿಯೆಂಬ ಕುಮಾರನು ಹುಟ್ಟಿದನು. ಈತನು ಮಹಾತೇಜಸ್ವಿ. ಈ ಪ್ರಮತಿಗೆ ಘೃತಾಚಿಯೆಂಬವಳಲ್ಲಿ ರುರುವೆಂಬವನು ಜನಿಸಿದನು. ರುರುವಿಗೆ ಪ್ರಮದ್ವತಿಯೆಂಬವಳಲ್ಲಿ ಶುನಕನೆಂಬ ಪುತ್ರನು ಹುಟ್ಟಿದನು. ವಿಶೇಷ ಸತ್ವಗುಣಸಂಪನ್ನನಾದ ಶುನಕನು, ಭೃಗುವಂಶಕ್ಕೆಲ್ಲಾ ಆನಂದಕರನಾಗಿ, ತೀವ್ರತಪಸ್ಸನ್ನು ಮಾಡಿ, ಅದರಿಂದ ಶಾಶ್ವತ ಕೀರ್ತಿಯನ್ನು ಪಡೆದನು. ಅಪಾರತೇಜಸ್ಸುಳ್ಳ ಆ ರುರುವಿನ ಚರಿತ್ರವನ್ನು ಇನ್ನೂ ವಿಸ್ತರಿಸಿ ಹೇಳುವೆನು ಕೇಳು. ಪೂರ್ವದಲ್ಲಿ ತಪಸ್ವಿಯೂ ವಿದ್ಯಾವಂತನೂ ಆದ ಸ್ಥೂಲಕೇಶನೆಂಬ ಮಹರ್ಷಿಯೊಬ್ಬನಿದ್ದನು. ಅವನು ಸಮಸ್ತ ಪ್ರಾಣಿಗಳಿಗೂ ಹಿತವನ್ನು ಬಯಸತಕ್ಕವನು. ಈ ಕಾಲದಲ್ಲಿಯೇ ವಿಶ್ವಾವಸುವೆಂಬ ಒಬ್ಬ ಗಂಧರ್ವರಾಜನಿಂದ ಮೇನಕೆಯಲ್ಲಿ ಗರ್ಭವುಂಟಾಗಲು, ಆ ಅಪ್ಸರಸಿಯು ಪ್ರಸವಕಾಲದಲ್ಲಿ ಸ್ಥೂಲಕೇಶ ಮುನಿಯ ಆಶ್ರಮದ ಬಳಿಯಲ್ಲಿ ಗರ್ಭವನ್ನು ಬಿಟ್ಟುಹೋದಳು. ಮೇನಕೆಯು ನಿರ್ದಯಳಾಗಿ, ನಾಚಿಕೆಯೂ ಇಲ್ಲದೆ ಆ ಎಳಗೂಸನ್ನು ಆ ಆಶ್ರಮಸಮೀಪದ ನದೀತೀರದಲ್ಲಿ ಬಿಟ್ಟು ಹೊರಟುಹೋಗಲು, ಮಹಾತೇಜಸ್ಸಂಪನ್ನನಾದ ಸ್ಥೂಲಕೇಶಮುನಿಯು ಒಮ್ಮೆ ಸಂಚಾರಾರ್ಥವಾಗಿ ಬಂದಾಗ ನಿರ್ಜನವಾದ ನದೀತೀರದಲ್ಲಿ ದಿಕ್ಕಿಲ್ಲದ ಆ ಹೆಣ್ಣುಮಗುವು ದೇವಕನ್ಯೆಯಂತೆ ಅದ್ಭುತ ಕಾಂತಿಯಿಂದ ಬೆಳಗುತ್ತಿರುವುದನ್ನು ಕಂಡನು. ಪರಮದಯಾಳುವಾದ

ಆ ಮಹರ್ಷಿಯು, ಆ ಮಗುವನ್ನು ಆಶ್ರಮಕ್ಕೆ ತಂದು ಪೋಷಿಸಿ ಬೆಳೆಸಿದನು. ಆ ಶಿಶುವಿನ ಆಟಪಾಟಗಳನ್ನೂ, ನಡೆನುಡಿಗಳನ್ನೂ ಕೇಳಿ ಆನಂದಿಸುತಿದ್ದನು. ಆ ಶಿಶುವಿಗೆ ಶಾಸ್ತ್ರೀಯವಾಗಿ ಜಾತಕರ್ಮ ಮೊದಲಾದ ಸಂಸ್ಕಾರಗಳೆಲ್ಲವನ್ನೂ ನಡೆಸಿದನು. ಆ ಕನ್ಯೆಯು ಸ್ವಭಾವದಲ್ಲಿಯೂ, ರೂಪದಲ್ಲಿಯೂ, ಗುಣಗಳಲ್ಲಿಯೂ ಲೋಕದ ಸ್ತ್ರೀಯರೆಲ್ಲರಿಗೂ ಮೇಲು ಪಙ್ಕ್ತಿಯಂತಿದ್ದು, ಸ್ತ್ರೀಯರಲ್ಲಿ ಶ್ರೇಷ್ಠಳೆನಿಸಿಕೊಂಡುದುದರಿಂದ, ಆ ಮಹರ್ಷಿಯು ಪ್ರಮದ್ವತಿಯೆಂದೇ ಅವಳಿಗೆ ಹೆಸರಿಟ್ಟನು. ಒಮ್ಮೆ ಈ ಕನ್ಯೆಯು ಆಶ್ರಮದಲ್ಲಿರುವಾಗ ರುರುವು ಅವಳ ರೂಪವನ್ನು ನೋಡಿ ಮನ್ಮಥವಿಕಾರಕ್ಕೊಳಗಾದನಂತೆ! ಆತನು ತನ್ನ ಅಂತರಂಗಮಿತ್ರರ ಮೂಲಕವಾಗಿ ತನ್ನ ಆಶೆಯನ್ನು ತನ್ನ ತಂದೆಯಾದ ಪ್ರಮತಿಗೆ ತಿಳಿಸಲು, ಪ್ರಮತಿಯು ಸ್ಥೂಲಕೇಶಮಹರ್ಷಿಯ ಬಳಿಗೆ ಬಂದು, ತನ್ನ ಮಗನಿಗೆ ಕನ್ಯೆಯನ್ನು ಕೊಡಬೇಕೆಂದು ಯಾಚಿಸಿದನು. ಆ ಮಹರ್ಷಿಯು "ಹಾಗೆಯೇ ಆಗಲೆಂದು" ಭಾಷೆಯನ್ನು ಕೊಟ್ಟು, ಮುಂದಿನ ಹಸ್ತನಕ್ಷತ್ರದಿನದಲ್ಲಿಯೇ ವಿವಾಹವನ್ನು ನಡೆಸುವುದಾಗಿ ನಿಶ್ಚಯಿಸಿದರು. ಆಮೇಲೆ ನಾಲ್ಕಾರು ದಿನಗಳು ಕಳೆದು ವಿವಾಹದಿನವು ಸಮಿಾಪಿಸಿದಸಂದರ್ಭದಲ್ಲಿ, ಒಂದಾನೊಂದು ದಿನ ಆ ಪ್ರಮದ್ವತಿಯೆಂಬ ಕನ್ಯೆಯು ತನ್ನ ಸಖಿಯರೊಡನೆ ಆಶ್ರಮದ ತೋಟಗಳಲ್ಲಿ ಆಟವಾಡುತಿದ್ದಳು. ಹೀಗೆ ಆಟದ ಸಂಭ್ರಮದಲ್ಲಿ ಸುತ್ತುತ್ತಿರುವಾಗ, ಅವಳ ಕಾಲಿನ ಬಳಿ ಅಡ್ಡಲಾಗಿ ಮಲಗಿದ್ದ ಒಂದಾನೊಂದು ಸರ್ಪವನ್ನು ತುಳಿದುಬಿಟ್ಟಳು. ಈಕೆಗೂ ಮೃತ್ಯುವು ಸಮಿಾಪಿಸಿದ್ದುದರಿಂದ ಕಾಲಪ್ರೇರಿತೆಯಾಗಿ ಆ ಸರ್ಪವನ್ನು ಮೆಟ್ಟಲು, ಮೃತ್ಯುಪ್ರೇರಿತವಾದ ಆ ಸರ್ಪವು ತನ್ನ ವಿಷದ ಹಲ್ಲುಗಳಿಂದ ಅವಳ ಮೈಯನ್ನು ಕಚ್ಚಿಬಿಟ್ಟಿತು. ಒಡನೆಯೇ ಅವಳ ದೇಹವು ವಿವರ್ಣವಾಯಿತು. ಮುಖದ ಕಳೆಯು ತಪ್ಪಿತು. ಮೈಮೇಲಿನ ವಸ್ತ್ರಾಭರಣಗಳೆಲ್ಲವೂ ಕದಲಿದುವು. ಥಟ್ಟನೆ ಪ್ರಜ್ಞೆತಪ್ಪಿ ನೆಲದಮೇಲೆ ಬಿದ್ದಳು. ದರ್ಶನೀಯವಾದ ರೂಪಸಂಪತ್ತುಳ್ಳ ಆ ಅಬಲೆಯು, ಬಿಚ್ಚಿದ ತಲೆಯೊಡನೆ, ನೋಡುವುದಕ್ಕೆ ಅಸಹ್ಯವಾದ ರೂಪದಿಂದ ನಿಶ್ಚೇತನಳಾಗಿ, ಬಂಧುಗಳಿಗೆಲ್ಲಾ ಕೇವಲ ದುಃಖಕರವಾದ ಸ್ಥಿತಿಯಲ್ಲಿದ್ದಳು. ಆ ಪರಮ ಸುಂದರಿಯು ಸರ್ಪ

ವಿಷದಿಂದ ಮೃತಿಹೊಂದಿ ನೆಲದಮೇಲೆ ಬಿದ್ದಿದ್ದಾಗಲೂ ಸಹಜವಾದ ಅವಳ ರೂಪವು ನೋಡುವವರ ಮನಸ್ಸನ್ನು ಆಕರ್ಷಿಸುವಂತದಾಗಿತ್ತು. ತಾವರೆ ಹೂವಿನಂತೆ ದೇಹವರ್ಣವುಳ್ಳ ಆ ಕನ್ಯೆಯು ಭೂಮಿಯಮೇಲೆ ಬಿದ್ದು ಹೊರಳಾಡುತ್ತಿದ್ದುದನ್ನು ಆಕೆಯ ತಂದೆಯೂ, ಇತರ ತಾಪಸರೂ ನೋಡಿದರು. ಇಷ್ಟರಲ್ಲಿ ಸ್ವಸ್ತಿ, ಆತ್ರೇಯ, ಮಹಾಜಾನು, ಕುಶಿಕ, ಶಂಖಮೇಖಲ, ಉದ್ದಾಲಕ, ಕಠ, ಶ್ವೇತ, ಭರದ್ವಾಜ, ಕೌಣಕುತ್ಸ, ಆರ್ಷ್ಟಿಷೇಣ, ಗೌತಮ, ಪ್ರಮತಿ, ಪ್ರಮತಿಪುತ್ರನಾದ ರುರು, ಮುಂತಾಗಿ ವನವಾಸಿಗಳಾದ ಇತರ ಬ್ರಾಹ್ಮಣೋತ್ತಮರೆಲ್ಲರೂ ಬಹಳ ದುಃಖಿತರಾಗಿ ಅಲ್ಲಿಗೆ ಬಂದು ಸೇರಿದರು. ಸರ್ಪದಷ್ಟಳಾಗಿ ಆ ಕನ್ಯೆಯು ಮೃತಿಹೊಂದಿ ಬಿದ್ದಿರುವುದನ್ನು ನೋಡಿ ದುಃಖದಿಂದ ಎಲ್ಲರೂ ರೋದಿಸತೊಡಗಿದರು. ರುರುವಾದರೋ ಆ ಸ್ಥಿತಿಯನ್ನು ನೋಡಿ ದುಃಖವನ್ನು ಸಹಿಸಲಾರದೆ, ಆ ಸ್ಥಳವನ್ನು ಬಿಟ್ಟು ಹೊರಕ್ಕೆ ಬಂದುಬಿಟ್ಟನು. ಉಳಿದ ಬ್ರಾಹ್ಮಣರೆಲ್ಲರೂ ಆ ಮೃತಶರೀರವನ್ನು ಸುತ್ತಿ ಅಲ್ಲಿಯೇ ಕಾದಿದ್ದರು.

ಇದು ಎಂಟನೆಯ ಅಧ್ಯಾಯವು.

---

(ದೇವದೂತನೊಬ್ಬನು ಬಂದು ಹೇಳಿದ ಮೇರೆಗೆ, ರುರುವು ತನ್ನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಕೊಟ್ಟು ಪ್ರಮದ್ವತಿಯನ್ನು ಬದುಕಿಸಿ ಆಮೇಲೆ ಅವಳನ್ನು ವಿವಾಹವಾದುದು.)

ಮಹಾತ್ಮರಾದ ಆ ಬ್ರಾಹ್ಮಣರೆಲ್ಲರೂ ಮೃತಶರೀರದ ಮುಂದೆ ಕುಳಿತಿರುವಾಗಲೇ, ರುರುವು ಅಲ್ಲಿಂದ ಹೊರಗೆ ಬಂದು, ದುರ್ಗಮವಾದ ಒಂದು ಅಡವಿಯನ್ನು ಪ್ರವೇಶಿಸಿ, ನಿರ್ಜನಸ್ಥಳದಲ್ಲಿ ಕುಳಿತು, ಕೇಳುವವರಿಗೆಲ್ಲ ಕನಿಕರ ಹುಟ್ಟುವಂತೆ ವಿಲಪಿಸುತ್ತಾ, ತನ್ನ ಮೋಹಪಾತ್ರಳಾದ ಪ್ರಮದ್ವತಿಯನ್ನು ನೆನೆಸಿಕೊಂಡು ಧಾರೆಧಾರೆಯಾಗಿ ಕಣ್ಣೀರುಬಿಡುತ್ತಾ ಹೀಗೆಂದು ವಿಲಪಿಸುವನು. "ಅಯ್ಯೋ! ಲತಾಂಗಿಯಾದ ಆ ಸುಂದರಿ! ಪೂರ್ಣಚಂದ್ರನಂತೆ ಮುಖವುಳ್ಳ ಆ ಮೋಹನಾಂಗಿ! ನನ್ನ ದುಃಖವನ್ನು ಮೇಲೆ

ಮೇಲೆ ಹೆಚ್ಚಿಸುತ್ತಾ ನನ್ನ ಪ್ರಾಣವನ್ನೂ ತನ್ನ ಸಂಗಡ ಎಳೆದುಕೊಂಡು ಹೋದಂತೆ ನೆಲದಮೇಲೆ ಮಲಗಿರುವಳಲ್ಲಾ! ಅಥವಾ ವಿಸ್ತಾರವಾದ ನಿತಂಬವುಳ್ಳ ಕಮಲದಳಾಕ್ಷಿಯಾದ ಆ ಕನ್ಯೆಯು, ತಾನು ಸಾಯುವಾಗಲೇ, ನನ್ನ ಪ್ರಾಣಗಳನ್ನೂ ಎಳೆದುಕೊಂಡು ಹೋಗಿದ್ದರೆ ಒಳ್ಳೆಯದಾಗಿತ್ತು. ಆದರೆ, ಆಗ ನನ್ನ ತಂದೆತಾಯಿಗಳಿಗೂ ಜ್ಞಾತಿಗಳಿಗೂ ಸಂತತಿಯಿಲ್ಲದುದರಿಂದ ಪಿಂಡವನ್ನಿಡುವುದು ತಪ್ಪಿಹೋಗುವುದು. ನನಗೂ, ನನ್ನ ಬಾಂಧವರಿಗೂ ಲೋಕದಲ್ಲಿ ಇದಕ್ಕಿಂತಲೂ ಬೇರೆ ದುಃಖವೇನಿದೆ? ಹಾ! ದೈವವೇ! ಇದುವರೆಗೆ ನಾನು ಏನಾದರೂ ದಾನಗಳನ್ನು ಮಾಡಿದ್ದರೆ, ತಪಸ್ಸನ್ನು ನಡೆಸಿದ್ದರೆ, ಗುರುಗಳನ್ನು ಶುಶ್ರೂಷೆಯಿಂದ ಸಂತೋಷಪಡಿಸಿದ್ದರೆ, ಅದರ ಫಲದಿಂದ ನನ್ನ ಪ್ರಿಯೆಯಾದ ಪ್ರಮದ್ವರೆಯು ಬದುಕಿಕೊಳ್ಳಲಿ! ನಾನು ಹುಟ್ಟಿದುದು ಮೊದಲು ಮನಸ್ಸನ್ನು ಜಯಿಸಿ ದೃಢವಾದ ವ್ರತವನ್ನು ಸಾಧಿಸಿದ್ದರೆ, ನನ್ನ ಪ್ರಿಯಭಾಮಿನಿಯಾದ ಪ್ರಮದ್ವರೆಯು ಈಗಲೇ ಎದ್ದು ನಿಲ್ಲಲಿ! ಸರ್ವ ವ್ಯಾಪಕನೂ, ಸಕಲೇಂದ್ರಿಯ ನಿಯಾಮಕನೂ, ಸರ್ವಲೋಕೇಶ್ವರನೂ, ದಾನವ ವೈರಿಯೂ ಆದ ಶ್ರೀವಿಷ್ಣುವಿನಲ್ಲಿ ನನಗೆ ನಿಶ್ಚಲವಾದ ಭಕ್ತಿಯು ಇರುವುದಾದರೆ, ಅದರ ಫಲದಿಂದ ನನ್ನ ಪ್ರಿಯೆಯು ಜೀವಿಸಲಿ!" ಎಂದು ಮೊರೆಯಿಟ್ಟನು. ರುರುವು ಹೀಗೆ ವಿಲಪಿಸುತ್ತಿರುವುದನ್ನು ಕೇಳಿ ದೇವತೆಗಳೆಲ್ಲರಿಗೂ ಅವನಲ್ಲಿ ಕನಿಕರ ಹುಟ್ಟಲು, ಅವರು ತಮ್ಮ ದೂತನೊಬ್ಬನನ್ನು ಕರೆದು ಕಾಲೋಚಿತವಾದ ಕೆಲವು ಮಾತುಗಳನ್ನು ಅವನಿಗೆ ಹೇಳಿ ರುರುವಿನ ಬಳಿಗೆ ಕಳುಹಿಸಿದರು. ದೇವತೆಗಳಿಂದ ಪ್ರೇರಿತನಾದ ಆ ದೂತನು ಒಡನೆಯೇ ರುರುವಿನ ಬಳಿಗೆ ಬಂದು, ದೇವತೆಗಳ ಮಾತಿನಿಂದ ಅವನನ್ನು ಕುರಿತು "ಓ ಬ್ರಾಹ್ಮಣಾ! ದೇವತೆಗಳು ನನ್ನನ್ನು ನಿನ್ನ ಬಳಿಗೆ ಕಳುಹಿಸಿರುವರು. ಅವರು ನಿನ್ನ ಹಿತವನ್ನು ಕೋರಿ ನಿನಗೆ ಹೇಳಕಳುಹಿಸಿರುವ ಮಾತನ್ನು ತಿಳಿಸುವೆನು ಕೇಳು. "ಓ ಧರ್ಮಾತ್ಮಾ! ಆಯುಸ್ಸು ತೀರಿ ಮೃತನಾದ ಮನುಷ್ಯನಿಗೆ ತಿರುಗಿ ಆಯುಸ್ಸು ಲಭಿಸುವುದು ದುರ್ಲಭವು. ಗಂಧರ್ವನಿಗೆ ಅಪ್ಸರಸ್ಸಿನಲ್ಲಿ ಹುಟ್ಟಿದ ಆ ಕನ್ಯೆಗೆ ದೌರ್ಭಾಗ್ಯದಿಂದ ಇಂದಿಗೆ ಆಯುಸ್ಸು ತೀರಿತು. ನೀನು ಸುಮ್ಮನೆ ವ್ಯಸನಪಟ್ಟು ಮನಸ್ಸನ್ನು ನೋಯಿಸಬೇಡ.

ಆದರೆ, ಮಹಾತ್ಮರಾದ ದೇವತೆಗಳು ಮೊದಲೇ ಇದಕ್ಕೊಂದುಪಾಯವನ್ನು ನಿರ್ಧರಿಸಿರುವರು. ಅದರಂತೆ ನಡೆಸಲು ನಿನಗಿಷ್ಟವಿದ್ದರೆ ಈಗಲೂ ಪ್ರಮದ್ವರೆಯನ್ನು ನೀನು ಪಡೆಯಬಹುದು" ಎಂದನು. ಈ ಮಾತನ್ನು ಕೇಳಿದೊಡನೆಯೇ ರುರುವು ಆತುರದಿಂದ "ಓ ದೇವದೂತಾ! ಆ ಉಪಾಯವೇನು? ಅದನ್ನು ಯಥಾವತ್ತಾಗಿ ತಿಳಿಸು. ನಾನು ತಪ್ಪದೆ ಹಾಗೆಯೇ ನಡೆಸುವೆನು. ಹೇಗಾದರೂ ನೀನು ನನ್ನನ್ನು ಕಾಪಾಡಬೇಕು" ಎಂದನು. ಅದಕ್ಕಾ ದೇವದೂತನು "ನಿನ್ನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಆ ಕನ್ಯೆಗಾಗಿ ಕೊಟ್ಟರೆ, ಅವಳನ್ನು ನೀನು ಬದುಕಿಸಿಕೊಳ್ಳಬಹುದು" ಎನಲು ರುರುವು "ಓ ಖೇಚರಾ! ಹಾಗೆಯೇ ಆಗಲಿ. ನನ್ನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಆ ಕನ್ಯೆಗಾಗಿ ಕೊಡುವೆನು. ನನ್ನ ಪ್ರಿಯೆಯು ಮೊದಲಿದ್ದಂತೆ ಶೃಂಗಾರವಿಶಿಷ್ಟವಾದ ರೂಪಸಂಪತ್ತಿನಿಂದ ಎದ್ದು ನಿಲ್ಲಲಿ" ಎಂದನು ಆಮೇಲೆ ಗಂಧರ್ವರಾಜನಾದ ವಿಶ್ವಾವಸುವೆಂಬವನೂ, ಆ ದೇವದೂತನೂ ಯಮನಬಳಿಗೆ ಹೋಗಿ "ಓ ಧರ್ಮರಾಜಾ! ಈಗ ಮೃತಿ ಹೊಂದಿರುವ ರುರುವಿನ ಮೋಹಪಾತ್ರಳಾದ ಪ್ರಮದ್ವರೆಯು, ಆತನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಪಡೆದು, ಅದರಿಂದ ಬದುಕುವಂತೆ ನೀನು ಸಮ್ಮತಿಸಬೇಕು" ಎಂದರು. ಅದಕ್ಕಾ ಯಮನು "ನಿಮಗೆ ಹಾಗೆ ಇಷ್ಟವಿದ್ದಪಕ್ಷದಲ್ಲಿ ಈಗ ಮೃತಿಹೊಂದಿರುವ ಪ್ರಮದ್ವರೆಯು, ರುರುವಿನ ಆಯುಸ್ಸಿನಲ್ಲಿ ಅರ್ಧಭಾಗವನ್ನು ಪಡೆದು ಏಳಲಿ" ಎಂದನು. ಯಮನ ಬಾಯಿಂದ ಈ ಅಂಗೀಕಾರವಾಕ್ಯವು ಹೊರಟೊಡನೆ ಅತ್ತಲಾಗಿ ಪ್ರಮದ್ವರೆಯು ನಿದ್ರೆಯಿಂದೆದ್ದವಳಂತೆ ಮೇಲಕ್ಕೆದ್ದಳು. ಇದರಿಂದ ಮಹಾತೇಜಸ್ವಿಯಾದ ರುರುವಿನ ಬಹುಕಾಲದ ಆಯುಸ್ಸಿನಲ್ಲಿ ಅವನ ಭಾರ್ಯೆಗಾಗಿ ಅರ್ಧಭಾಗವು ಕಡಿಮೆಯಾಯಿತು. ಆದರೆ ಕೊನೆಗೆ ಬಹುಕಾಲವಮೇಲೆ ಸಂಭವಿಸತಕ್ಕ ಆ ಆಯುಸ್ಸಿನ ಕೊರತೆಯು ತತ್ಕಾಲಕ್ಕೆ ತಿಳಿಯದಂತಾಯಿತು.

ಆಮೇಲೆ ಆ ವಧೂವರರ ತಂದೆತಾಯಿಗಳಿಬ್ಬರೂ ಅವರು ಉದ್ದೇಶಿಸಿದ ದಿನಗಳಲ್ಲಿ ಇಬ್ಬರಿಗೂ ವಿವಾಹವನ್ನು ಬೆಳೆಸಿದರು. ದಂಪತಿಗಳಿಬ್ಬರೂ ಪರಸ್ಪರ ಪ್ರೇಮದಿಂದ ಸಂತೋಷಿಸುತಿದ್ದರು. ಕಮಲದ ಕುಸುರಿ

ಯಂತೆ ವೈಬಣ್ಣವುಳ್ಳ ಇತರ ದುರ್ಲಭಳಾದ ಅಂತಹ ಕನ್ಯಾರತ್ನವನ್ನು ಪಡೆದ ರುರುವಾದರೋ, ಮಹಾವ್ರತನಿಷ್ಠನಾದುದರಿಂದ ಸರ್ಪಗಳನ್ನೆಲ್ಲಾ ನಾಶಮಾಡುವುದಕ್ಕಾಗಿ ಒಂದು ನಿಯಮವನ್ನು ಹಿಡಿದನು. ಆತನು ಎಲ್ಲೆಲ್ಲಿ ಹಾವುಗಳನ್ನು ಕಂಡರೆ ತೀವ್ರಕೋಪದಿಂದ ಆಯುಧಧಾರಿಯಾಗಿ ಅವುಗಳನ್ನು ಬಡಿದು ಕೊಲ್ಲುತ್ತಿದ್ದನು. ಹೀಗಿರುವಾಗ ಒಮ್ಮೆ ಆ ಬ್ರಾಹ್ಮಣನು ಒಂದು ದೊಡ್ಡ ಅರಣ್ಯಕ್ಕೆ ಹೋಗಿ, ಅಲ್ಲಿ ಬಹಳ ಮುದಿಯಾಗಿ ನೆಲದಮೇಲೆ ಮಲಗಿದ್ದ ಡುಂಡುಭವೆಂಬ ಒಂದು ನೀರುಹಾವನ್ನು ಕಂಡನು. ಅದನ್ನು ಕಂಡೊಡನೆ ಬ್ರಾಹ್ಮಣನು ಕುಪಿತನಾಗಿ, ಕಾಲದಂಡವಂತಿದ್ದ ಒಂದು ಕಟ್ಟಿಗೆಯನ್ನೆತ್ತಿ ಅದನ್ನು ಕೊಲ್ಲುವುದಕ್ಕೆ ಹೋಗಲು, ಡುಂಡುಭವು ಅವನನ್ನು ನೋಡಿ "ಓ ತಪೋಧನಾ! ನಿನ್ನಲ್ಲಿ ಈಗ ನಾನು ಯಾವ ಅಪರಾಧವನ್ನೂ ಮಾಡಿದವನಲ್ಲ. ನಿಷ್ಕಾರಣವಾಗಿ ನನ್ನಲ್ಲಿ ಕೋಪಗೊಂಡು, ಏಕೆ ನನ್ನನ್ನು ಕೊಲ್ಲುವೆ?" ಎಂದು ಪ್ರಾರ್ಥಿಸಿತು.

ಇದು ಒಂಭತ್ತನೆಯ ಅಧ್ಯಾಯವು.



## ರುರು ಡುಂಡುಭ ಸಂವಾದವು.

ಡುಂಡುಭವು ಕೇಳಿದುದಕ್ಕೆ ರುರುವು "ಓ ಸರ್ಪವೇ! ನನ್ನ ಪ್ರಾಣಕ್ಕಿಂತಲೂ ಪ್ರಿಯತಮೆಯಾದ ನನ್ನ ಪತ್ನಿಯನ್ನು ಒಂದು ಹಾವು ಕಚ್ಚಿತು. ಅದಕ್ಕಾಗಿಯೇ ನಾನು ಯಾವ ಹಾವನ್ನಾಗಲಿ, ಎಲ್ಲಿ ಕಂಡರೂ ಕೊಲ್ಲುವುದಾಗಿ ಭಯಂಕರವಾದ ಪ್ರತಿಜ್ಞೆಯೊಂದನ್ನು ಮಾಡಿರುವೆನು. ಅವಕ್ಕಾಗಿ ನಿನ್ನನ್ನು ನಾನು ಕೊಲ್ಲಬೇಕಾಗಿದೆ. ಈಗ ಇದೋ! ನೀನು ಪ್ರಾಣವನ್ನು ಕಳೆದುಕೊಳ್ಳುವ ಸಮಯವು ಸಮೀಪಿಸಿತು" ಎನಲು, ಡುಂಡುಭವು "ಓ ವಿಪ್ರೋತ್ತಮಾ! ಮನುಷ್ಯರನ್ನು ಕಚ್ಚುವ ಸರ್ಪಜಾತಿಯೇ ಬೇರೆ. ನಮ್ಮಂತಿರುವ ನೀರುಹಾವುಗಳು ಆ ಸರ್ಪಗಳ ಆಕಾರದಿಂದಿದ್ದ ಮಾತ್ರಕ್ಕೆ ನೀನು ಅವನ್ನು ಕೊಲ್ಲುವುದು ಯುಕ್ತವಲ್ಲ. ನಮಗೂ, ಇತರ ಸರ್ಪಗಳಿಗೂ ಜನಗಳಿಂದುಂಟಾಗುವ ಉಪಹತಿಯೇನೋ ಒಂದೇ ವಿಧವಾದರೂ, ನಮ್ಮನಮ್ಮ ಧರ್ಮಗಳೇ ಬೇರೆ. ಮತ್ತು ನಮಗೂ ಇತರ

ಸರ್ಪಗಳಿಗೂ ಬಿಲವಾಸವೇ ಮೊದಲಾದ ದುಃಖವು ಸಮಾನವಾಗಿದ್ದರೂ, ಕೆಲವು ಸುಖಗಳಲ್ಲಿಯೂ ನಮನಮಗೆ ಭೇದವುಂಟು. ಹೇಗೆಂದರೆ, ಜನಗಳು ಇತರಸರ್ಪಗಳಂತೆ ನಮ್ಮನ್ನೂ ಕಂಡಕಂಡ ಕಡೆಯಲ್ಲಿ ಕೊಲ್ಲುವರು. ಆದರೆ ಅವುಗಳಂತೆ ನಮಗೆ ಇತರರ ಪ್ರಾಣಗಳನ್ನು ತೆಗೆಯುವ ಸ್ವಭಾವವಿಲ್ಲ. ಆ ಸರ್ಪಗಳಂತೆ ನಮಗೆ ಪೂಜಾದಿಗಳೂ, ಹವಿರ್ಭಾಗಗಳೂ ದೊರೆಯಲಾರವು. ನಮ್ಮ ಸುಖವೆಲ್ಲ ಕಪ್ಪೆಗಳನ್ನು ಹಿಡಿದು ತಿನ್ನುವುದರಲ್ಲಿಯೇ. ಆದುದರಿಂದ ಓ ಬ್ರಾಹ್ಮಣಾ! ನೀನು ಧರ್ಮಜ್ಞನಾಗಿದ್ದು, ಹೀಗೆ ನಿರಪರಾಧಿಗಳಾದ ನಮ್ಮನ್ನು ಹಿಂಸಿಸುವುದು ಸರಿಯಲ್ಲ'' ಎಂದಿತು. ಡುಂಡುಭದ ಈ ಮಾತನ್ನು ಕೇಳಿ, ಇಷ್ಟು ಧರ್ಮೋಪದೇಶವನ್ನು ಮಾಡುವ ಡುಂಡುಭವು ಯಾವನೋ ಒಬ್ಬ ಋಷಿಯಾಗಿರಬೇಕೆಂದು ತಿಳಿದು, ಭಯದಿಂದ ಅದನ್ನು ಕೊಲ್ಲದೆ ಸಮಾಧಾನವಾಕ್ಯಗಳಿಂದ ಅದನ್ನು ಕುರಿತು ''ಓ ಸರ್ಪವೇ! ನೀನು ಯಾರು? ನಿನಗೆ ಯಾರಿಂದ ಈ ವಿಕೃತಜನ್ಮವು ಉಂಟಾಯಿತು? ಹೇಳು'' ಎಂದನು. ಅದಕ್ಕಾ ಡುಂಡುಭವು ''ಓ ಬ್ರಾಹ್ಮಣಾ! ಪೂರ್ವದಲ್ಲಿ ನಾನೊಬ್ಬ ಋಷಿ! ನನಗೆ ಸಹಸ್ರಪಾಲನೆಂದು ಹೆಸರು. ಒಬ್ಬ ಬ್ರಾಹ್ಮಣನ ಶಾಪದಿಂದ ನನಗೆ ಈ ಸರ್ಪಜನ್ಮವು ಉಂಟಾಯಿತು'' ಎನಲು, ರರುವು ''ಓ ಸರ್ಪೋತ್ತಮಾ! ನಿನ್ನಮೇಲೆ ಬ್ರಾಹ್ಮಣನಿಗೆ ಕೋಪವುಂಟಾಗಲು ಕಾರಣವೇನು? ನಿನಗೆ ಏನೆಂದು ಶಾಪಕೊಟ್ಟನು? ಈ ಸರ್ಪದೇಹವು ನಿನಗೆ ಇನ್ನೂ ಎಷ್ಟು ಕಾಲವಿರಬೇಕು?'' ಎಂದು ಕೇಳಿದನು.

ಇದು ಹತ್ತನೆಯ ಅಧ್ಯಾಯವು.



 ಡುಂಡುಭ ಚರಿತ್ರವು. 

ಡುಂಡುಭವು ರುರುವನ್ನು ಕುರಿತು ''ಅಯ್ಯಾ! ಪೂರ್ವದಲ್ಲಿ ಖಗನೆಂಬ ಬ್ರಾಹ್ಮಣನೊಬ್ಬನು ನನಗೆ ಬಹಳ ಸ್ನೇಹಿತನಾಗಿದ್ದನು. ಅವನು ಬಹಳ ತಪೋಬಲಸಂಪನ್ನನು. ಆದರೆ ಮಾತಿನಲ್ಲಿ ಬಹಳ ಕಠಿಣನು.

ನಾವಿಬ್ಬರೂ ಬಾಲ್ಯದಲ್ಲಿ ಆಟವಾಡುತ್ತಿರುವಾಗ, ನಾನು ವಿನೋದಕ್ಕಾಗಿ ಹುಲ್ಲಿನಿಂದ ಒಂದು ಹಾವನ್ನು ಮಾಡಿ ಅಗ್ನಿಕಾರ್ಯದಲ್ಲಿ ಆಸಕ್ತನಾಗಿದ್ದ ಆತನಮುಂದೆ ಅದನ್ನಾಡಿಸಿ ಭಯಪಡಿಸಿದೆನು. ಆ ಭಯದಿಂದ ಅವನು ಮೂರ್ಛಿತನಾದನು. ಸ್ವಲ್ಪ ಹೊತ್ತಿನಮೇಲೆ ಮೆಲ್ಲಗೆ ಚೇತರಿಸಿಕೊಂಡು ಅದರ ನಿಜಸ್ಥಿತಿಯನ್ನು ತಿಳಿದಮೇಲೆ, ಕೋಪದಿಂದ ದಹಿಸುವಂತೆ ನನ್ನ ನ್ನು ನೋಡುತ್ತ "ಎಲ ದುಷ್ಟಾ! ನನ್ನನ್ನು ಭಯಪಡಿಸುವುದಕ್ಕಾಗಿ ನೀನು ಎಂತಹ ನಿರ್ವೀರ್ಯವಾದ ಸರ್ಪದ ಆಕೃತಿಯನ್ನು ಮಾಡಿದೆಯೋ, ಅದೇ ತರದ ಸರ್ಪರೂಪವನ್ನು ನೀನು ಹೊಂದುವನಾಗು" ಎಂದು ಶಪಿಸಿದನು. ಓ ಬ್ರಾಹ್ಮಣೋತ್ತಮಾ! ನನ್ನ ಮಿತ್ರನಾದ ಆ ಖಗನ ತಪಶ್ಶಕ್ತಿಯನ್ನು ನಾನು ಚೆನ್ನಾಗಿ ಬಲ್ಲೆನಾದುದರಿಂದ ನನ್ನ ಮನಸ್ಸು ನಡುಗಿತು. ದುಃಖ ದಿಂದ ಅವನಿಗೆ ನಮಸ್ಕರಿಸಿ ಬದ್ಧಾಂಜಲಿಯಾಗಿ ಮುಂದೆನಿಂತು "ಅಯ್ಯಾ ಮಿತ್ರನೇ! ನಿನ್ನಲ್ಲಿ ನನಗಿದ್ದ ಸ್ನೇಹದ ಸಲಿಗೆಯಿಂದ ಸುಮ್ಮನೆ ವಿನೋದ ಕ್ಕಾಗಿ ನಾನು ಇದನ್ನು ಮಾಡಿದೆನೇಹೊರತು ಬೇರೆಯಲ್ಲ. ನನ್ನ ತಪ್ಪ ನ್ನು ಮನ್ನಿಸಬೇಕು. ಈ ಶಾಪವನ್ನು ಹಿಂತಿರುಗಿಸು" ಎಂದು ಬೇಡಿ ದೆನು. ತಪಸ್ವಿಯಾದ ಆತನಿಗೆ ನನ್ನಲ್ಲಿ ಕನಿಕರವು ಹುಟ್ಟಿತು. ನನ್ನನ್ನು ನೋಡಿ ಬಾರಿಬಾರಿಗೂ ಪಶ್ಚಾತ್ತಾಪದಿಂದ ನಿಟ್ಟುಸಿರನ್ನು ಬಿಡುತ್ತಾ "ಅಯ್ಯಾ! ನಾನು ಇದುವರೆಗೆ ಅಸತ್ಯವನ್ನು ನುಡಿದುದಿಲ್ಲ. ಈಗ ನನ್ನ ಬಾಯಿಂದ ಹೊರಟ ಶಾಪವಾಕ್ಯವು ತಪ್ಪಲಾರದು. ಆದರೂ ಒಂದು ಮಾತನ್ನು ಹೇಳುವೆನು ಕೇಳು. ನನ್ನ ಮಾತನ್ನು ಚೆನ್ನಾಗಿ ಗಮನಿಸಿ ಯಾವಾಗಲೂ ಅದನ್ನು ಮರೆಯದೆ ಮನಸ್ಸಿನಲ್ಲಿಟ್ಟಿರು. ಪ್ರಮತಿಗೆ ರುರು ವೆಂಬ ಪುತ್ರನೊಬ್ಬನು ಮುಂದೆ ಹುಟ್ಟುವನು. ಅವನು ಬಹಳ ಪರಿ ಶುದ್ಧನು. ಇನ್ನು ಸ್ವಲ್ಪಕಾಲದಲ್ಲಿ ಆತನನ್ನು ನೀನು ನೋಡುವೆ. ಆಗ ನಿನಗೆ ಈ ಶಾಪವು ಬಿಟ್ಟುಹೋಗುವುದು" ಎಂದನು. ಅವನು ಈ ಮಾತ ನ್ನು ಹೇಳಿ ಮುಗಿಸಿದ ಕೂಡಲೇ ನನಗೆ ಈ ಸರ್ಪರೂಪವುಂಟಾಯಿತು. ಅವನು ಹೇಳಿದ್ದಂತೆ ಪ್ರಮತಿ ಕುಮಾರನಾದ ರುರುವೆಂಬ ಹೆಸರುಳ್ಳ ನೀನು ಇಲ್ಲಿಗೆ ಬಂದು ಸಂಧಿಸಿದೆ. ಓ ವಿಪ್ರೋತ್ತಮಾ! ನನಗೆ ಶಾಪವಿಮೋ ಚನಕಾಲವು ಬಂದಿತು. ನನಗೆ ಈ ರೂಪವು ಬಿಟ್ಟುಹೋಗಿ ನಿಜಸ್ವರೂ

ಪವು ಬಂದೊಡನೆ ನಿನಗೆ ಹಿತವನ್ನು ಹೇಳುವೆನು" ಎಂದನು. ಹೀಗೆ ಹೇಳುತ್ತಿರುವಾಗಲೇ ಅವನಿಗೆ ಡುಂಡುಭರೂಪವು ಬಿಟ್ಟುಹೋಯಿತು. ಬ್ರಹ್ಮತೇಜಸ್ಸಿನಿಂದ ಕೂಡಿದ ಮೊದಲಿನ ರೂಪವು ಬಂದಿತು. ಆಮೇಲೆ ಸಹಸ್ರಪಾದನೆಂಬ ಆ ಬ್ರಾಹ್ಮಣೋತ್ತಮನು, ಅಸಮಾನ ತೇಜಸ್ವಿಯಾದ ರುರುವನ್ನು ಕುರಿತು "ಸಮಸ್ತ ಪ್ರಾಣಿಗಳಲ್ಲಿಯೂ ಮೇಲೆನಿಸಿಕೊಂಡ ಓ ಬ್ರಾಹ್ಮಣಾ! ಅಹಿಂಸೆಯೇ ಎಲ್ಲಕ್ಕಿಂತಲೂ ಮೇಲಾದ ಧರ್ಮವು. ಆದುದರಿಂದ ಧರ್ಮದೃಷ್ಟಿಯುಳ್ಳ ಬ್ರಾಹ್ಮಣನು ಯಾವಾಗಲೂ, ಯಾವ ಪ್ರಾಣಿಗಳನ್ನೂ ಹಿಂಸಿಸಬಾರದು. ಈ ಲೋಕದಲ್ಲಿ ಬ್ರಾಹ್ಮಣರು ಯಾವಾಗಲೂ ಸೌಮ್ಯಸ್ವಭಾವವುಳ್ಳವರೆಂದು ಪೂರ್ವದಿಂದಲೂ ಪ್ರಸಿದ್ಧಿಯುಂಟು. ಅವರು ವೇದವೇದಾಂಗಗಳನ್ನು ತಿಳಿದವರು! ಸಮಸ್ತಪ್ರಾಣಿಗಳಿಗೂ ಅಭಯವನ್ನು ಕೊಡತಕ್ಕವರು! ಅಹಿಂಸೆ, ಸತ್ಯವನ್ನೇ ನುಡಿಯುವುದು, ತಾಳ್ಮೆ, ವೇದಗಳನ್ನು ಯಾವಾಗಲೂ ಮನಸ್ಸಿನಲ್ಲಿ ಧಾರಣೆಮಾಡಿಟ್ಟುಕೊಳ್ಳುವುದು, ಇವಿಷ್ಟೂ ಬ್ರಾಹ್ಮಣನಿಗೆ ಪ್ರಧಾನ ಧರ್ಮಗಳೆಂದು ನಿರ್ಣಯಿಸಲ್ಪಟ್ಟಿದೆ. ಕ್ಷತ್ರಿಯರಿಗೆ ವಿಹಿತವಾದ ಧರ್ಮವು ಯಾವುದೋ ಅದನ್ನು ಬ್ರಾಹ್ಮಣನಾದ ನೀನು ಎಂದಿಗೂ ಬಯಸಬಾರದು. ಇತರರನ್ನು ದಂಡಿಸುವುದು, ಕ್ರೂರನಾಗಿ ವರ್ತಿಸುವುದು, ಪ್ರಜೆಗಳನ್ನಾಳುವುದು, ಇವಿಷ್ಟೂ ಕ್ಷತ್ರಿಯರ ಧರ್ಮಗಳು. ಓ ರುರೂ! ಬ್ರಾಹ್ಮಣೋತ್ತಮಾ! ನಿನ್ನಂತೆ ಪೂರ್ವದಲ್ಲಿ ಜನಮೇಜಯನು ಸರ್ಪಗಳನ್ನು ಕೊಲ್ಲುವುದಕ್ಕಾಗಿ ಒಂದು ಯಜ್ಞವನ್ನಾರಂಭಿಸಿದನು. ಅನೇಕ ಸರ್ಪಗಳು ಆ ಯಜ್ಞದಲ್ಲಿ ಮೃತ್ಯುವಶವಾದುವು. ಆ ಸಮಯದಲ್ಲಿ ಭಯದಿಂದ ತತ್ತಳಿಸುತ್ತಿರುವ ಸರ್ಪಜಾತಿಗಳನ್ನು ನೋಡಿ ಆಸ್ತೀಕನೆಂಬ ಬ್ರಾಹ್ಮಣನಿಗೆ ಅವುಗಳಲ್ಲಿ ಕನಿಕರವು ಹುಟ್ಟಿತು. ಕ್ಷತ್ರಿಯನು ಕೋಪದಿಂದ ಮಾಡತೊಡಗಿದ ಪ್ರಾಣಿಹಿಂಸೆಯನ್ನು ಆ ಬ್ರಾಹ್ಮಣನು ತಪ್ಪಿಸಿದನು. ವೇದವೇದಾಂಗಪಾರಂಗತನೂ, ಬ್ರಾಹ್ಮಣೋತ್ತಮನೂ ಆದ ಆಸ್ತೀಕನೇ ಸರ್ಪಯಾಗದಲ್ಲಿ ಪ್ರಾಣಭಯದಿಂದ ತತ್ತಳಿಸುತಿದ್ದ ಸರ್ಪಗಳನ್ನು ರಕ್ಷಿಸಿದನು. ಆ ವೃತ್ತಾಂತವನ್ನೂ ತಿಳಿಸುವೆನು ಕೇಳು" ಎಂದನು.

ಇದು ಹನ್ನೊಂದನೆಯ ಅಧ್ಯಾಯವು.

ಜನಮೇಜಯನ ಸರ್ಪಯಾಗ ಪ್ರಸ್ತಾವವು.

ರರುವು ಆತನನ್ನು ನೋಡಿ "ಓ ಬ್ರಾಹ್ಮಣೋತ್ತಮಾ! ಜನಮೇಜಯನು ಯಜ್ಞದಲ್ಲಿ ಸರ್ಪಗಳನ್ನು ಯಾವ ರೀತಿಯಾಗಿ ಹಿಂಸಿಸಿದನು? ಅವನು ಹಾಗೆ ಸರ್ಪಗಳನ್ನು ಹಿಂಸಿಸಲು ಕಾರಣವೇನು? ಆಸ್ತೀಕನು ಹೇಗೆ ಸರ್ಪಗಳನ್ನು ಹಿಂಸೆಯಿಂದ ಬಿಡಿಸಿದನು. ಇವೆಲ್ಲವನ್ನೂ ಕೇಳಬೇಕೆಂದು ನನಗೆ ಕುತೂಹಲವುಂಟು. ಅದನ್ನು ತಿಳಿಸು" ಎಂದನು. ಅದಕ್ಕಾ ಋಷಿಯು ರುರುವನ್ನು ಕುರಿತು "ಓ ವಿಪ್ರೋತ್ತಮಾ! ಆ ಆಸ್ತೀಕನ ಚರಿತ್ರವು ಬಹಳ ವಿಸ್ತಾರವಾದುದು. ನೀನು ಮುಂದೆ ಬ್ರಾಹ್ಮಣರ ಮೂಲಕವಾಗಿ ಅದನ್ನು ಕೇಳಲು ಅವಕಾಶವುಂಟು. ಈಗ ನಾನು ಬೇಗನೆ ಹೊರಡಬೇಕಾಗಿದೆ" ಎಂದು ಹೇಳಿ, ಆ ಸಹಸ್ರಪಾದನು ಒಡನೆಯೇ ತನ್ನ ಯೋಗಬಲದಿಂದ ಕಣ್ಮರೆಯಾದನು. ರುರುವಿಗೆ ಅದೊಂದು ಮಹಾಶ್ಚರ್ಯವಾಗಿ ತೋರಿ, ಅವನ ಮನಸ್ಸು ಬೆಜ್ಜರಗೊಂಡಿತು. ಆತನೆಲ್ಲಿ ಹೋದನೆಂದು ಇವನಿಗೆ ತಿಳಿಯಲಿಲ್ಲ. ಅವನನ್ನು ಹುಡುಕುವುದಕ್ಕಾಗಿ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ನಾನಾ ದಿಕ್ಕುಗಳಿಗೂ ಓಡಾಡತೊಡಗಿದನು. ಎಲ್ಲಿ ಸುತ್ತಿದರೂ ಸಿಕ್ಕಲಿಲ್ಲ. ಇವನಿಗಾದರೋ ಸುತ್ತಿಸುತ್ತಿ ಸಾಕಾಯಿತು ಆಯಾಸದಿಂದ ಬಹಳವಾಗಿ ಬಳಲಿ, ನೆಲದಮೇಲೆ ಮೂರ್ಛಿತನಾಗಿ ಬಿದ್ದುಬಿಟ್ಟನು. ಪ್ರಜ್ಞೆ ತಪ್ಪಿಹೋಯಿತು. ಸ್ವಲ್ಪ ಪ್ರಜ್ಞೆಯು ಬಂದಮೇಲೆ ಚೇತರಿಸಿಕೊಂಡು ಆ ಋಷಿಯು ಹೇಳಿದ ಸತ್ಯವಚನವನ್ನು ಆಗಾಗ ಮನಸ್ಸಿನಲ್ಲಿ ನೆನಿಸಿಕೊಳ್ಳುತ್ತಾ ಹಿಂತಿರುಗಿ ತನ್ನಾಶ್ರಮಕ್ಕೆ ಬಂದು, ನಡೆದ ಸಂಗತಿಯನ್ನೆಲ್ಲಾ ತನ್ನ ತಂದೆಗೆ ತಿಳಿಸಿದನು. ಆಸ್ತೀಕನ ವಿಷಯವಾಗಿ ಡುಂಡುಭವು ಸೂಚಿಸಿಹೋದ ಸಂಗತಿಯನ್ನೂ ತಂದೆಗೆ ತಿಳಿಸಿ, "ಓ ಜನಕಾ! ಆ ಕಥೆಯನ್ನು ನೀನು ನಡೆದುದು ನಡೆದಂತೆ ಸವಿಸ್ತರವಾಗಿ ನನಗೆ ತಿಳಿಸಬೇಕು" ಎಂದನು. ಹೀಗೆ ಕೇಳಿದ ಮಗನನ್ನು ನೋಡಿ ಆತನ ತಂದೆಯು ಆ ಕಥೆಯನ್ನೆಲ್ಲ ಅವನಿಗೆ ವಿವರವಾಗಿ ಹೇಳಿದನು.

ಇದು ಹನ್ನೆರಡನೆಯ ಅಧ್ಯಾಯವು.

## ಇಲ್ಲಿಗೆ ಪೌಲೋಮಪರ್ವವು ಮುಗಿದುದು.

# ಆಸ್ತೀಕಪರ್ವವು.

{ ಜರತ್ಕಾರುವಿನ ಕಥೆ. ಆಸ್ತೀಕನ ಕಥೆ. ಜರತ್ಕಾರುವಿಗೂ ಅವನ ಪಿತೃಗಳಿಗೂ ನಡೆದ ಸಂವಾದಗಳು. }

ಆಮೇಲೆ ಶೌನಕನು "ಸೂತಪುತ್ರಾ! ಜನಮೇಜಯನು ಸರ್ಪಯಾಗವನ್ನಾರಂಭಿಸಿ ಸರ್ಪಗಳನ್ನು ಕೊಂದ ಕಾರಣವೇನು? ಆ ವಿಚಾರವೆಲ್ಲವನ್ನೂ ಯಥಾವತ್ತಾಗಿ ನನಗೆ ವಿವರಿಸಬೇಕು. ಬ್ರಾಹ್ಮಣೋತ್ತಮನಾದ ಆಸ್ತೀಕನು ಸರ್ಪಗಳನ್ನು ಅಗ್ನಿದಾಹದಿಂದ ತಪ್ಪಿಸಿದ ಕಾರಣವೇನು? ಸರ್ಪಯಾಗವನ್ನು ಮಾಡಿದ ಆ ರಾಜನು ಯಾವನ ಮಗನು? ಆಸ್ತೀಕನು ಯಾವನ ಪುತ್ರನು? ಇದನ್ನೆಲ್ಲ ನಾನು ಕೇಳಬೇಕೆಂದಪೇಕ್ಷಿಸುವೆನು" ಎಂದನು. ಅದಕ್ಕಾ ಸೌತಿಯು "ಮುನೀಂದ್ರಾ! ಆಸ್ತೀಕನ ಚರಿತ್ರವಾದರೋ ಬಹಳ ದೊಡ್ಡದು. ಆದರೂ ನಾನು ಹಿರಿಯರಿಂದ ಕೇಳಿದಹಾಗೆ ಎಲ್ಲವನ್ನೂ ನಿನಗೆ ಹೇಳುವೆನು ಕೇಳು" ಎಂದನು.

ಆಗ ಶೌನಕನು "ಪುರಾತನ ಮಹರ್ಷಿಯೂ, ಯಶಸ್ವಿಯೂ ಆದ ಆಸ್ತೀಕನ ಚರಿತ್ರವು ಬಹಳ ಮನೋಹರವಾದುದು. ಆದುದರಿಂದ ಅದರ ವಿವರವನ್ನೆಲ್ಲ ನಾನು ನಿನ್ನಿಂದ ಕೇಳಬೇಕಾಗಿದೆ" ಎಂದನು. ಅದಕ್ಕಾ ಸೌತಿಯು "ಈ ಆಸ್ತೀಕಚರಿತ್ರವು ಪುರಾತನಕಲ್ಪದಿಂದ ಪ್ರಖ್ಯಾತವಾದ ಪುರಾಣವೆಂದು ಬ್ರಾಹ್ಮಣರು ಹೇಳುವರು. ಪೂರ್ವದಲ್ಲಿ ವ್ಯಾಸಶಿಷ್ಯನಾದ ನನ್ನ ತಂದೆ ರೋಮಹರ್ಷಣನನ್ನು ನೈಮಿಶಾರಣ್ಯವಾಸಿಗಳಾದ ಬ್ರಾಹ್ಮಣರು ಕೇಳಿದಾಗ, ಅವನು ವ್ಯಾಸಪ್ರೋಕ್ತವಾದ ಈ ಕಥೆಯನ್ನು ಅವರಿಗೆ ಹೇಳಿದನು. ನಾನು ಅವನಿಂದ ಹೇಗೆ ಕೇಳಿದೆನೋ ಅದೇ ರೀತಿಯಲ್ಲಿ ನಿನಗೆ ತಿಳಿಸುವೆನು. ಈ ಆಸ್ತೀಕಚರಿತ್ರವು ಸರ್ವಪಾಪನಿವಾರಕವಾದುದು.

ಆಸ್ತೀಕನ ತಂದೆಗೆ ಜರತ್ಕಾರುವೆಂದು ಹೆಸರು. ಆತನು ಸಾಕ್ಷಾದ್ಬ್ರಹ್ಮದೇವನಿಗೆ ಸಮಾನನು. ಬಹಳ ಸಮರ್ಥನು. ಅವನು ಬ್ರಹ್ಮಚರ್ಯವನ್ನು ಹಿಡಿದು, ಆಹಾರವನ್ನು ತ್ಯಜಿಸಿ, ಯಾವಾಗಲೂ ಉಗ್ರತಪ

ಸ್ಸಿನಲ್ಲಿಯೇ ಆಸಕ್ತನಾಗಿದ್ದನು. ಮತ್ತು ಅವನು ಊರ್ಧ್ವರೇತಸ್ಸುಗಳಲ್ಲಿ ಒಬ್ಬನು. ಗ್ರಾಮೈಕರಾತ್ರರಾದ ಯತಿಗಳಿಗೆಲ್ಲ ಅವನನ್ನು ಮೇಲುಪಙ್ಕ್ತಿಯೆಂದು ಹೇಳಬಹುದು. ಧರ್ಮಜ್ಞನು, ದೃಢವ್ರತನು, ತಪೋಬಲಸಂಪನ್ನನಾದ ಆ ಮಹಾತ್ಮನು ಹೀಗೆಯೇ ಗ್ರಾಮೈಕರಾತ್ರನಾಗಿ ಸಂಚರಿಸುತ್ತ, ಸಂಜೆಯಾದ ಸ್ಥಳದಲ್ಲಿ ತಂಗುತ್ತ ಭೂಮಿಯನ್ನೆಲ್ಲ ಸುತ್ತುತ್ತಿದ್ದನು. ಆ ಮಹಾತೇಜಸ್ವಿಯು ಎಲ್ಲಾ ಪುಣ್ಯತೀರ್ಥಗಳಲ್ಲಿಯೂ ಸ್ನಾನಮಾಡುತ್ತ ಬಂದನು. ಜಿತೇಂದ್ರಿಯರಲ್ಲದವರಿಗೆ ಸಾಧ್ಯವಲ್ಲದ ಬ್ರಹ್ಮಚರ್ಯದಲ್ಲಿ ದೀಕ್ಷೆಯನ್ನು ವಹಿಸಿದ್ದನು. ವಾಯುಭಕ್ಷಕನಾಗಿ ದೇಹವನ್ನು ದಂಡಿಸುತ್ತ, ಕಣ್ಣು ಮುಚ್ಚದೆ ಸಮಸ್ತ ಪ್ರದೇಶಗಳಲ್ಲಿಯೂ ತಿರುಗುತಿದ್ದನು. ಅಗ್ನಿತೇಜಸ್ಸುಳ್ಳ ಆ ಮುನಿಯು ಹೀಗೆ ಭೂಸಂಚಾರಮಾಡುತ್ತಿರುವಾಗ, ಒಂದಾನೊಂದು ಕಡೆಯಲ್ಲಿ ಒಂದು ದೊಡ್ಡ ಹಳ್ಳದಲ್ಲಿ ತಲೆಕೆಳಗಾಗಿ ನೇತಾಡುತ್ತಿದ್ದ ಕೆಲವು ಪಿತೃದೇವತೆಗಳನ್ನು ಕಂಡನು. ಹೀಗೆ ಕಾಲುಮೇಲಾಗಿ, ತಲೆಕೆಳಗಾಗಿ ಹಳ್ಳದಲ್ಲಿ ಜೋಲಾಡುತ್ತಿರುವ ಅವರನ್ನು ಕಂಡೊಡನೆ ಇದೇನೆಂದು ಬೆಜ್ಜರಬಿದ್ದು ಅವರನ್ನು ಕುರಿತು “ಎಲೈ ನೀವು ಯಾರು? ಈ ಅಗಾಧವಾದ ಹಳ್ಳದಲ್ಲಿ ತಲೆಕೆಳಗಾಗಿ ಈ ಜೊಂಡಿಗೆ ತಗುಲಿಕೊಂಡು ನೇತಾಡುತ್ತಿರುವಿರೇಕೆ? ಈ ಹಳ್ಳದಲ್ಲಿ ಅವಿತುಕೊಂಡು ಇಲ್ಲಿಯೇ ನಿತ್ಯಜೀವನ ಮಾಡುತ್ತಿರುವ ನೀವು ಯಾರು?” ಎಂದನು. ಅದಕ್ಕವರು “ಅಯ್ಯಾ! ನಾವು ಕಠಿನವ್ರತವುಳ್ಳ ‘ಯಾಯಾವರ’ರೆಂಬ ಋಷಿಗಳು. ನಮಗೆ ಮುಂದಿನ ಸಂತತಿಯು ಲುಪ್ತವಾಗಿ ಹೋದುದರಿಂದ, ಹೀಗೆ ತಲೆಕೆಳಗಾಗಿ ಅಧೋಗತಿಗೆ ಹೋಗುತ್ತಿರುವೆವು. ಓ ಪುಣ್ಯಾತ್ಮಾ! ಮಂದಭಾಗ್ಯರಾದ ನಮ್ಮ ದುರದೃಷ್ಟಕ್ಕೆ ತಕ್ಕಂತೆ ನಮಗೆ ಕೇವಲ ಅಲ್ಪಭಾಗ್ಯನಾದ ಜರತ್ಕಾರುವೆಂಬ ಒಬ್ಬನೇ ಮಗನಿರುವನು. ಅವನಿಂದಾದರೂ ನಮ್ಮ ಸಂತತಿಯು ಮುಂದುವರಿಯುವುದೆಂದು ನೋಡಿದರೆ, ಆ ಮೂಢನು ಕೇವಲ ತಪಸ್ಸಿನಲ್ಲಿಯೇ ಬಿದ್ದು, ಸಂತಾನಪ್ರಾಪ್ತಿಗಾಗಿಯಾದರೂ ವಿವಾಹವನ್ನು ಮಾಡಿಕೊಳ್ಳಲು ಇಷ್ಟಪಡುವುದಿಲ್ಲ. ಅವನೊಬ್ಬನಿಂದಲೇ ನಾವು ಸನಾಥರೆನಿಸಿಕೊಂಡಿದ್ದರೂ, ಅವನಿಗೆ ಸಂತತಿಯಿಲ್ಲದುದರಿಂದ ಅನಾಥರಂತೆ ಈ ಹಳ್ಳದಲಿ ನೇತಾಡುತ್ತಿರುವೆವು. ಈ ಮನುಷ್ಯಲೋಕದಲ್ಲಿ ಸಂತತಿಯಿಲ್ಲದವರು

ಎಷ್ಟೋ ಪುಣ್ಯಕಾರ್ಯಗಳನ್ನು ನಡೆಸಿದ್ದರೂ, ಅವರಿಗೆ ಸ್ವರ್ಗದಲ್ಲಿ ಸ್ಥಳವು ದೊರೆಯದು. ಓ ಸಾಧೂ! ನೀನು ಯಾರು? ಆಪ್ತಬಂಧುವಿನಂತೆ ನಮ್ಮನ್ನು ನೋಡಿ ನೀನು ಕನಿಕರಪಡುತ್ತಿರುವೆಯಲ್ಲಾ! ನಿನಗೆ ನಮ್ಮಲ್ಲಿ ಇಷ್ಟು ಕರುಣೆ ಹುಟ್ಟಲು ಕಾರಣವೇನು? ಓ ಬ್ರಾಹ್ಮಣಾ! ನಿನ್ನ ಸಂಗತಿಯನ್ನು ನಾವು ಕೇಳಬೇಕೆಂದಿರುವೆವು" ಎಂದರು. ಆಗ ಜರತ್ಕಾರುವು ಅವರೇ ತನ್ನ ಪಿತೃಗಳೆಂದು ತಿಳಿದುಕೊಂಡು, ದುಃಖಾಶ್ಚರ್ಯಗಳಿಂದ "ಎಲೌ ಪೂಜ್ಯರೇ! ನಾನೇ ನಿಮ್ಮ ಮಗನಾದ ಜರತ್ಕಾರು! ನೀವು ನನ್ನ ಹಿಂದಿನ ಪಿತೃಪಿತಾಮಹರು. ಈಗ ನನ್ನಿಂದ ನಿಮಗೇನಾಗಬೇಕು? ಒಡನೆಯೇ ನಡೆಸುವೆನು. ನಿಮ್ಮ ಇಷ್ಟವನ್ನು ತಿಳಿಸಿರಿ" ಎಂದನು. ಅದಕ್ಕವರು "ವತ್ಸಾ! ನೀನು ಸ್ವತಂತ್ರನು. ನಾವು ಹೆಚ್ಚಾಗಿ ನಿನ್ನನ್ನು ನಿರ್ಬಂಧಿಸಲಾರೆವು. ಆದುದರಿಂದ ಈಗ ನೀನು ನಿನ್ನ, ನಮ್ಮ, ಅಥವಾ ಬೇರೊಬ್ಬರ ಉಪಕಾರಕ್ಕಾಗಿ ಅಲ್ಲದಿದ್ದರೂ, ಇದೊಂದು ಮುಖ್ಯಧರ್ಮವೆಂದು ಭಾವಿಸಿ ನಮ್ಮ ಸಂತತಿಯು ಮುಂದುವರಿಯುವಂತೆ ಮಾಡಬೇಕು. ಕುಮಾರಾ! ಪುತ್ರವಂತರಿಗೆ ಲಭಿಸುವ ಗತಿಯು ಪೂರ್ವಜನ್ಮದಲ್ಲಿ ನಡೆಸಿದ ಬೇರೆ ಎಂತಹ ಪುಣ್ಯಫಲದಿಂದಲೂ ಲಭಿಸಲಾರದು. ಎಷ್ಟೋ ದೃಢತಪಸ್ಸನ್ನು ಮಾಡಿದರೂ ಆ ಗತಿಯು ಲಭಿಸದು. ಆದುದರಿಂದ ಓ ಪುತ್ರಾ! ನೀನು ನಮ್ಮ ಕೋರಿಕೆಯಂತೆ ವಿವಾಹಮಾಡಿಕೊಳ್ಳುವುದಕ್ಕೆ ಪ್ರಯತ್ನಪಟ್ಟು, ಆ ಮೂಲಕವಾಗಿ ಸಂತತಿಯನ್ನು ಪಡೆಯುವುದರಲ್ಲಿ ಮನಸ್ಸಿಡು. ಇದೇ ಈಗ ನಿನ್ನಿಂದ ನಮಗೆ ಆಗಬೇಕಾದ ಪರಮೋಪಕಾರವು" ಎಂದರು.

ಆಗ ಜರತ್ಕಾರುವು "ಓ ಮಹನೀಯರೇ! ನೀವು ಊಹಿಸುವಂತೆ ನಾನು ವಾಸ್ತವದಲ್ಲಿ ನನ್ನ ಜೀವನಸುಖಕ್ಕಾಗಿ ಭಾರ್ಯೆಯನ್ನಾಗಲಿ, ಧನವನ್ನಾಗಲಿ ಅಪೇಕ್ಷಿಸುವವನಲ್ಲ. ನಿಮ್ಮ ಹಿತಕ್ಕಾಗಿಯೇ ಈಗ ನಾನು ವಿವಾಹವನ್ನು ಮಾಡಿಕೊಳ್ಳಬೇಕು ನಿಮ್ಮ ಇಷ್ಟದಂತೆ ನಡೆಯುವೆನು. ಆದರೆ, ವಿವಾಹಮಾಡಿಕೊಳ್ಳಬೇಕಾದರೆ ನನ್ನದೊಂದು ಕಠಿನನಿಯಮವುಂಟು. ಆ ನಿರ್ಣಯದಮೇರೆಗೆ ನನಗೆ ಭಾರ್ಯೆಯು ದೊರಕಿದರೆ

ಮಾತ್ರ ನಾನು ವಿಧ್ಯುಕ್ತವಾಗಿ ವಿವಾಹಮಾಡಿಕೊಳ್ಳುವೆನೇಹೊರತು, ಬೇರೆ ವಿಧವಾಗಿ ನಾನು ಆ ಕಾರ್ಯಕ್ಕೆ ಸಮ್ಮತಿಸಲಾರೆನು. ನನ್ನ ನಿಯಮವೇನೆಂಬುದನ್ನು ಕೇಳಿರಿ. ಕನ್ಯೆಯು ನನ್ನ ಹೆಸರುಳ್ಳವಳಾಗಿಯೇ ಇರಬೇಕು. ಅವಳ ಬಂಧುಗಳು ತಾವಾಗಿ ಬಂದು ಆ ಕನ್ಯೆಯನ್ನು ನನಗೆ ಕೊಡುವ ಉದ್ದೇಶವನ್ನು ಸೂಚಿಸಬೇಕು. ಆಗ ನಾನು ಅವಳನ್ನು ಒಂದು ಭಿಕ್ಷೆಯಂತೆ ಕೈಕೊಂಡು, ಶಾಸ್ತ್ರೋಕ್ತವಾದ ವಿವಾಹವನ್ನು ಮಾಡಿಕೊಳ್ಳುವೆನು. ಬ್ರಾಹ್ಮಣನಾದ ನನಗೆ, ಅದರಲ್ಲಿಯೂ ಕೇವಲ ದರಿದ್ರನಾದವನಿಗೆ ಹೆಣ್ಣನ್ನು ಕೊಡಲು ಯಾರುತಾನೇ ಹುಡುಕಿಕೊಂಡು ಬರುವರು? ಒಂದುವೇಳೆ ಯಾವನಾದರೂ ಹಾಗೆ ಕೊಡುವುದಕ್ಕೆ ಬಂದರೆ, ಭಿಕ್ಷೆಯಂತೆ ನಾನು ಅವಳನ್ನು ಸ್ವೀಕರಿಸುವೆನು. ಈ ನಿರ್ಣಯದಿಂದ ಬೇಕಾದರೆ ವಿವಾಹಕಾರ್ಯಕ್ಕೆ ನಾನು ಪ್ರಯತ್ನಮಾಡುವೆನು. ಬೇರೆವಿಧವಾಗಿ ನಾನು ಸಮ್ಮತಿಸಲಾರೆನು. ನನ್ನ ಇಷ್ಟದಂತೆ ಭಾರ್ಯೆಯು ದೊರಕಿದರೆ ಅವಳಲ್ಲಿ ನಿಮ್ಮನ್ನು ಉದ್ಧರಿಸತಕ್ಕ ಪುತ್ರನು ಹುಟ್ಟಲಿ! ಅವನಿಂದ ಪಿತೃಗಳೆಲ್ಲರೂ ಶಾಶ್ವತವಾದ ಸದ್ಗತಿಯನ್ನು ಹೊಂದಿ ಆನಂದಿಸಲಿ" ಎಂದನು.

ಇದು ಹದಿಮೂರನೆಯ ಅಧ್ಯಾಯವು.

---

(ಜರತ್ಕಾರುವು ವಾಸುಕಿಯ ಒಡಹುಟ್ಟಿದವಳಾದ ಜರತ್ಕಾರುವೆಂಬವಳನ್ನು ವಿವಾಹವಾದುದು.)

ಆಮೇಲೆ ತೀಕ್ಷ್ಣನಿಯಮವುಳ್ಳ ಆ ಬ್ರಾಹ್ಮಣನು, ಪಿತೃಸಂದೇಶಕ್ಕೆ ಕಟ್ಟುಬಿದ್ದು, ವಿವಾಹಕ್ಕಾಗಿ ಭಾರ್ಯೆಯನ್ನು ಪಡೆಯಲುದ್ದೇಶಿಸಿ, ಭೂಮಿಯನ್ನೆಲ್ಲ ತಿರುಗುತಿದ್ದನು. ಅವನ ನಿಯಮಕ್ಕೆ ತಕ್ಕ ಭಾರ್ಯೆಯು ದೊರೆಯುವುದೆಲ್ಲಿ? ಹೀಗೆಯೇ ಸುತ್ತುತ್ತ ಆ ಬ್ರಾಹ್ಮಣನು ಒಮ್ಮೆ ತನ್ನ ಪಿತೃಗಳು ಹೇಳಿದ ಮಾತನ್ನು ನೆನೆಸಿಕೊಂಡು, ನಿರ್ಜನವಾದ ಒಂದಾನೊಂದು ಅರಣ್ಯಮಧ್ಯಕ್ಕೆ ಹೋಗಿ "ಕನ್ಯಾಭಿಕ್ಷೆಯನ್ನು ಬೇಡುವೆನು" ಎಂಬೀ ಮೂರು ಪದಗಳನ್ನು ಮಾತ್ರ ಧೀರಸ್ವರದಿಂದ ಮೆಲ್ಲಗೆ ಕೂಗಿ ಹೇಳಿದನು. ಆಗ ವಾಸುಕಿಯು ಈ ಶಬ್ದವನ್ನು ಕೇಳಿ ತನ್ನ ಪ್ರಿಯಸಹೋದರಿಯನ್ನು

ಅವನಿಗೆ ವಿವಾಹಾರ್ಥವಾಗಿ ಕೊಡಬೇಕೆಂದು ಕರೆತಂದು, ಇವಳನ್ನು ಪ್ರತಿಗ್ರಹಿಸಬೇಕೆಂದು ಹೇಳಿದನು. ಜರತ್ಕಾರುವಾದರೋ ಆ ಕನ್ಯೆಯು ತನ್ನ ಹೆಸರಿನವಳಲ್ಲವೆಂದು ಭಾವಿಸಿ, ಒಡನೆಯೇ ಅವಳನ್ನು ಪ್ರತಿಗ್ರಹಿಸಲು ಇಷ್ಟಪಡಲಿಲ್ಲ. ತನ್ನ ಹೆಸರಿನ ಕನ್ಯೆಯೇ ಆಗಿರಬೇಕೆಂದೂ, ತಂದೆ ತಾಯಿಗಳು ಮೊದಲೇ ಆ ಕನ್ಯೆಯನ್ನು ತನಗಾಗಿ ನಿಶ್ಚಯಿಸಿಕೊಂಡಿರಬೇಕೆಂದೂ, ಅಂತಹ ಕನ್ಯೆಯು ದೊರಕಿದರೆಮಾತ್ರ ವಿವಾಹಮಾಡಿಕೊಳ್ಳಬೇಕೆಂದೂ ಅವನು ನಿಶ್ಚಯಿಸಿದ್ದನು. ಆದುದರಿಂದ ಅವನು ವಾಸುಕಿಯನ್ನು ನೋಡಿ "ಓ ನಾಗವೇ! ಈ ನಿನ್ನ ಸಹೋದರಿಯ ಹೆಸರೇನು? ಸತ್ಯವಾಗಿ ಹೇಳು" ಎಂದನು. ವಾಸುಕಿಯು "ಅಯ್ಯಾ! ಇವಳಿಗೆ ಜರತ್ಕಾರುವೆಂದು ಹೆಸರು. ಇವಳು ನನ್ನ ಸಹೋದರಿ! ನನಗೆ ತಂಗಿ. ಈಕೆಯನ್ನು ನಿನಗೆ ವಿವಾಹಾರ್ಥವಾಗಿ ಕೊಡುವೆನು. ಈ ಸುಂದರಾಂಗಿಯನ್ನು ನೀನು ಭಾರ್ಯೆಯನ್ನಾಗಿ ಪ್ರತಿಗ್ರಹಿಸು. ಓ ಬ್ರಾಹ್ಮಣೋತ್ತಮಾ! ಈಕೆಯನ್ನು ಮೊದಲಿಂದ ನಿನಗಾಗಿಯೇ ಉದ್ದೇಶಿಸಿ ಬೆಳೆಸುತ್ತಿರುವೆನು. ಇವಳನ್ನು ಅಂಗೀಕರಿಸು" ಎಂದು ಹೇಳಿ, ತನ್ನ ಕನ್ಯೆಯನ್ನು ಕೈಹಿಡಿದು ಕರೆದು ಅವನಿಗೆ ಒಪ್ಪಿಸಿದನು. ಜರತ್ಕಾರುವೂ ಕೂಡ ಶಾಸ್ತ್ರೋಕ್ತವಾದ ವಿಧಾನದಿಂದ ಆಕೆಯನ್ನು ವಿವಾಹಮಾಡಿಕೊಂಡನು.

ಇದು ಹದಿನಾಲ್ಕನೆಯ ಅಧ್ಯಾಯವು.

---

## { ಆಸ್ತೀಕನು ಹುಟ್ಟಿದುದು. ಸರ್ಪಮೋಚನವೃತ್ತಾಂತದ ಸಂಕ್ಷೇಪಕಥನವು. }

ಈ ಕಥೆಯನ್ನು ಹೇಳುತ್ತಿದ್ದ ಸೂತಪೌರಾಣಿಕನು ಈ ನಡುವೆ ಶೌನಕಾದಿಗಳನ್ನು ಸಂಬೋಧಿಸಿ, "ಓ ಬ್ರಹ್ಮಜ್ಞಾನಿಗಳೇ! ಪೂರ್ವದಲ್ಲಿ ಒಮ್ಮೆ ಸರ್ಪಗಳಿಗೆ ಆವುಗಳ ತಾಯಿಯಾದ ಕದ್ರುವಿನಿಂದ "ಜನಮೇಜಯನ ಯಾಗದಲ್ಲಿ ಅಗ್ನಿಯಿಂದ ನೀವು ದಗ್ಧರಾಗುವಿರಿ" ಎಂಬ ಶಾಪವು ಪ್ರಾಪ್ತವಾಗಿದ್ದಿತು. ಈ ಶಾಪದ ಉಪಶಮನಾರ್ಥವಾಗಿಯೇ ಸರ್ಪರಾಜನಾದ ವಾಸುಕಿಯು, ಮಹಾತ್ಮನೂ, ಸುವ್ರತನೂ ಆದ ಜರತ್ಕಾರುವಿಗೆ ತನ್ನ

ತಂಗಿಯನ್ನು ಕೊಟ್ಟನು. ಆ ಮಹರ್ಷಿಯೂ ಕೂಡ ವಿಧ್ಯುಕ್ತವಾಗಿ ಅವಳನ್ನು ವಿವಾಹವಾದನು. ಆಕೆಯು ಗರ್ಭದಲ್ಲಿ ಆಸ್ತೀಕನೆಂಬ ಪುತ್ರನನ್ನೂ ಪಡೆದನು. ಆ ಆಸ್ತೀಕನು ಬಹಳ ಉದಾರಸ್ವಭಾವವುಳ್ಳವನು. ಒಳ್ಳೇ ತಪಸ್ಸಂಪನ್ನನು. ಮಹಾಮಹಿಮೆಯುಳ್ಳವನು. ವೇದವೇದಾಂತಪಾರಂಗತನು. ಸಮಸ್ತಜನರಲ್ಲಿಯೂ ಸಮವಾಗಿ ವರ್ತಿಸುತ್ತ, ತನ್ನ ಪಿತೃವಾತೃವರ್ಗಗಳೆರಡಕ್ಕೂ ಉದ್ಧಾರಕನೆನಿಸಿ ಕೀರ್ತಿಗೊಂಡವನಾದನು.

ಅನಂತರದಲ್ಲಿ ಬಹುಕಾಲವು ಕಳೆದಮೇಲೆ, ಪಾಂಡವವಂಶಜನಾದ ಜನಮೇಜಯಮಹಾರಾಜನು ಸರ್ಪಸತ್ರವೆಂಬ ಒಂದು ದೊಡ್ಡ ಯಾಗವನ್ನಾರಂಭಿಸಿ, ಸರ್ಪಗಳನ್ನು ನಿರ್ಮೂಲವಮಾಡುತ್ತಿದ್ದಾಗ, ಮಹಾತಪಸ್ವಿಯಾದ ಆಸ್ತೀಕನು ಬಂದು ಸರ್ಪಯಾಗವನ್ನು ನಿಲ್ಲಿಸುವಂತೆ ಜನಮೇಜಯನನ್ನು ಪ್ರಾರ್ಥಿಸಿ, ತನಗೆ ಸೋದರಮಾವಂದಿರೂ. ಅನ್ಯೋನ್ಯ ಸಹೋದರರೂ ಆದ ಸರ್ಪಗಳನ್ನೂ, ಅದೇ ಜಾತಿಗೆ ಸೇರಿದ ಬೇರೆ ಹಾವುಗಳನ್ನೂ ತಾಯಿಯ ಶಾಪದಿಂದ ತಪ್ಪಿಸಿ ಕಾಪಾಡಿದನು. ಅಲ್ಲದೆ ಸಂತತಿಯನ್ನು ಪಡೆದುದರಿಂದಲೂ, ತನ್ನ ತಪೋಬಲದಿಂದಲೂ ಪಿತೃಗಳನ್ನು ಕೂಡ ದುರ್ಗತಿಯಿಂದ ಉದ್ಧರಿಸಿದನು. ಹೀಗೆ ಆತನು ನಾನಾಬಗೆಯ ವ್ರತಗಳಿಂದ ದೇವಋಣವನ್ನೂ, ವೇದಾಧ್ಯಯನದಿಂದ ಋಷಿಗಳ ಋಣವನ್ನೂ, ಸಂತಾನದಿಂದ ಪಿತೃಋಣವನ್ನೂ ತೀರಿಸಿ, ಮೂರುಬಗೆಯ ಋಣಗಳಿಂದಲೂ ತನ್ನನ್ನು ಮುಕ್ತನನ್ನಾಗಿ ಮಾಡಿಕೊಂಡನು. ಭೂರಿದಕ್ಷಿಣೆಗಳುಳ್ಳ ಯಾಗಗಳಿಂದಲೂ, ಬ್ರಹ್ಮಚರ್ಯದೊಡನೆ ಮಾಡಿದ ವೇದಾಧ್ಯಯನದಿಂದಲೂ, ಪುತ್ರಸಂತಾನದಿಂದಲೂ ಕ್ರಮವಾಗಿ ದೇವತೆಗಳನ್ನೂ, ಋಷಿಗಳನ್ನೂ, ಪಿತೃಗಳನ್ನೂ ವಿಶೇಷವಾಗಿ ತೃಪ್ತಿಹೊಂದಿಸಿದನು. ಈ ಆಸ್ತೀಕನಿಂದಲೇ ಜರುತ್ಕಾರುವು ತನ್ನ ಪಿತೃಗಳಿಗೆ ಸಂಭವಿಸಿದ್ದ ಅಧೋಗತಿಯೆಂಬ ದೊಡ್ಡ ಭಾರವನ್ನಿಳಿಸಿ, ಅವರೊಡನೆ ತಾನೂ ಸ್ವರ್ಗವನ್ನು ಹೊಂದಿದನು. ಆಸ್ತೀಕನ ಚರಿತ್ರವನ್ನು ನಿನಗೆ ಯಥಾವತ್ತಾಗಿ ಸಂಗ್ರಹಿಸಿ ಹೇಳಿದೆನು. ಇದರಮೇಲೆ ಕೇಳಬೇಕಾದುದನ್ನು ಕೇಳು.

ಇದು ಹದಿನೈದನೆಯ ಅಧ್ಯಾಯವು.

ಆಸ್ತೀಕನ ಚರಿತ್ರವನ್ನು ವಿಸ್ತರಿಸಿ ತಿಳಿಸುದುದು. ಕದ್ರು ವಿನ
ತೆಯರಿಬ್ಬರೂ ಕಶ್ಯಪನಿಂದ ವರಗಳನ್ನು ಪಡೆದುದು.
ಕದ್ರುವಿಗೆ ಸರ್ಪಗಳೂ, ವಿನತೆಗೆ ಅನೂರುವೂ (ತೊ
ಡೆಯಿಲ್ಲದ ಅರುಣನು) ಹುಟ್ಟಿದುದು.
ವಿನತೆಗೆ ಅನೂರುವಿನ ಶಾಪವು.

ಶೌನಕನು ಸೂತಪೌರಾಣಿಕನನ್ನು ಕುರಿತು "ಓ ಸೂತಪುತ್ರ! ಈ ಕಥೆಯನ್ನೇ ನೀನು ವಿಸ್ತರಿಸಿ ತಿಳಿಸಬೇಕು ಮಹಾಜ್ಞಾನಿಯೂ, ಪರೋಪಕಾರಿಯೂ ಆದ ಆ ಆಸ್ತೀಕನ ಚರಿತ್ರವನ್ನು ಇನ್ನೂ ವಿವರವಾಗಿ ಕೇಳಲು ನಮ್ಮೆಲ್ಲರಿಗೂ ಕುತೂಹಲವುಂಟು. ಅದರಲ್ಲಿಯೂ ಬಹಳ ಮೃದುವಾಗಿಯೂ, ಸ್ಫುಟಾಕ್ಷರಗಳುಳ್ಳುದಾಗಿಯೂ ಇರುವ ನಿನ್ನ ಭಾಷಣವು ನಮಗೆ ಮತ್ತಷ್ಟು ಆಶೆಹುಟ್ಟಿಸುತ್ತಿರುವುದು. ನಿನ್ನ ತಂದೆ ರೋಮಹರ್ಷಣನಂತೆಯೇ ನೀನೂ ಈ ಕಥಾಪ್ರಸಂಗವನ್ನು ನಡೆಸುತ್ತಿರುವೆ. ನಿನ್ನ ತಂದೆಯು ಯಾವಾಗಲೂ ನಮ್ಮನ್ನು ಈ ವಿಧವಾದ ಕಥಾಪ್ರಪಂಚಗಳಿಂದ ಸಂತೋಷಗೊಳಿಸುತ್ತಿದ್ದವನು. ನೀನೂ ಅದೇ ರೀತಿಯಲ್ಲಿ ಕಥಾಪ್ರಸಂಗಗಳಿಂದ ನಮ್ಮನ್ನು ವಿನೋದಗೊಳಿಸುತ್ತಿರಬೇಕು" ಎಂದರು.

ಅದಕ್ಕಾ ಸೂತಪುತ್ರನು "ಓ ಮಹಾತ್ಮ! ನನ್ನ ತಂದೆಯಿಂದ ನಾನು ಕೇಳಿದಹಾಗೆಯೇ ಅವನ್ನು ನಿಮಗೆ ವಿಸ್ತರಿಸಿ ಹೇಳುವೆನು. ಕೇಳಿರಿ. ಹಿಂದೆ ದೇವಯುಗದಲ್ಲಿ ದಕ್ಷಪ್ರಜಾಪತಿಗೆ ಮಂಗಳಸ್ವರೂಪಿಣಿಯರಾದ ಅದ್ಭುತಸೌಂದರ್ಯವುಳ್ಳ ಇಬ್ಬರು ಹೆಣ್ಣುಮಕ್ಕಳಿದ್ದರು. ಅವರಿಗೆ ಕದ್ರುವೆಂದೂ, ವಿನತೆಯೆಂದೂ ಹೆಸರು. ಅವರಿಬ್ಬರೂ ಕಶ್ಯಪನಿಗೆ ಪತ್ನಿಯರಾದರು. ಸಾಕ್ಷಾತ್ ಚತುರ್ಮುಖಬ್ರಹ್ಮನಿಗೆ ಸಮಾನನಾದ ದಕ್ಷನು ತನ್ನ ಧರ್ಮಪತ್ನಿಯರಾದ ಅವರಿಬ್ಬರ ವಿಷಯದಲ್ಲಿಯೂ ಸಂತೋಷಪಟ್ಟು, ಒಮ್ಮೆ ಪ್ರೀತಿಯಿಂದ ಅವರನ್ನು ಕರೆದು ಅವರವರಿಗೆ ಬೇಕಾದ ವರಗಳನ್ನು ಕೊಡುವುದಾಗಿ ಹೇಳಿದನು. ಹೀಗೆ ಕಶ್ಯಪನು ತಮ್ಮಲ್ಲಿ ಪ್ರೀತಿಗೊಂಡು ವರಗಳನ್ನು ಕೊಡುವುದಕ್ಕೆ ಸಿದ್ಧನಾಗಿರುವುದನ್ನು ತಿಳಿದು, ಅವರಿಬ್ಬರಿಗೂ ಎಣೆಯಿಲ್ಲದ ಸಂತೋಷವಾಯಿತು. ಆಗ ಕದ್ರುವು, ತನಗೆ

ಒಂದೇವಿಧವಾದ ರೂಪವುಳ್ಳ ಸಾವಿರಮಂದಿ ನಾಗರು ಪುತ್ರರಾಗಬೇಕೆಂದು ಕೋರಿದಳು. ವಿನತೆಯಾದರೋ ಕದ್ರುವಿನ ಮಕ್ಕಳಿಗಿಂತಲೂ ಅಧಿಕ ಬಲಾಢ್ಯರಾದ ಇಬ್ಬರು ಪುತ್ರರನ್ನು ತನಗೆ ಕರುಣಿಸಬೇಕೆಂದು ಕೇಳಿದಳು. ಆ ಇಬ್ಬರು ಮಕ್ಕಳೂ ತೇಜಸ್ಸಿನಲ್ಲಿಯೂ, ರೂಪದಲ್ಲಿಯೂ, ಪರಾಕ್ರಮದ ಲ್ಲಿಯೂ ಎಲ್ಲರನ್ನೂ ಮೀರಿದವರಾಗಿರಬೇಕೆಂದು ತಿಳಿಸಿದಳು. ಆಗ ಕಶ್ಯ ಪನು ವಿನತೆಯನ್ನು ಕುರಿತು "ನಿನಗೆ ಅಂತಹ ಪುತ್ರರೇ ಜನಿಸಲಿ" ಎಂದು ವರವನ್ನು ಕೊಟ್ಟನು. ಪತಿಯು ತಾನುಕೋರಿದ ರೀತಿಯಲ್ಲಿಯೇ ತನಗೆ ವರಗಳನ್ನು ಕೊಟ್ಟುದರಿಂದ ವಿನತೆಯು ಬಹಳ ಸಂತುಷ್ಟಳಾದಳು. ಕದ್ರುವಿಗೂ ಕಶ್ಯಪನು ಅವಳು ಕೇಳಿದಂತೆಯೇ ವರವನ್ನು ಕೊಟ್ಟನು. ಆಗ ವಿನತೆಗೆ ತನ್ನ ಗರ್ಭದಲ್ಲಿ ಅತ್ಯಂತಬಲಾಧಿಕರಾದ ಪುತ್ರರು ಜನಿಸು ವರೆಂಬ ಸಂತೋಷವಿದ್ದಂತೆಯೇ, ಕದ್ರುವಿಗೂ ಸಮಾನವರ್ಚಸ್ಸುಳ್ಳ ಸಾವಿ ರಮಂದಿ ಪುತ್ರರು ತನಗೆ ಹುಟ್ಟುವರೆಂಬ ಸಂತೋಷವುಂಟಾಯಿತು. ಇಬ್ಬ ರೂ ತಾವು ಕೃತಾರ್ಥರಾದೆವೆಂದು ತೃಪ್ತರಾಗಿದ್ದರು. ಹೀಗೆ ಸಂತೋಷ ದಿಂದಿದ್ದ ಭಾರ್ಯೆಯರಿಬ್ಬರನ್ನೂ ನೋಡಿ ಕಶ್ಯಪನು "ನೀವಿಬ್ಬರೂ ನಿಮ್ಮನಿಮ್ಮ ಗರ್ಭಗಳನ್ನು ಎಚ್ಚರದಿಂದ ಕಾಪಾಡಿಕೊಳ್ಳಬೇಕು" ಎಂದು ಎಚ್ಚರಿಸಿ ವನಕ್ಕೆ ಹೊರಟುಹೋದನು.

ಓ ವಿಪ್ರೋತ್ತಮಾ! ಆಮೇಲೆ ಬಹುಕಾಲಕ್ಕೆ ಕದ್ರುವಿನ ಗರ್ಭ ದಿಂದ ಸಾವಿರ ಮೊಟ್ಟೆಗಳೂ, ವಿನತೆಯ ಗರ್ಭದಿಂದ ಎರಡು ಮೊಟ್ಟೆಗಳೂ ಜನಿಸಿದುವು. ಹೀಗೆ ಜನಿಸಿದ ಮೊಟ್ಟೆಗಳನ್ನೆಲ್ಲ ಪರಿಚಾರಕಿಯರು ಒಳ್ಳೇ ಶಾಖವಾದ ಗಡಿಗೆಗಳಲ್ಲಿಟ್ಟು, ಐನೂರು ಸಂವತ್ಸರಗಳವರೆಗೆ ಬಹಳ ಎಚ್ಚರ ದಿಂದ ರಕ್ಷಿಸುತ್ತಿದ್ದರು. ಐನೂರು ವರ್ಷಗಳು ಕಳೆಯಲು ಕದ್ರುವಿನ ಗರ್ಭ ದಿಂದ ಹುಟ್ಟಿದ ಮೊಟ್ಟೆಗಳೆಲ್ಲವೂ ಒಡೆದು ಮರಿಯಾಗಿ ಹೊರಕ್ಕೆ ಬಂದುವು. ವಿನತೆಯ ಅಂಡಗಳಾದರೋ ಇನ್ನೂ ಇಟ್ಟಹಾಗೆಯೇ ಇದ್ದುವು. ಆಮೇಲೆ ಹಲವು ದಿನಗಳು ನಿರೀಕ್ಷಿಸಿದರೂ ಆ ಅಂಡಗಳಿಂದ ಆಕಾರಗಳು ಹೊರಡದಿ ದ್ದುದನ್ನು ನೋಡಿ, ವಿನತೆಯು ತನ್ನ ಸ್ಥಿತಿಗೆ ನಾಚಿಕೆಗೊಂಡು, ಮಕ್ಕಳನ್ನು ಕಾಣುವ ಆತುರದಿಂದ ಒಂದು ಮೊಟ್ಟೆಯನ್ನು ನೆಗ್ಗಿಬಿಟ್ಟಳು. ಅದರಲ್ಲಿ

ಮೇಲಿನ ಅರ್ಧದೇಹವು ಮಾತ್ರ ಸರಿಯಾಗಿ ಬೆಳೆದು, ತೊಡೆಯಿಂದಾರಂಭಿಸಿ ಕೆಳಭಾಗದ ಅವಯವಗಳೊಂದೂ ಸ್ಪಷ್ಟವಾಗಿ ಕಾಣದಿರುವ ಒಂದು ಗಂಡುಶಿಶುವು ಕಾಣಿಸಿತು. ಒಡನೆಯೇ ಆ ಪುತ್ರನು ಕೋಪದಿಂದ ರೇಗಿ "ಅಮ್ಮಾ! ನೀನು ಅತ್ಯಾತುರದಿಂದ ಆಶೆಪಟ್ಟು ಹೀಗೆ ನನ್ನ ಶರೀರವು ಪೂರ್ಣವಾಗಿ ಬೆಳೆಯುವುದಕ್ಕೆ ಮೊದಲೇ ಅಂಡವನ್ನು ಒಡೆದುದರಿಂದ, ಎಂದೆಂದಿಗೂ ನಾನು ಅಂಗಹೀನನಾಗಿರುವಂತೆ ಮಾಡಿದೆಯಲ್ಲವೇ ? ಇದರಿಂದ ನೀನು ಯಾರಲ್ಲಿ ಮಾತ್ಸರ್ಯದಿಂದ ನನಗೆ ಈ ಅವಸ್ಥೆಯನ್ನು ತಂದಿಟ್ಟೆಯೋ, ಅವಳಿಗೆ ನೀನು ಐನೂರು ವರ್ಷಗಳವರೆಗೆ ದಾಸಿಯಾಗಿರುವೆ" ಎಂದು ಶಪಿಸಿಬಿಟ್ಟನು. ಆಮೇಲೆ ತಿರುಗಿ ತನ್ನ ತಾಯಿಯನ್ನು ಕುರಿತು "ಓ ಜನನೀ! ಈಗಲಾದರೂ ನೀನು ಇನ್ನೊಂದು ಮೊಟ್ಟೆಯಲ್ಲಿ ಬೆಳೆಯುತ್ತಿರುವ ನಿನ್ನ ಎರಡನೆಯ ಮಗನನ್ನು ಸರಿಯಾಗಿ ಕಾಪಾಡಿಕೊಂಡರೆ ಕ್ಷೇಮವುಂಟು. ಆ ಮೊಟ್ಟೆಯನ್ನೂ ನೀನು ಈಗಲೇ ಒಡೆದು ಅವನನ್ನೂ ನನ್ನಂತೆ ಅಂಗಹೀನನನ್ನಾಗಿಯಾಗಲಿ, ವಿಕೃತಾಂಗನನ್ನಾಗಿಯಾಗಲಿ ಮಾಡದಿದ್ದರೆ ಆತನೇ ನಿನ್ನನ್ನು ಆ ದಾಸ್ಯದಿಂದ ಬಿಡಿಸುವನು. ಇನ್ನೂ ಐನೂರು ವರ್ಷಗಳಾದಮೇಲೆಯೇ ಆ ಪುತ್ರನು ಮೊಟ್ಟೆಯಿಂದ ಹೊರಗೆ ಬರುವನು. ಕದ್ರುವಿನ ಮಕ್ಕಳಿಗಿಂತ ಹೆಚ್ಚು ಬಲಾಢ್ಯರಾದ ಮಕ್ಕಳನ್ನು ನೀನು ಕೋರಿದುದರಿಂದ, ಅಂತಹ ಪುತ್ರರು ಪೂರ್ಣವಾಗಿ ಬೆಳೆಯುವುದಕ್ಕೆ ತಕ್ಕಷ್ಟು ಕಾಲನಿರೀಕ್ಷಣೆಯೂ ಅವಶ್ಯವಲ್ಲವೆ? ಆದುದರಿಂದ ನೀನು ಮನಸ್ಸನ್ನು ದೃಢಮಾಡಿಕೊಂಡು, ಆ ಪುತ್ರನು ತಾನಾಗಿ ಹೊರಗೆ ಬರುವವರೆಗೆ ಆ ಅಂಡವನ್ನು ಕಾಪಾಡುತ್ತಿರಬೇಕು" ಎಂದನು. ಹೀಗೆ ಮೊದಲನೆಯ ಪುತ್ರನು ತನ್ನ ತಾಯಿಯಾದ ವಿನತೆಗೆ ಶಾಪವನ್ನು ಕೊಟ್ಟು ಕೂಡಲೇ ಆಕಾಶಕ್ಕೆ ಹಾರಿ, ಪ್ರಭಾತಸಮಯದಲ್ಲಿ ಕೆಂಪಾದ ಕಾಂತಿಯಿಂದ ಬೆಳಗುತಿದ್ದನು. ಆಗಲೇ ಅಂಧಕಾರವನ್ನು ಭೇದಿಸಿಕೊಂಡು ಉದಯಿಸುತಿದ್ದ ಸೂರ್ಯದೇವನು, ತನಗೆ ಸಮಾನವಾದ ತೇಜಸ್ಸಿನಿಂದ ಜ್ವಲಿಸುತ್ತಿರುವ ಅದ್ಭುತಕಾಂತಿಯುಳ್ಳ ಅರುಣನನ್ನು ನೋಡಿ ಸಂತೋಷಗೊಂಡು, ಅವನನ್ನು ತನ್ನ ಸಾರಥ್ಯಕಾರ್ಯಕ್ಕಾಗಿ ನಿಯಮಿಸಿಕೊಂಡನು. ಎಣೆಯಿಲ್ಲದ

ತೇಜಸ್ಸಿನಿಂದ ಸಮಸ್ತ ಲೋಕಗಳಿಗೂ ಒಂದೇ ದೀಪದಂತೆ ಬೆಳಗುತ್ತಿರುವ ಸೂರ್ಯರಥವನ್ನೇರಿ ಅರುಣನೂ ಕೂಡ ದೇವತೆಯೆನಿಸಿಕೊಂಡನು. ಇತ್ತಲಾಗಿ ನಿಯತಕಾಲವು ಬಂದಮೇಲೆ, ಗರುಡನು ಅಂಡವನ್ನೊಡೆದುಕೊಂಡು ಹೊರಗೆ ಬಂದನು. ಆ ಪುತ್ರನೂಕೂಡ ಹುಟ್ಟಿದಕೂಡಲೇ ಹಸಿವಿನ ಆತುರದಿಂದ ತನಗೆ ಬ್ರಹ್ಮನು ವಿಧಿಸಿದ ಆಹಾರವನ್ನು ಸಂಪಾದಿಸುವುದಕ್ಕಾಗಿ, ತಾಯಿಯ ಸಮೀಪವನ್ನು ಬಿಟ್ಟು ಅಂತರಿಕ್ಷಕ್ಕೆ ಹಾರಿಬಿಟ್ಟನು.

ಇದು ಹದಿನಾರನೆಯ ಅಧ್ಯಾಯವು.

## { ಮಹಾವಿಷ್ಣುವಿನ ಆಜ್ಞೆಯಮೇಲೆ ಅಮೃತಮಥನಕ್ಕಾಗಿ ದೇವತೆಗಳ ಆಲೋಚನೆ. }

ಓ ತಪೋಧನಾ! ಇದೇ ಸಮಯದಲ್ಲಿ ಸಹೋದರಿಯರಾದ ಕದ್ರು ವಿನತೆಯರಿಬ್ಬರೂ ಉಚ್ಚೈಶ್ರವಸ್ಸೆಂಬ ಕುದುರೆಯೊಂದು ತಮ್ಮ ಕಡೆಗೆ ಬರುತ್ತಿರುವುದನ್ನು ಕಂಡರು. ಅದು ದೇವತೆಗಳು ಅಮೃತಮಥನ ಮಾಡುವಾಗ ಹುಟ್ಟಿದ ಉತ್ತಮವಾದ ದಿವ್ಯಾಶ್ವವು. ಆ ಅಶ್ವರತ್ನವನ್ನು ದೇವಸಮೂಹವೆಲ್ಲವೂ ಸಂತೋಷದಿಂದ ಗೌರವಿಸಿ ಪೂಜಿಸುತ್ತಿರುವರು. ಆ ಕುದುರೆಯು ಅಮೋಘವಾದ ಬಲವುಳ್ಳುದು. ಅಶ್ವಜಾತಿಯಲ್ಲಿ ಅತ್ಯುತ್ತಮವಾದುದು. ಅಸಮಾನ ವೇಗವುಳ್ಳುದು. ಅದಕ್ಕೆ ಮುಪ್ಪೆಂಬುದೇ ಇಲ್ಲವು. ಅಸಾಧಾರಣ ತೇಜಸ್ಸಿನಿಂದಲೂ, ಸಮಸ್ತ ಶುಭಲಕ್ಷಣಗಳಿಂದಲೂ ಒಪ್ಪುತ್ತಿರುವುದು. ಅಂತಹ ಅಶ್ವರತ್ನವು ಆ ಸವತಿಯರಿಬ್ಬರಿಗೂ ಸಮೀಪದಲ್ಲಿಯೇ ಕಾಣಿಸಿತು.

ಹೀಗೆ ಸೂತನು ಹೇಳುತ್ತಿರುವಾಗ ನಡುವೆ ಶೌನಕನು “ಓ ಸೂತಪುತ್ರಾ! ಅಧಿಕ ಬಲದಿಂದಲೂ, ಉತ್ತಮ ಕಾಂತಿಯಿಂದಲೂ ಬೆಳಗುತ್ತಿರುವ ಆ ಅಶ್ವರಾಜವು, ಅಮೃತಮಥನಕಾಲದಲ್ಲಿ ಹುಟ್ಟಿದುದಾಗಿ ಹೇಳಿದೆಯಲ್ಲವೆ? ಅಮೃತವನ್ನು ದೇವತೆಗಳು ಎಲ್ಲಿಂದ ಹೇಗೆ ಕಡೆದು ತೆಗೆದರು? ಯಾವ ಕಾರಣಕ್ಕಾಗಿ ಅವರು ಆ ಕಾರ್ಯಕ್ಕೆ ಯತ್ನಿಸಬೇಕಾಯಿತು?

ಅಮೃತವು ಹುಟ್ಟಿದಮೇಲೆ ಅಲ್ಲಿ ಬೇರೆ ಯಾವಯಾವ ವಸ್ತುಗಳು ಹುಟ್ಟಿದುವು? ಇದನ್ನೆಲ್ಲಾ ವಿವರಿಸಿ ಹೇಳಬೇಕು" ಎಂದನು. ಆದಕ್ಕಾ ಸೌತಿಯು "ಶೌನಕಾ! ಕೇಳು! ತೇಜೋರಾಶಿಗಳೆಲ್ಲವೂ ಒಂದಾಗಿ ಸೇರಿ ಪರ್ವತಾಕಾರದಿಂದ ನಿಂತಂತೆ, ಕಾಂತಿಯಿಂದ ಜ್ವಲಿಸುತ್ತ, ತನಗೆ ಎಲ್ಲಿಯೂ ಈಡುಜೋಡಿಲ್ಲದೆ ಮೆರೆಯುತ್ತಿರುವ ಮಹಾಮೇರು ಪರ್ವತವುಂಟಲ್ಲವೆ? ಅದು ಕಾಂತಿಯಿಂದ ಧಗಧಗಿಸುತ್ತಿರುವ ತನ್ನ ಸುವರ್ಣಶಿಖರಗಳ ಪ್ರಕಾಶದಿಂದ, ಸೂರ್ಯಪ್ರಭೆಯೊಡನೆ ಹೋರಾಡಲು ನಿಂತಿರುವಂತೆ ತೋರುವುದು. ಮತ್ತು ಅದು ಸುವರ್ಣಭೂಷಣಗಳಿಂದ ಆಪಾದಚೂಡಪರ್ಯಂತವಾಗಿ ಅಲಂಕರಿಸಲ್ಪಟ್ಟಂತೆ ನಾನಾವರ್ಣಗಳಿಂದ ಶೋಭಿಸುತ್ತಿರುವುದು. ದೇವಗಂಧರ್ವಾದಿಗಳಿಗೆ ಅದು ನಿತ್ಯವಾಸವಾಗಿ ಅವರಿಂದ ಸದಾ ಸೇವಿಸಲ್ಪಡುತ್ತಿರುವುದು. ಅದರ ಆಕೃತಿಯನ್ನು ಅಷ್ಟಿಷ್ಟೆಂದು ಅಳತೆಮಾಡಲು ಯಾರಿಗೂ ಸಾಧ್ಯವಿಲ್ಲ. ಅಧರ್ಮಶೀಲರಿಗೆ ಅದು ದುರ್ಗಮವಾಗಿರುವುದು. ಅದರಲ್ಲಿ ಭಯಂಕರಗಳಾದ ಅನೇಕಸರ್ಪಗಳು ಸೇರಿರುವುವು. ಜ್ಯೋತಿರ್ಲತೆ ಮೊದಲಾದ ದಿವ್ಯೌಷಧಿಗಳು ಅದರಲ್ಲಿ ಜ್ವಲಿಸುತ್ತಿರುವುವು. ಆ ಮಹಾಪರ್ವತವು ತನ್ನ ಔನ್ನತ್ಯದಿಂದ ದೇವಲೋಕವನ್ನೆಲ್ಲ ಮರೆಸುವಂತೆ ಕಾಣಿಸುತ್ತಿರುವುದು. ಸಾಮಾನ್ಯ ಜನರು ಅದನ್ನು ಮನಸ್ಸಿನಿಂದಾದರೂ ದಾಟಲಾರರು. ಅದು ಅಸಂಖ್ಯಾತಗಳಾದ ನದಿಗಳಿಗೂ, ವೃಕ್ಷಗಳಿಗೂ ಆಶ್ರಯವಾಗಿ, ನಾನಾಬಗೆಯ ಪಕ್ಷಿಗಳ ಕಲಕಲ ಧ್ವನಿಯಿಂದ ಕೂಡಿರುವುದು. ಆ ಮಹಾಪರ್ವತದಮೇಲೆ ಅನೇಕ ರತ್ನಕಾಂತಿಯಿಂದ ಬೆಳಗುತ್ತ, ಕೊನೆಗಾಣದಂತೆ ಮಹೋನ್ನತವಾಗಿ ಬೆಳೆದಿರುವ ಒಂದು ಶಿಖರವುಂಟು. ಮಹಾತೇಜಸ್ವಿಗಳೂ, ತಪೋವ್ರತಸಂಪನ್ನರೂ ಆದ ದೇವಶ್ರೇಷ್ಠರು, ಒಮ್ಮೆ ಆ ಶಿಖರದಲ್ಲಿ ಕುಳಿತು, ಅಮೃತವನ್ನು ಪಡೆಯುವ ಉಪಾಯವನ್ನು ಕುರಿತು ಆಲೋಚಿಸತೊಡಗಿದರು. ಈ ಸಮಯದಲ್ಲಿ ಭಗವಂತನಾದ ಶ್ರೀಮನ್ನಾರಾಯಣನು ಬ್ರಹ್ಮನನ್ನು ಕುರಿತು "ಈ ದೇವತೆಗಳೆಲ್ಲರೂ ದೈತ್ಯರನ್ನೂ ತಮ್ಮೊಡನೆ ಸೇರಿಸಿಕೊಂಡು ಕ್ಷೀರಸಮುದ್ರವನ್ನು ಕಡೆಯಲಿ. ಹಾಗೆ ಕಡೆಯುವಾಗ ಅಮೃತವು ಹುಟ್ಟುವುದು" ಎಂದು ಹೇಳಿ, ಆಮೇಲೆ ಅಲ್ಲಿದ್ದ ದೇವತೆಗಳನ್ನು

ನೋಡಿ "ಎಲೈ ದೇವಶ್ರೇಷ್ಠರೇ! ಸಮಸ್ತವಿಧಗಳಾದ ಓಷಧಿಗಳನ್ನೂ ಸಕಲ ರತ್ನಗಳನ್ನೂ ಸಮುದ್ರದಲ್ಲಿ ಹಾಕಿ ಅದನ್ನು ಚೆನ್ನಾಗಿ ಮಥಿಸಿರಿ. ಆಗ ನಿಮಗೆ ಅಮೃತವು ದೊರೆಯುವುದು" ಎಂದನು.

ಇದು ಹದಿನೇಳನೆಯ ಅಧ್ಯಾಯವು.

{ ವಿಷ್ಣುವು ಮೋಹಿನೀರೂಪವನ್ನು ತಾಳಿ, ಅಸುರರನ್ನು ಮರುಳು ಗೊಳಿಸಿ, ಅಮೃತಕಲಶವನ್ನು ತಾನು ತೆಗೆದುಕೊಂಡುದು. }

ಸೂತನು ಶೌನಕನನ್ನು ಕುರಿತು "ಓ ಶೌನಕಾ! ಆಮೇಲೆ ದೇವತೆಗಳೆಲ್ಲರೂ ಸೇರಿ ಮೇಘಗಳಂತಿರುವ ಶಿಖರಗಳಿಂದಲೂ, ಲತಾಸಮೂಹಗಳಿಂದಲೂ, ನಾನಾವಿಧ ಪಕ್ಷಿಗಳ ಕಲಕಲ ಧ್ವನಿಗಳಿಂದಲೂ ಅತ್ಯಂತ ಮನೋಹರವಾದ ಮಂದರಪರ್ವತದ ಸಮೀಪಕ್ಕೆ ಬಂದರು. ಅದರಲ್ಲಿ ಹಲವುಬಗೆಯ ಸರ್ಪಗಳು ತುಂಬಿರುವುವು. ಅದನ್ನು ಕಿನ್ನರರೂ ಅಪ್ಸರಸ್ಸುಗಳೂ, ದೇವತೆಗಳೂ ಸೇವಿಸುತ್ತಿರುವರು. ಆ ಪರ್ವತವು ಹನ್ನೊಂದು ಸಾವಿರ ಯೋಜನಗಳ ಎತ್ತರವುಳ್ಳುದಾಗಿ, ಭೂಮಿಯ ಕೆಳಗೂ ಅಷ್ಟೇ ಯೋಜನಗಳ ಕೆಳಕ್ಕಿಳಿದಿರುವುದು. ದೇವತೆಗಳೆಲ್ಲರೂ ಸೇರಿ ಆ ಪರ್ವತವನ್ನು ಕಿತ್ತುತರಲು ಆದಷ್ಟು ಪ್ರಯತ್ನಮಾಡಿದರು. ಅವರಿಂದ ಸಾಧ್ಯವಾಗಲಿಲ್ಲ. ಒಡನೆಯೇ ಅವರು, ವಿಷ್ಣುವೂ ಬ್ರಹ್ಮನೂ ಕೂಡಿದ್ದ ಸ್ಥಳಕ್ಕೆ ಬಂದು ಅವರನ್ನು ನಮಸ್ಕರಿಸಿ "ಪ್ರಭೂ! ಮಂದರಪರ್ವತವನ್ನು ಮೇಲಕ್ಕೆತ್ತಬೇಕಾಗಿರುವುದು. ಅದು ನಿಮ್ಮಿಬ್ಬರಿಂದಲ್ಲದೆ ಸಾಧ್ಯವಾಗತಕ್ಕ ಕಾರ್ಯವಲ್ಲ. ನೀವೇ ಅದಕ್ಕೆ ಉಪಾಯವನ್ನು ಯೋಚಿಸಬೇಕು. ನಮ್ಮ ಹಿತಕ್ಕಾಗಿ ನೀವು ಈ ಪ್ರಯತ್ನವನ್ನು ಮಾಡಬೇಕು" ಎಂದು ಪ್ರಾರ್ಥಿಸಿದರು. ಇದನ್ನು ಕೇಳಿ ದಯಾಸಾಗರನಾಗಿಯೂ, ಅಪ್ರಮೇಯ ಸ್ವರೂಪನಾಗಿಯೂ, ಪುಂಡರೀಕಾಕ್ಷನಾಗಿಯೂ ಇರುವ ಶ್ರೀಮಹಾವಿಷ್ಣುವು ದೇವತೆಗಳಿಗೆ "ಹಾಗೆಯೇ ಆಗಲೆಂದು" ಅಭಯವನ್ನು ಕೊಟ್ಟನು ಬ್ರಹ್ಮನೂ ಸಮ್ಮತಿಸಿದನು. ಆಗ ವಿಷ್ಣುವು ಸರ್ಪರಾಜನಾದ ಆದಿಶೇಷನನ್ನು ಕರೆದು ಆ ಕೆಲಸದಲ್ಲಿ ದೇವತೆಗಳಿಗೆ ಸಹಾಯಮಾಡುವಂತೆ ನಿಯಮಿಸಿದನು.

ವಿಷ್ಣುವಿನಿಂದಲೂ, ಬ್ರಹ್ಮನಿಂದಲೂ ಆಜ್ಞಪ್ತನಾದ ಆದಿಶೇಷನು, ಒಡನೆಯೇ ಮಂದರಪರ್ವತದ ಬಳಿಗೆ ಹೊರಟುಬಂದನು. ಅನಂತನೆನಿಸಿಕೊಂಡು ಮಹಾಬಲಸಂಪನ್ನನಾದ ಆದಿಶೇಷನು, ಆ ಮಹಾಪರ್ವತವನ್ನು ತನ್ನ ಮೈಯಿಂದ ಸುತ್ತಿಕೊಂಡು, ಅದರಲ್ಲಿರುವ ಅಡವಿಗಳೊಡನೆಯೂ, ಅಡವಿಯಲ್ಲಿರುವ ಎಲ್ಲಾ ವಸ್ತುಗಳೊಡನೆಯೂ ಮೇಲಕ್ಕೆ ಕಿತ್ತುಬಿಟ್ಟನು. ಆ ಮೇಲೆ ದೇವತೆಗಳೆಲ್ಲರೂ ಪರ್ವತಸಹಿತನಾದ ಆದಿಶೇಷನೊಡನೆ ಸಮುದ್ರದ ಬಳಿಗೆ ಬಂದು ಸಮುದ್ರರಾಜನನ್ನು ನೋಡಿ "ನಾವು ಅಮೃತಕ್ಕಾಗಿ ನಿನ್ನ ಜಲವನ್ನು ಮಥಿಸುವೆವು. ನೀನು ಅನುಮತಿಸಬೇಕು" ಎಂದು ಕೇಳಲು, ಸಮುದ್ರವು ಅವರನ್ನು ಕುರಿತು "ಓ ದೇವತೆಗಳಿರಾ! ನನಗೂ ಆ ಅಮೃತದಲ್ಲಿ ನೀವು ಭಾಗವನ್ನು ಕೊಡುವುದಾದರೆಮಾತ್ರ ನಾನು ಮಂದರಪರ್ವತವು ತಿರುಗುವುದರಿಂದಾಗುವ ತೊಂದರೆಯನ್ನಾದರೂ ಸಹಿಸಿಕೊಳ್ಳುವೆನು" ಎಂದನು. ಆಮೇಲೆ ದೇವಾಸುರರಿಬ್ಬರೂ ಸಮುದ್ರದಲ್ಲಿದ್ದ ಕೂರ್ಮರಾಜನನ್ನು ನೋಡಿ, ಮಂದರಪರ್ವತವು ಜಲದಲ್ಲಿ ಮುಳುಗಿಹೋಗದಂತೆ ಅದಕ್ಕಾಧಾರವಾಗಿ ಇರಬೇಕೆಂದು ಕೇಳಿಕೊಂಡರು. ಆ ಕೂರ್ಮವೂ "ಹಾಗೆಯೇ ಆಗಲಿ" ಎಂದು ಒಪ್ಪಿ, ಆ ಪರ್ವತಕ್ಕೆ ತನ್ನ ಬೆನ್ನನ್ನು ಆಧಾರವಾಗಿ ನಿಲ್ಲಿಸಿದನು. ಆಗ ಇಂದ್ರನು ಆ ಕೂರ್ಮನ ಬೆನ್ನಿನಮೇಲೆ ಪರ್ವತವು ಸರಿಯಾಗಿ ನಿಲ್ಲುವಂತೆ ಆ ಬೆನ್ನನ್ನು ತಟ್ಟೆಮಟ್ಟವಾಗಿ ಮಾಡಿದನು. ಹೀಗೆ ದೇವಾಸುರರಿಬ್ಬರೂ ಸೇರಿ ಮಂದರಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡು, ಅಮೃತಕ್ಕಾಗಿ ಸಮುದ್ರವನ್ನು ಕಡೆಯತೊಡಗಿದರು. ಬಲಾಧಿಕರಾದ ದಾನವರು ವಾಸುಕಿಯ ತಲೆಯಭಾಗವನ್ನು ಹಿಡಿದರು. ದೇವತೆಗಳೆಲ್ಲರೂ ಸೇರಿ ಮೊದಲೇ ಭಗವಂತನಾದ ಶ್ರೀಮನ್ನಾರಾಯಣನು ನಿಂತಿದ್ದ ಬಾಲದ ಪಕ್ಕದಲ್ಲಿ ನಿಂತರು. ಹೀಗೆ ವಾಸುಕಿಯ ಮುಖಭಾಗವನ್ನು ಅಸುರರೂ, ಬಾಲದ ಕಡೆಯನ್ನು ದೇವತೆಗಳೂ ಹಿಡಿದು ಕಡೆಯುತ್ತಿರುವಾಗ, ಅಸುರರು (ಬಲದ ಗರ್ವದಿಂದ) ಆ ವಾಸುಕಿಯ ತಲೆಯನ್ನು ಬಾರಿಬಾರಿಗೂ ಮೇಲಕ್ಕೆತ್ತಿ ನೆಲಕ್ಕೆ ಕುಕ್ಕುತಿದ್ದರು ಹೀಗೆ ಅವರು ವೇಗದಿಂದ ನೆಲಕ್ಕೆ ಬಡಿಯುತ್ತಿದ್ದುದರಿಂದ, ನಾಗ

ರಾಜನಾದ ವಾಸುಕಿಯ ಮುಖದಲ್ಲಿ ಹೊಗೆಯಿಂದಲೂ, ಉರಿಯಿಂದಲೂ ಕೂಡಿದ ನಿಟ್ಟುಸಿರಿನ ಗಾಳಿಯು ಮೇಲೆಮೇಲೆ ಪ್ರಬಲವಾಗಿ ಹೊರಡಲಾರಂಭಿಸಿತು. ಅದರೊಡನೆ ಅವನ ಮುಖದಲ್ಲಿದ್ದ ವಿಷವೂ ಕೂಡ ಹೊರಗೆ ಬಂದು, ಆ ವಿಷವು ಸಮುದ್ರದಲ್ಲಿ ಕಲೆಸಿಹೋಯಿತು. ದೇವದಾನವರಿಬ್ಬರೂ ತಮ್ಮ ಭುಜಬಲದಿಂದ ಸಮುದ್ರವನ್ನು ಬಲವಾಗಿ ಕಡೆಯುತ್ತಿರುವಾಗ, ಹಾಲಾಹಲವೆಂಬ ಮಹಾಕ್ರೂರವಿಷವು ಹುಟ್ಟಿತಂತೆ! ಆ ವಿಷದಿಂದಲೇ ದೇವದಾನವರೆಲ್ಲರೂ ದಗ್ಧರಾಗಿ, ಅದರ ತಾಪವನ್ನು ತಡೆಯಲಾರದೆ ಭಯದಿಂದ ತಮ್ಮ ಪ್ರಯತ್ನವನ್ನು ಅಷ್ಟಕ್ಕೇ ನಿಲ್ಲಿಸಿ, ಆ ಸ್ಥಳವನ್ನು ಬಿಟ್ಟು ಓಡಿಹೋಗಿ ಹಿಂದುಮುಂದುತೋರದೆ ಚಿಂತಾಕುಲರಾಗಿದ್ದರು. ಆಮೇಲೆ ಅವರು ಮಹರ್ಷಿಗಳೊಡನೆ ಸೇರಿ ಬ್ರಹ್ಮದೇವನ ಬಳಿಗೆ ಬಂದು “ ಓ ಪಿತಾಮಹಾ ! ನಾವು ಅಮೃತಕ್ಕಾಗಿ ಸಮುದ್ರವನ್ನು ಮಥಿಸುತ್ತಿರುವಾಗ ಕಾಲಾಗ್ನಿಯಂತೆ ಜ್ವಲಿಸುತ್ತಿರುವ ಒಂದಾನೊಂದು ವಿಷವು ಹುಟ್ಟಿತು. ಅದರ ತಾಪದಿಂದ ಲೋಕವೆಲ್ಲವೂ ತತ್ತಳಿಸುತ್ತಿರುವುದು. ಅದಕ್ಕೇನಾದರೂ ಪರಿಹಾರವನ್ನು ನೀನೇ ಯೋಚಿಸಬೇಕು ” ಎಂದರು. ಆಗ ಬ್ರಹ್ಮನು ತನ್ನ ಮನಸ್ಸಿನಲ್ಲಿ ಲೋಕೇಶ್ವರನೂ, ಆಪನ್ನಿವಾರಕನೂ, ದೇವದೇವನೂ, ಉಮಾಪತಿಯೂ, ತ್ರಿಶೂಲಿಯೂ, ತ್ರಿಣೇತ್ರನೂ ಆದ ಶಿವನನ್ನು ಧ್ಯಾನಿಸಲು, ಒಡನೆಯೇ ಶಿವನು ಆತನಿಗೆ ಪ್ರತ್ಯಕ್ಷನಾದನು. ಬ್ರಹ್ಮನು ನಡೆದ ಸಂಗತಿಯನ್ನೆಲ್ಲ ಅವನಿಗೆ ತಿಳಿಸಿದನು. ಇದನ್ನು ಕೇಳಿದೊಡನೆ ದೇವದೇವೇಶ್ವರನಾದ ರುದ್ರನು, ಪ್ರಪಂಚಕ್ಕೆಲ್ಲಾ ಹಿತವನ್ನು ಕೋರಿ, ಕಾಲಾಗ್ನಿಯಂತೆ ಜ್ವಲಿಸುತಿದ್ದ ಆ ವಿಷವನ್ನು ತೆಗೆದು ನುಂಗಿಬಿಟ್ಟನು. ಆದರೆ ಆ ಮಹೇಶ್ವರನು ತನ್ನ ಉದರಲ್ಲಿರುವ ಲೋಕಗಳಿಗೆಲ್ಲ ಆ ವಿಷದಿಂದ ಅಪಾಯುವಾಗಬಾರದೆಂದೆಣಿಸಿ ಆ ವಿಷವನ್ನು ತನ್ನ ಕಂಠದಿಂದ ಕೆಳಕ್ಕೆ ಹೋಗದಂತೆ ಅಲ್ಲಿಯೇ ತಡೆದು ನಿಲ್ಲಿಸಿಕೊಂಡನು. ಆ ವಿಷವು ಅವನ ಕಂಠದಲ್ಲಿ ಕರೆಯಾಗಿ ನಿಂತುದರಿಂದಲೇ, ಅವನಿಗೆ ನೀಲಕಂಠನೆಂಬ ಹೆಸರು ಪ್ರಸಿದ್ಧವಾಗಿದೆ. ಈ ವಿಷಬಾಧೆಯು ತಪ್ಪಿದುದರಿಂದ, ದೇವತೆಗಳು ಸಂತುಷ್ಟರಾಗಿ, ತಿರುಗಿ ಸಮುದ್ರತೀರಕ್ಕೆ ಬಂದು ಅದನ್ನು ಕಡೆಯತೊಡಗಿದರು. ದೇವದಾನವರಿಬ್ಬರೂ ಮೊದಲಿನಂತೆ ಕಡೆಯುತ್ತಿ

ಲುವಾಗ, ದಾನವರು ತಿರುಗಿ ವಾಸುಕಿಯ ಮುಖವನ್ನು ಮೇಲಕ್ಕೆತ್ತಿ ಬಾರಿ ಬಾರಿಗೂ ನೆಲಕ್ಕೆ ಬಡಿಯುತ್ತಿರಲು, ಉರಿಯಿಂದಲೂ, ಹೊಗೆಯಿಂದಲೂ ಕೂಡಿ ಉಸಿರಿನ ಗಾಳಿಯು ಹೊರಡುತ್ತಿತ್ತು. ಆದರೆ ಈ ಹೊಗೆಯೂ, ಜ್ವಾಲೆಗಳೂ ಆಕಾಶದಲ್ಲಿ ಮೇಘಗಳಾಗಿಯೂ, ಮಿಂಚುಗಳಾಗಿಯೂ ಪರಿಣಮಿಸಿ, ದೇಹಶ್ರಮದಿಂದ ಬಹಳವಾಗಿ ಬಳಲಿದ ದೇವತೆಗಳ ಆಯಾಸ ಪರಿಹಾರಕ್ಕಾಗಿ, ಅವರ ಮೈಮೇಲೆ ಮಳೆಯನ್ನು ಸುರಿಸುತಿದ್ದುವು. ಆ ಮಂದರಪರ್ವತದ ಶಿಖರದಿಂದ ಈ ದೇವಾಸುರರಮೇಲೆ ಪುಷ್ಪವರ್ಷಗಳೂ ಸುರಿಯಲಾರಂಭಿಸಿದುವು. ಹೀಗೆ ದೇವಾಸುರರು ಉತ್ಸಾಹದಿಂದ ಸಮುದ್ರವನ್ನು ಕಡೆಯುತ್ತಿರುವಾಗ, ಆ ಸಮುದ್ರದ ಮಧ್ಯದಲ್ಲಿ ಮಹಾಮೇಘಧ್ವನಿಯಂತೆ ಒಂದು ದೊಡ್ಡ ಶಬ್ದವು ಹೊರಟಿತು. ಈ ಪರ್ವತದ ಘರ್ಷಣದಿಂದ ಸಮುದ್ರದಲ್ಲಿದ್ದ ನಾನಾವಿಧಜಲಜಂತುಗಳು ನಜ್ಜುಗುಜ್ಜಾದುವು. ಕೋಟ್ಯನುಕೋಟಿ ಪ್ರಾಣಿಗಳು ನಾಶಹೊಂದಿದುವು. ಆ ಪರ್ವತದ ಬುಡವು ಪಾತಾಳದಲ್ಲಿರುವ ವರುಣಲೋಕದವರೆಗೆ ಮುಟ್ಟಿ, ಅಲ್ಲಿ ಅನೇಕಜಂತುಗಳನ್ನು ನಾಶವಮಾಡಿತು. ಆ ಮಂದರವು ಗಿರಗಿರನೆ ಸುತ್ತುತ್ತಿರುವಾಗ, ಅದರಮೇಲೆ ಬೆಳೆದಿದ್ದ ದೊಡ್ಡದೊಡ್ಡ ವೃಕ್ಷಗಳೆಲ್ಲವೂ ಒಂದಕ್ಕೊಂದು ಘಟ್ಟಿಸಿ, ತಮ್ಮಲ್ಲಿರುವ ಪಕ್ಷಿಸಮೂಹಗಳೊಡನೆ ಮುರಿದು ಬೀಳುತಿದ್ದುವು. ಆ ವೃಕ್ಷಗಳು ಒಂದಕ್ಕೊಂದು ತೇಯುವುದರಿಂದ ಉಂಟಾದ ಬೆಂಕಿಯು, ಅತಿತೀವ್ರವಾಗಿ ಜ್ವಲಿಸುತ್ತ, ಮಿಂಚು ಮೇಘವನ್ನಾವರಿಸಿಕೊಳ್ಳುವಂತೆ ಮಂದರಪರ್ವತವನ್ನೆಲ್ಲಾ ವ್ಯಾಪಿಸಿತು. ಈ ಜ್ವಾಲೆಯು ಅಲ್ಲಲ್ಲಿ ಗುಹೆಗಳಿಂದ ಹೊರಕ್ಕೆ ಬಂದ ಆನೆಗಳನ್ನೂ, ಸಿಂಹಗಳನ್ನೂ ಕ್ಷಣಮಾತ್ರದಲ್ಲಿ ದಹಿಸಿಬಿಟ್ಟಿತು. ಹೀಗೆ ಮಥನಕಾಲದಲ್ಲಿ ಅಲ್ಲಿನ ಜಂತುಗಳೆಲ್ಲವೂ ನಾನಾಬಗೆಯ ಉಪಮರ್ದನಕ್ಕೆ ಸಿಕ್ಕಿ ಸಾಯುತಿದ್ದುವು. ಆಗ ದೇವೇಂದ್ರನು ಅಗ್ನಿಜ್ವಾಲೆಯಿಂದ ಅನೇಕಪ್ರಾಣಿಗಳು ದಗ್ಧವಾಗುತ್ತಿರುವುದನ್ನು ನೋಡಿ, ಮೇಘಗಳನ್ನು ಪ್ರೇರಿಸಿ ಮಳೆಯನ್ನು ಸುರಿಸಿ, ಅಗ್ನಿಯನ್ನು ಶಮನಮಾಡಿದನು. ಅಗ್ನಿಯು ಶಾಂತವಾದೊಡನೆ ಆ ಪರ್ವತದ ಮೇಲಿನ ಮಹಾವೃಕ್ಷಗಳಿಂದ ವಿಧವಿಧವಾದ ಮರದ ಹಾಲುಗಳೂ, ಓಷಧಿರಸಗಳೂ ಸ್ರವಿಸಿ, ಸಮುದ್ರಜಲದಲ್ಲಿ ಬಿದ್ದುವು. ಅಮೃತದಂತೆ ಸಾರ

ವುಳ್ಳ ಓಷಧಿ ರಸಗಳಿಂದ ಕಲೆತ ಮರದ ಹಾಲುಗಳಿಂದಲೂ, ಕರಗಿ ನೀರಾಗಿ ಸ್ರವಿಸುತಿದ್ದ ಬಂಗಾರದ ರಸದಿಂದಲೂ ದೇವತೆಗಳಿಗೆ ಅಮರತ್ವವುಂಟಾಯಿತು. ಸಮುದ್ರದ ಜಲವು ಆ ರಸದಿಂದ ಕೂಡಿದುದರಿಂದಲೇ ಮೊದಲು ಉಪ್ಪಾಗಿದ್ದ ಸಮುದ್ರದ ನೀರು ಹಾಲಾಗಿ ಪರಿಣಮಿಸಿತು. ಆ ಹಾಲಿನಿಂದಲೇ ಬೆಣ್ಣೆ ತುಪ್ಪಗಳುಂಟಾದುವು.

ಆಮೇಲೆ ದೇವತೆಗಳು ಅಲ್ಲಿ ಕುಳಿತಿದ್ದ ವರಪ್ರದನಾದ ಬ್ರಹ್ಮನ ಬಳಿಗೆ ಬಂದು "ಓ ದೇವಾ! ಶ್ರೀಮನ್ನಾರಾಯಣನೊಬ್ಬನು ಹೊರತು, ದೇವದಾನವರಾದ ನಾವೆಲ್ಲರೂ ಈ ಕಾರ್ಯದಲ್ಲಿ ಬಹಳವಾಗಿ ದಣಿದು ಹೋದೆವು. ಇಷ್ಟಾದರೂ ಅಮೃತವು ಹುಟ್ಟಲಿಲ್ಲ. ಸಮುದ್ರವನ್ನು ಕಡೆಯಲಾರಂಭಿಸಿ ಬಹುಕಾಲವಾಯಿತು. ಇನ್ನು ನಮ್ಮಿಂದ ಕಡೆಯಲು ಸಾಧ್ಯವಿಲ್ಲ. ಇನ್ನೂ ಅಮೃತವು ಲಭಿಸಲಿಲ್ಲ! ಏನು ಮಾಡುವುದು?" ಎಂದರು. ಆಗ ಬ್ರಹ್ಮನು ಶ್ರೀಮನ್ನಾರಾಯಣನ ಮುಂದೆಬದ್ಧಾಂಜಲಿಯಾಗಿ "ಓ ದೇವಾ! ಈ ವಿಷಯದಲ್ಲಿ ನೀನೇ ನಮಗೆ ಪರಮಗತಿ. ಇವರಿಗೆ ಬಲವನ್ನುಂಟುಮಾಡು!" ಎನಲು, ವಿಷ್ಣುವು "ಸರಿ, ಹಾಗೆಯೇ ಆಗಲಿ. ಈ ಕಾರ್ಯದಲ್ಲಿ ಪ್ರಯತ್ನಿಸುವವರೆಲ್ಲರಿಗೂ ಬಳಲಿಕೆಯು ಹೋಗಿ, ತಿರುಗಿ ಬಲವು ಬರುವಂತೆ ಅನುಗ್ರಹಿಸಿರುವೆನು. ಎಲ್ಲರೂ ಸೇರಿ ಮೊದಲಿನಂತೆ ಮಂದರಪರ್ವತದಿಂದ ಹಾಲನ್ನು ಕಡೆಯಲಿ" ಎಂದನು.

ಶ್ರೀಮನ್ನಾರಾಯಣನ ಬಾಯಿಂದ ಹೊರಟ ಮಾತು ಕಿವಿಗೆ ಬಿದ್ದೊಡನೆ, ದೇವಾಸುರರಿಗೆ ಶ್ರಾಂತಿಯು ಹೋಗಿ, ಮೊದಲಿನಂತೆ ಬಲವೂ ಉತ್ಸಾಹವೂ ಹೆಚ್ಚಿತು. ತಿರುಗಿ ಎಲ್ಲರೂ ಒಂದಾಗಿ ಸೇರಿ ಕ್ಷೀರಸಮುದ್ರವನ್ನು ಬಲವಾಗಿ ಕಡೆಯಲಾರಂಭಿಸಿದರು. ಅದರಲ್ಲಿ ಮೊದಲು ಹುಟ್ಟಿದ ವಿಷವನ್ನು ಬ್ರಹ್ಮನ ಮಾತಿನಮೇಲೆ ಲೋಕರಕ್ಷಣಕ್ಕಾಗಿ ಶಿವನು ನುಂಗಿಬಿಟ್ಟನಲ್ಲವೇ? ಆಮೇಲೆ ಕಡೆಯುತ್ತಿರುವಾಗ ಸರ್ವಾಭರಣಗಳಿಂದಲಂಕೃತಳಾಗಿ ಕಪ್ಪುಬಣ್ಣವುಳ್ಳ ಜ್ಯೇಷ್ಠಾದೇವಿಯು ಉದ್ಭವಿಸಿದಳು. ಇನ್ನೂ ಬಿಡದೆ ಸಮುದ್ರವನ್ನು ಮಥಿಸುತ್ತಿರುವಾಗ, ನೂರುಸಾವಿರ ಶಾಖೆಗಳಾಗಿ ಹೊರ

ಡುವ ಶೀತಲ ಕಿರಣವುಳ್ಳವನಾಗಿಯೂ, ಪ್ರಸನ್ನ ಸ್ವರೂಪನಾಗಿಯೂ, ಪ್ರಕಾಶಮಾನವಾದ ಸ್ವಚ್ಛಕಾಂತಿಯುಳ್ಳವನಾಗಿಯೂ ಇರುವ ಚಂದ್ರನು ಹುಟ್ಟಿದನು. ಆಮೇಲೆ ಬೆಣ್ಣೆಗಿಂತಲೂ ಶುದ್ಧವಾದ ದುಕೂಲವನ್ನು ಧರಿಸಿದ ಶ್ರೀದೇವಿಯೂ, ಆಮೇಲೆ ಸುರಾದೇವಿಯೂ ಹುಟ್ಟಿದರು. ಆಮೇಲೆ ಬಿಳುಪಾದ ಕುದುರೆಯೊಂದು ಹುಟ್ಟಿತು. ಆಮೇಲೆ ಸುತ್ತಲೂ ಕಾಂತಿಯನ್ನು ಚೆಲ್ಲುತ್ತಿರುವ ದಿವ್ಯವಾದ ಮತ್ತು ಈಗಲೂ ಶ್ರೀಮನ್ನಾರಾಯಣನ ವಕ್ಷಸ್ಥಲಕ್ಕೆ ಅಲಂಕಾರಭೂತವಾಗಿರುವ ಕೌಸ್ತುಭಮಣಿಯು ಹುಟ್ಟಿತು. ಹೀಗೆ ಹುಟ್ಟಿದವರಲ್ಲಿ ಲಕ್ಷ್ಮಿಯೂ, ಸುರೆಯೂ, ಚಂದ್ರನೂ, ಮನೋವೇಗವುಳ್ಳ ಅಶ್ವವೂ ದೇವತೆಗಳನ್ನು ಸೇರಿದುವು. ಆಮೇಲೆ ತಿರುಗಿ ಸಮುದ್ರವನ್ನು ಕಡೆಯುತ್ತಿರುವಾಗ, ಕೋರಿದ ಫಲಗಳನ್ನು ಕೊಡತಕ್ಕ ಕಲ್ಪವೃಕ್ಷಗಳೂ, ಕಾಮಧೇನುವೂ ಹುಟ್ಟಿದುವು. ಆಮೇಲೆ ದೊಡ್ಡ ದೇಹವೂ, ನಾಲ್ಕು ದಂತಗಳೂ ಉಳ್ಳ ಐರಾವತವೆಂಬ ಮಹಾಗಜವು ಹುಟ್ಟಿತು. ಕಾಮಧೇನುವೂ, ಕಲ್ಪವೃಕ್ಷವೂ, ಕೌಸ್ತುಭಮಣಿಯೂ, ಅಪ್ಸರಸ್ಸುಗಳೂ ಸೂರ್ಯನ ಸಂಚಾರಕ್ಕೆ ಯೋಗ್ಯವಾದ ಆಕಾಶಮಾರ್ಗವಾಗಿ ಹೊರಟು, ದೇವತೆಗಳಿದ್ದ ಸ್ಥಳವನ್ನು ಸೇರಿದುವು. ಅದರಿಂದಾಚೆಗೆ ಸುಂದರವಾದ ದೇಹವುಳ್ಳ ಧನ್ವಂತರಿಯೆಂಬ ದಿವ್ಯಪುರುಷನು, ಅಮೃತಪೂರ್ಣವಾದ ಬಿಳೀಕಲಶದೊಡನೆ ಹೊರಕ್ಕೆ ಬಂದನು. ಆಶ್ಚರ್ಯಕರವಾದ ಆ ವ್ಯಕ್ತಿಯನ್ನು ಕಂಡೊಡನೆ ದಾನವರೆಲ್ಲರೂ ಆತುರದಿಂದ ಮುಂದೆ ಬಿದ್ದು "ಅದು ನಮ್ಮದು! ಇದು ನಮಗೆ!" ಎಂದು ಆ ಅಮೃತಕ್ಕಾಗಿ ದೊಡ್ಡ ಗದ್ದಲವನ್ನಾರಂಭಿಸಿದರು. ಇವನ್ನು ನೋಡಿ ಶ್ರೀಮನ್ನಾರಾಯಣನು, ಅವರನ್ನು ಮರುಳುಮಾಡಿ, ಅವರ ಗಮನವನ್ನು ಬೇರೆ ಕಡೆಗೆ ಎಳೆಯುವುದಕ್ಕಾಗಿ ಎಲ್ಲರನ್ನೂ ಮೋಹಗೊಳಿಸುವ ತನ್ನ ಮಾಯಾಶಕ್ತಿಯಿಂದ ಅದ್ಭುತವಾದ ಒಂದು ಸ್ತ್ರೀರೂಪವನ್ನು ಧರಿಸಿ ಅವರಮುಂದೆ ನಿಂತುಬಿಟ್ಟನು. ಆಗ ದೈತ್ಯದಾನವರೆಲ್ಲರೂ ಇವಳ ರೂಪವನ್ನು ನೋಡಿ ಮೋಹಗೊಂಡು, ಅವಳಲ್ಲಿಯೇ ನಟ್ಟಮನಸ್ಸುಳ್ಳವರಾಗಿ, ಬುದ್ಧಿಗೆಟ್ಟು ಧನ್ವಂತರಿಯ ಕೈಯಿಂದ ತಾವು ಬಲಾತ್ಕರಿಸಿ ಕಿತ್ತುಕೊಂಡ ಅಮೃತಕಲಶವನ್ನು ಮೋಹಿನಿಯ ಕೈಗೆ ಕೊಟ್ಟುಬಿಟ್ಟರು. ಭಗವನ್ಮಾಯೆಯಾದ ಆ ಸುಂದ

ರಿಯು ಆ ಅಮೃತಕಲಶವನ್ನು ಕೈಯಲ್ಲಿ ಹಿಡಿದುಕೊಂಡು ದೈತ್ಯರನ್ನೂ ದಾನವರನ್ನೂ ಒಬ್ಬರಿಗೊಬ್ಬರಿಗೆ ಅಭಿಮುಖವಾಗಿರುವಂತೆ ಸಾಲಾಗಿ ಕುಳ್ಳಿರಿಸಿ, ಇತ್ತಲಾಗಿ ದೇವತೆಗಳಿಗೆಮಾತ್ರ ಅಮೃತವನ್ನು ಕುಡಿಸಿಬಿಟ್ಟಳು. ಅತ್ತಲಾಗಿ ದೈತ್ಯದಾನವರೆಲ್ಲರೂ ತಮಗೆ ಅಮೃತವು ಇನ್ನೂ ಬರಲಿಲ್ಲವೆಂದು ಗದ್ದಲಮಾಡುತ್ತಿದ್ದರು.

ಇದು ಹದಿನೆಂಟನೆಯ ಅಧ್ಯಾಯವು.

---

ದೇವತೆಗಳು ಅಮೃತಪಾನಮಾಡಿದುದು. ದೇವತಾವೇಷದಿಂದ ರಾಹುವು ಅಮೃತವನ್ನು ಸಂಪಾದಿಸಿ ಕುಡಿಯುತ್ತಿರುವಾಗ, ವಿಷ್ಣುವು ಅವನ ತಲೆಯನ್ನು ಕಡಿದುದು. ದೇವದಾನವರ ಯುದ್ಧವು. ದೈತ್ಯರ ಪರಾಜಯವು.

ಆಮೇಲೆ ದೈತ್ಯರೂ, ದಾನವರೂ ಒಂದಾಗಿ ಸೇರಿ, ಉತ್ತಮ ಕವಚಗಳನ್ನೂ, ನಾನಾಬಗೆಯ ಆಯುಧಗಳನ್ನೂ ಧರಿಸಿ ದೇವತೆಗಳನ್ನು ಇದಿರಿಸಿ ಹೋದರು. ಆಮೇಲೆ ವೀರ್ಯವಂತನೂ ಸಮರ್ಥನೂ ಆದ ವಿಷ್ಣುವು ನರನ ಸಂಗಡ ಸೇರಿ, ದಾನವರ ಗುಂಪಿನಿಂದ ಅಮೃತವನ್ನು ಅಪಹರಿಸಿ ತಂದನು. ಆಗ ಅಲ್ಲಿ ದೊಡ್ಡ ಕಲಹವೂ, ಗದ್ದಲವೂ ಆರಂಭಿಸಿತು. ಹೀಗೆ ಉಲ್ಲೋಲಕಲ್ಲೋಲವಾಗಿದ್ದ ಸಮಯದಲ್ಲಿಯೇ, ದೇವತೆಗಳು ವಿಷ್ಣುವಿನಿಂದ ಅಮೃತವನ್ನು ಪಡೆದು ಪಾನಮಾಡಿಬಿಟ್ಟರು. ವಿಷ್ಣುವು ಹೀಗೆ ದೇವತೆಗಳಿಂದ ಅಮೃತಪಾನಮಾಡಿಸುತ್ತಿರುವ ಕಾಲದಲ್ಲಿ, ನರನು ಧನುರ್ಧಾರಿಯಾಗಿ ತನ್ನ ಬುಜಭಲದಿಂದ ದೈತ್ಯದಾನವರಾರೂ ಆ ಗುಂಪಿಗೆ ಬಾರದಂತೆ ನಿವಾರಿಸುತಿದ್ದನು. ಶತ್ರುಪಕ್ಷದಲ್ಲಿದ್ದ ಅನೇಕ ಧನುರ್ಧಾರಿಗಳನ್ನು ಹಿಂದಕ್ಕಟ್ಟಿದನು. ಇತ್ತಲಾಗಿ ದೇವಸಮೂಹದಲ್ಲಿ ಯಾರುಯಾರು ಅಮೃತವನ್ನು ಪಾನಮಾಡಿದ್ದರೋ, ಅವರು ಧೈರ್ಯದಿಂದ ಅಸುರರೊಡನೆ ಇದಿರುನಿಂತು ಯುದ್ಧಮಾಡತೊಡಗಿದರು. ದೇವತೆಗಳು ಅಮೃತಪಾನಮಾಡುತಿದ್ದ ಸಮಯದಲ್ಲಿ ರಾಹುವೆಂಬ ಅಸುರನೊಬ್ಬನು, ದೇವತೆಗಳ ವೇಷದಿಂದ ಬಂದು, ಕೈನೀಡಿ ಅಮೃತವನ್ನು ಸಂಪಾದಿಸಿ ಕುಡಿದುಬಿಟ್ಟನು.

ಅವನು ಆ ಅಮೃತವನ್ನು ಕುಡಿದಾಗ, ಅದು ಅವನ ಕಂಠಭಾಗದಿಂದ ಇಳಿಯುವಷ್ಟರಲ್ಲಿ, ಚಂದ್ರಸೂರ್ಯರು ಅದನ್ನು ತಿಳಿದು ದೇವತೆಗಳ ಕ್ಷೇಮಕ್ಕಾಗಿ ಅದನ್ನು ವಿಷ್ಣುವಿಗೆ ತಿಳಿಸಿಬಿಟ್ಟರು. ಒಡನೆಯೇ ವಿಷ್ಣುವು ಮೋಸದಿಂದ ಅಮೃತಪಾನ ಮಾಡುತಿದ್ದ ಆ ಅಸುರನ ಆಭರಣಾಲಂಕೃತವಾದ ಶಿರಸ್ಸನ್ನು ತನ್ನ ಖಡ್ಗದಿಂದ ಕತ್ತರಿಸಿಬಿಟ್ಟನು. ಪರ್ವತಶಿಖರದಂತೆ ಮಹತ್ತಾದ ಆ ರಾಕ್ಷಸನ ಶಿರಸ್ಸು ಚಕ್ರಾಹತವಾಗಿ ಆಕಾಶಕ್ಕೆ ಹಾರಿ, ಭಯಂಕರವಾದ ಧ್ವನಿಯಿಂದ ಅರಚುತ್ತಾ, ನೆಲವು ನಡುಗುವಂತೆ ಕೆಳಗೆ ಬಿದ್ದಿತು. ಆ ರಾಕ್ಷಸನ ಮುಂಡವು ಒದರಿಕೊಳ್ಳುತ್ತಾ ಭೂಮಿಯಮೇಲೆ ಹದಿಮೂರು ಸಹಸ್ರಯೋಜನಗಳ ಚದರಳತೆಗೆ ನಾಲ್ಕು ಕಡೆಯೂ ಇರುವ ಪರ್ವತಾರಣ್ಯಗಳನ್ನೂ, ದ್ವೀಪಗಳನ್ನೂ ನೆಗ್ಗುವಂತೆ ಭೂಮಿಯನ್ನು ನಡುಗಿಸುತ್ತ ಬಿದ್ದುಬಿಟ್ಟಿತು. ರಾಹುವಿನ ಮುಖಕ್ಕೆ ಚಂದ್ರಸೂರ್ಯರಮೇಲೆ ಶಾಶ್ವತ ವಿರೋಧವುಂಟಾಗಿ, ಆ ವಿರೋಧದಿಂದಲೇ ಈಗಲೂ ರಾಹುವು (ಗ್ರಹಣ ಕಾಲಗಳಲ್ಲಿ) ಚಂದ್ರನನ್ನು ನುಂಗುತ್ತಿರುವುದು.

ಭಗವಂತನಾದ ವಿಷ್ಣುವು ಎಣೆಯಿಲ್ಲದ ಸೌಂದರ್ಯವುಳ್ಳ ಆ ಸ್ತ್ರೀರೂಪವನ್ನು ಬಿಟ್ಟು ಅನೇಕಾಯುಧಗಳನ್ನು ಧರಿಸಿ, ಮೇಲೆಬಿದ್ದು ಬರುತಿದ್ದ ಅಸುರರನ್ನೆಲ್ಲ ಹೆದರಿಸಿ ಓಡಿಸಿದನು. ಆಮೇಲೆ ಲವಣಸಮುದ್ರ ತೀರಪ್ರದೇಶದಲ್ಲಿ ಅಸುರರಿಗೂ, ದೇವತೆಗಳಿಗೂ ಭಯಂಕರವಾದ ಯುದ್ಧವು ಆರಂಭಿಸಿತು. ಎಲ್ಲಿ ನೋಡಿದರೂ ದೊಡ್ಡದೊಡ್ಡ ಪ್ರಾಸಗಳು, ತೀಕ್ಷ್ಣವಾದ ಮೊನೆಯುಳ್ಳ ತೋಮರಗಳು, ನಾನಾವಿಧ ಶಸ್ತ್ರಗಳು, ಇಂತಹ ಸಾವಿರಾರು ಆಯುಧಗಳು ಎರಡು ಕಡೆಯ ಸೈನ್ಯಗಳಿಂದಲೂ ಎಡೆಬಿಡದೆ ಪ್ರಯೋಗಿಸಲ್ಪಡುತಿದ್ದವು. ಕೊನೆಗೆ ಅಸುರರು ಚಕ್ರಾಯುಧದಿಂದ ಕತ್ತರಿಸಲ್ಪಟ್ಟವರಾಗಿ, ರಕ್ತವನ್ನು ಕಾರುತ್ತಾ ಲೆಖ್ಖವಿಲ್ಲದಂತೆ ಕೆಳಗೆ ಬೀಳುತಿದ್ದರು. ಕತ್ತಿಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಗದೆಗಳಿಂದಲೂ ಗಾಯಪಟ್ಟು ಅನೇಕ ದಾನವಸೈನ್ಯವು ನೆಲಕ್ಕುರುಳಿತು. ಭಯಂಕರವಾದ ಪಟ್ಟಸಗಳಿಂದ ಸುವರ್ಣಾಲಂಕೃತಗಳಾದ ಅನೇಕ ಶಿರಸ್ಸುಗಳು ಛಿನ್ನಭಿನ್ನಗಳಾಗಿ ಎಡೆಬಿಡದೆ ಕೆಳಗೆ ಬೀಳುತಿದ್ದುವು. ಶಸ್ತ್ರಾಹತರಾದ

ಅನೇಕರಾಕ್ಷಸರು ರಕ್ತದಿಂದ ತೊಯ್ದ ಮೈಯುಳ್ಳವರಾಗಿ, ಗೈರಿಕಾದಿ ಧಾತುಗಳ ಬಣ್ಣದಿಂದ ಕೂಡಿದ ಪರ್ವತಶಿಖರಗಳಂತೆ ಕೆಳಗೆ ಬಿದ್ದಿದ್ದರು. ಎಲ್ಲಿ ನೋಡಿದರೂ ಹಾಹಾಕಾರವು ಹೆಚ್ಚಿತು. ಒಬ್ಬರಿಗೊಬ್ಬರು ಶಸ್ತ್ರಗಳಿಂದ ಹೊಡೆದಾಡುತ್ತಿರುವಾಗ, ಅವರ ಮೈಯಿಂದ ಹಾರಿದ ರಕ್ತದಿಂದ ಸೂರ್ಯಬಿಂಬವೇ ರಕ್ತಮಯವಾಗುವಂತೆ ತೋರುತಿದ್ದಿತು. ಶತ್ರುಗಳು ದೂರದಲ್ಲಿದ್ದಾಗ ಹರಿತವಾದ ಉಕ್ಕಿನ ಮೊನೆಯುಳ್ಳ ಪರಿಘಗಳಿಂದಲೂ, ಬಹಳ ಸಮೀಪದಲ್ಲಿದ್ದಾಗ ಮುಷ್ಟಿಗಳಿಂದಲೂ, ಒಬ್ಬರಿಗೊಬ್ಬರು ಹೊಡೆದಾಡುತ್ತಿರಲು, ಅವರ ಪ್ರಹಾರಶಬ್ದವು ಸ್ವರ್ಗಲೋಕವನ್ನು ಸ್ಪರ್ಶಿಸುವಂತಿದ್ದಿತು. ಆ ರಣರಂಗದ ಯಾವ ಭಾಗವನ್ನು ನೋಡಿದರೂ “ಕಡಿ! ತಿವಿ! ಕೊಲ್ಲು! ಓಡು! ಕೆಡಹು! ಮುಂದೆ ನುಗ್ಗು” ಎಂಬೀ ಭಯಂಕರಗಳಾದ ಕೂಗಾಟಗಳೇ ಕೇಳಿಸುತಿದ್ದುವು. ಹೀಗೆ ಮಹಾಘೋರವಾದ ತುಮುಲ (ದೊಂಬಿ) ಯುದ್ಧವು ನಡೆಯುತ್ತಿರುವ ಸಮಯದಲ್ಲಿ, ನರನಾರಾಯಣರಿಬ್ಬರೂ ತಿರುಗಿ ಯುದ್ಧರಂಗಕ್ಕೆ ಬಂದರು. ಅಲ್ಲಿ ನರನ ದಿವ್ಯಧನುಸ್ಸನ್ನು ನೋಡಿ ನಾರಾಯಣನೂ ಕೂಡ ಅಸುರವಿನಾಶಕರವಾದ ತನ್ನ ಚಕ್ರಾಯುಧವನ್ನು ಮನಸ್ಸಿನಲ್ಲಿ ಸ್ಮರಿಸಿದನು ಭಗವಂತನು ನೆನೆಸಿದಮಾತ್ರದಲ್ಲಿಯೇ, ಮಹಾತೇಜಸ್ಸುಳ್ಳದಾಗಿ, ಶತ್ರುಬಲವನ್ನು ತಾಪಗೊಳಿಸತಕ್ಕದಾಗಿ, ಸೂರ್ಯಸಮಾನವಾಗಿ, ಸುವರ್ತುಲಾಕಾರವಾಗಿ, ಯುದ್ಧದಲ್ಲಿ ಭಯಂಕರ ದರ್ಶನವುಳ್ಳದಾಗಿರುವ ಸುದರ್ಶನಚಕ್ರವು ಆಕಾಶದಿಂದಿಳಿದು ಬಂದು ವಿಷ್ಣುವಿನ ಕೈಯಲ್ಲಿ ಸೇರಿತು. ಆನೆಯ ಸುಂಡಿಲಿನಂತೆ ದುಂಡಾದ ನೀಡಿದ ತೋಳುಗಳುಳ್ಳ ಶ್ರೀಮನ್ನಾರಾಯಣನು, ಉರಿಯುವ ಬೆಂಕಿಯಂತೆ ಕಾಂತಿಯುಕ್ತವಾಗಿಯೂ, ಶತ್ರುಪುರ ನಿರ್ಭೇದಕವಾಗಿಯೂ ಇರುವ ಆ ಚಕ್ರಾಯುಧವನ್ನು ಬಲವಾದ ವೇಗದಿಂದ ಶತ್ರುಪಕ್ಷದಮೇಲೆ ಪ್ರಯೋಗಿಸಿದನು. ಪ್ರಳಯಾಗ್ನಿಯಂತೆ ಪುರುಷೋತ್ತಮನಾದ ಶ್ರೀವಿಷ್ಣುವು ಜ್ವಲಿಸುತಿದ್ದ ಆ ಚಕ್ರವನ್ನು ತನ್ನ ಸಂಪೂರ್ಣಬಲದಿಂದ ಬೀಸಿಬಿಟ್ಟೊಡನೆ, ಅದು ದೈತ್ಯದಾನವರಲ್ಲಿ ಸಾವಿರಾರು ಮಂದಿಯನ್ನು ಕತ್ತರಿಸಿ ಕೆಡಹುತ್ತಾ, ತಿರುಗಿತಿರುಗಿ ಶತ್ರುಸೈನ್ಯದಮೇಲೆ ಕವಿದು, ಅವರನ್ನು ಧ್ವಂಸಮಾಡುತ್ತಾ ಬಂದಿತು. ಆ ಚಕ್ರವು ಶತ್ರುಸೈನ್ಯದಮೇಲೆ ಕವಿದು, ಅಗ್ನಿ

ಜ್ವಾಲೆಯಂತೆ ಕೆಲವು ಕಡೆ ದಹಿಸುತ್ತಿರುವುದು! ಮತ್ತೆ ಕೆಲವು ಕಡೆಗಳಲ್ಲಿ ಸುತ್ತಿಮುತ್ತಿದ್ದವರೆಲ್ಲರನ್ನೂ ಉರಿಯಿಂದ ಆವರಿಸಿಕೊಳ್ಳುತ್ತಿರುವುದು! ಹೀಗೆ ಅನೇಕ ದಾನವಸೈನ್ಯವನ್ನು ನಿರ್ಮೂಲಮಾಡುತ್ತ ಬಂದಿತು. ಆ ಚಕ್ರಾಯುಧವು ಒಮ್ಮೆ ಆಕಾಶದಲ್ಲಿ ಹಾರಿ ಮೇಲಿನಿಂದಲೂ, ಮತ್ತೊಮ್ಮೆ ನೆಲದಲ್ಲಿ ಹೊಕ್ಕು ಅಡಿಭಾಗದಿಂದಲೂ ಅಸುರಸೈನ್ಯವನ್ನಾವರಿಸಿಕೊಂಡು, ರಣಪಿಶಾಚದಂತೆ ಶತ್ರುಗಳ ರಕ್ತವನ್ನು ಹಿಂಡಿ ಹೀರುತಿದ್ದಿತು. ಅತ್ತ ಲಾಗಿ ಮಹಾಬಲವುಳ್ಳ ದಾನವವೀರರೂಕೂಡ, ಇಷ್ಟಾದರೂ ಧೈರ್ಯ ಗುಂದದೆ, ಮಾಯೆಯಿಂದ ಆಕಾಶಕ್ಕೆ ಹಾರಿ, ಮೇಘಗಳನ್ನು ಮರೆಸುವಂತೆ ಆವರಿಸಿ ನಿಂತು, ಬಾರಿಬಾರಿಗೂ ಪರ್ವತವರ್ಷಗಳನ್ನು ಸುರಿಸಿ, ದೇವ ಸೈನ್ಯವನ್ನು ನೆಗ್ಗುತಿದ್ದರು. ಹೀಗೆ ದೈತ್ಯದಾನವರು ಮೇಲಿಂದ ಪ್ರಯೋ ಗಿಸುತಿದ್ದ ಪರ್ವತಗಳೆಲ್ಲವೂ ಕೆಳಕ್ಕೆ ಬೀಳುವಾಗ, ಒಂದಕ್ಕೊಂದಕ್ಕೆ ವೇಗ ದಿಂದ ತಗುಲಿ, ಶಿಖರಗಳು ಮುರಿದು, ತಮ್ಮಲ್ಲಿರುವ ವೃಕ್ಷಸಮೂಹಗಳೊ ಡನೆ, ಆಕಾಶದಲ್ಲಿನ ಮೇಘಗಳಂತೆ ಹಲವು ಬಗೆಯ ಆಕೃತಿಗಳಿಂದ ಕೆಳಕ್ಕೆ ಉದುರುತಿದ್ದುವು. ಈ ಪರ್ವತಗಳ ಆಕಾರಗಳೂ, ಇವುಗಳ ಅನ್ಯೋನ್ಯ ಘಟ್ಟನದಿಂದುಂಟಾದ ಮಹಾಧ್ವನಿಯೂ ಬಹಳ ಭಯಂಕರಗಳಾಗಿ ತೋ ರುತಿದ್ದುವು. ಅತಿಭಯಂಕರವಾದ ಆ ಯುದ್ಧರಂಗದಲ್ಲಿ ಎರಡುಪಕ್ಷದ, ಸೈನಿಕರೂ ಬಾರಿಬಾರಿಗೂ ಹಟದಿಂದ ಗರ್ಜಿಸುತ್ತಾ, ಒಬ್ಬರಮೇಲೊಬ್ಬರು ಪರ್ವತಗಳನ್ನು ಬೀಸಿ ಬಡಿಯುತ್ತಿರಲು, ಆ ಪರ್ವತಪಾತದಿಂದ ಸಮಸ್ತ ಭೂಮಿಯೂ ನಡುಗುವಂತಾಯಿತು.

ಇತ್ತಲಾಗಿ ದೇವಶ್ರೇಷ್ಠನಾದ ನರನೂ ಕೂಡ, ಧನುರ್ಧಾರಿಯಾಗಿ ಚಿನ್ನದಕಟ್ಟುಗಳುಳ್ಳ ಬಾಣಗಳಿಂದ ಆಕಾಶವನ್ನೆಲ್ಲಾ ತುಂಬಿಬಿಟ್ಟನು. ದಾನವರಿಂದ ಪ್ರಯೋಗಿಸಲ್ಪಟ್ಟ ಅನೇಕ ಪರ್ವತಗಳನ್ನು ತನ್ನ ಬಾಣ ಗಳಿಂದ ನಡುದಾರಿಯಲ್ಲಿಯೇ ಭೇದಿಸಿ ಕೆಡಹಿದನು. ಕೊನೆಕೊನೆಗೆ ದಾನ ವಸೈನಿಕರ ಬಲವು ಕುಗ್ಗುತ್ತ ಬಂದಿತು. ದೇವತೆಗಳ ಪ್ರಹಾರವನ್ನು ಅವರು ಸಹಿಸಲಾರದೆ ಹೋದರು. ಇದಲ್ಲದೆ ಅಗ್ನಿಜ್ವಾಲೆಯಂತೆ ಆಕಾಶ ದಿಂದ ತಮ್ಮನ್ನು ದಹಿಸುತ್ತಿರುವ ಸುದರ್ಶನಚಕ್ರದ ಆರ್ಭಟವನ್ನು ನೋಡಿ

ಭೀತರಾಗಿ, ಅಲ್ಲಲ್ಲಿ ಭೂರಂಧ್ರಗಳಲ್ಲಿಯೂ, ಲವಣಸಮುದ್ರದ ಜಲದಲ್ಲಿಯೂ ಹೊಕ್ಕು ತಲೆತಪ್ಪಿಸಿಕೊಂಡರು.

ಇತ್ತಲಾಗಿ ದೇವತೆಗಳೆಲ್ಲರೂ ಶತ್ರುಜಯದಿಂದ ಸಂತುಷ್ಟರಾಗಿ, ತಾವು ಅಮೃತಮಥನಕ್ಕಾಗಿ ಸಾಗಿಸಿ ತಂದಿದ್ದ ಮಂದರಪರ್ವತವನ್ನು ಯಥೋಚಿತವಾಗಿ ಪೂಜಿಸಿ, ತಿರುಗಿ ಅದನ್ನು ಸ್ವಸ್ಥಾನಕ್ಕೆ ತಂದು ಸೇರಿಸಿಬಿಟ್ಟರು ಅಮೃತಲಾಭದಿಂದ ತೃಪ್ತರಾದ ದೇವತೆಗಳೆಲ್ಲರೂ, ತಮ್ಮ ಆನಂದಘೋಷದಿಂದ ಆಕಾಶವೆಲ್ಲವನ್ನೂ ತುಂಬುತ್ತ ತಮ್ಮತಮ್ಮ ಸ್ಥಾನಗಳಿಗೆ ಹೋಗಿ ಸೇರಿದರು. ಅವರು ಸ್ವರ್ಗವನ್ನು ಸೇರಿದಮೇಲೆಯೂ, ಅಮೃತವನ್ನು ಬಹುಜಾಗರೂಕತೆಯಿಂದ ಕಾಪಾಡುತ್ತ ಸಂತುಷ್ಟಮನಸ್ಕರಾಗಿದ್ದರು. ದೇವೇಂದ್ರನು ಸಮಸ್ತ ದೇವತೆಗಳೊಡನೆ ಆ ಅಮೃತಕಲಶವನ್ನು ಎಚ್ಚರದಿಂದ ಕಾಪಾಡಿಡುವುದಕ್ಕಾಗಿ ಅದನ್ನು ನರನ ಕೈಯಲ್ಲಿ ಒಪ್ಪಿಸಿದನು.

ಇದು ಹತ್ತೊಂಭತ್ತನೆಯ ಅಧ್ಯಾಯವು.



{ ಕದ್ರು ವಿನತೆಯರಿಬ್ಬರೂ ಪಂಥವನ್ನು ಮಾಡಿಕೊಂಡುದು. ಸರ್ಪಗಳಿಗೆ ಕದ್ರುವಿನ ಶಾಪವು. ಬ್ರಹ್ಮನು ಕಶ್ಯಪನಿಗೆ ವಿಷಹಾರಕವಾದ ವಿದ್ಯೆಯನ್ನು ಅನುಗ್ರಹಿಸಿದುದು. }

ಓ ಜನಮೇಜಯರಾಜಾ! ಎಣೆಯಿಲ್ಲದ ಶಕ್ತಿಯುಳ್ಳ ಉಚ್ಚೈಶ್ರವಸ್ಸೆಂಬ ದಿವ್ಯಾಶ್ವವು ಹುಟ್ಟುವುದಕ್ಕೆ ಈ ಅಮೃತಮಥನವೇ ಕಾರಣವೆಂಬುದನ್ನೂ, ಆ ಅಮೃತಮಥನದ ಚರಿತ್ರವನ್ನೂ ನಿನಗೆ ತಿಳಿಸಿದೆನು. ಅದರಲ್ಲಿ ಆ ಕುದುರೆಯು ಹುಟ್ಟಿದಮೇಲೆ ಅದನ್ನು ನೋಡಿ ಕದ್ರುವು ವಿನತೆಯನ್ನು ಕುರಿತು "ವಿನತೇ! ಆ ಉಚ್ಚೈಶ್ರವಸ್ಸಿನ ಬಣ್ಣವಾವುದು? ಬೇಗನೆ ಹೇಳು" ಎಂದು ಕೇಳಿದಳು. ಅದಕ್ಕಾ ವಿನತೆಯು "ಆ ಕುದುರೆಯು ಬಿಳುಪಾಗಿಯೇ ಇರುವುದು. ನಿನ್ನ ಅಭಿಪ್ರಾಯವೇನು ಹೇಳು? ಅದರ ಬಣ್ಣದ ವಿಷಯದಲ್ಲಿ ನಿನಗೇನಾದರೂ ಅಭಿಪ್ರಾಯಭೇದವಿದ್ದ ಪಕ್ಷದಲ್ಲಿ, ನಾವಿಬ್ಬರೂ ಪಂಥವನ್ನಿಡುವೆವು" ಎಂದಳು. ಅದಕ್ಕಾ ಕದ್ರುವು

"ಆ ಕುದುರೆಯ ಬಾಲವು ಕಪ್ಪೆಂದೇ ನನಗೆ ತೋರುವುದು. ಈ ವಿಷಯ ದಲ್ಲಿ ನನ್ನೊಡನೆ ನೀನು ಪಂಥಕ್ಕೆ ನಿಲ್ಲುವುದಾದರೆ ನಿಲ್ಲು. ಯಾರ ಮಾತು ಸುಳ್ಳಾದರೆ, ಅವರು ಗೆದ್ದವರಿಗೆ ದಾಸ್ಯವನ್ನು ಮಾಡಬೇಕು" ಎಂದಳು.

ಅವರಿಬ್ಬರೂ ಹೀಗೆ ಅನ್ಯೋನ್ಯ ದಾಸ್ಯವನ್ನೇ ಪಂಥವಾಗಿ ನಿರ್ಣ ಯಿಸಿಕೊಂಡು "ನಾಳೆ ಇಬ್ಬರೂ ಹೋಗಿ ಆ ಕುದುರೆಯನ್ನು ನೋಡಿ ಬರುವೆವು" ಎಂದು ನಿಶ್ಚಯಿಸಿ, ತಮ್ಮ ತಮ್ಮ ಮನೆಗಳಿಗೆ ಹೊರಟುಹೋ ದರು. ಮನೆಗೆ ಹೋದಮೇಲೆ ಕದ್ರುವಿಗೆ ತನ್ನ ಮಾತು ಸುಳ್ಳಾಗುವುದೆಂಬ ಭೀತಿ ಹುಟ್ಟಿತು ಈ ಭಯದಿಂದ ಅವಳು ತಂತ್ರದಿಂದ ವಿನತೆಯನ್ನು ವಂಚಿಸಬೇಕೆಂದು ನಿಶ್ಚಯಿಸಿ, ತನ್ನ ನೂರು ಮಕ್ಕಳನ್ನೂ ಕರೆದು "ಎಲೈ ಮಕ್ಕಳಿರಾ! ನೀವು ಕಪ್ಪುಬಣ್ಣದಿಂದ ಹೋಗಿ ಉಚ್ಚೈಶ್ರವಸ್ಸೆಂಬ ಕುದು ರೆಯ ಬಾಲಕ್ಕೆ ಸುತ್ತಿಕೊಂಡು ಅದನ್ನು ಕಪ್ಪಾಗಿ ಕಾಣಿಸಬೇಕು. ಹಾಗಿ ಲ್ಲದಿದ್ದರೆ ನಾನು ನನ್ನ ಸವತಿಯಾದ ವಿನತೆಗೆ ದಾಸಿಯಾಗಬೇಕಾಗು ವುದು. ನನಗೆ ಈ ದಾಸ್ಯವನ್ನು ತಪ್ಪಿಸಿರಿ" ಎಂದಳು. ಆಗ ಸರ್ಪಗಳು ಅವಳ ವಂಚನೆಗೆ ಒಳಪಡದಿರಲು, ಕದ್ರುವು ಕೋಪದಿಂದ ಅವುಗಳನ್ನು ನೋಡಿ "ಎಲೈ ನೀಚರೇ! ನನ್ನ ಮಾತನ್ನು ಲಕ್ಷ್ಯಮಾಡದ ನಿಮಗೆ ಮುಂದೆ ಬೆಂಕಿಯಲ್ಲಿ ಸಾವುಂಟಾಗಲಿ. ಮುಂದೆ ಪಾಂಡವಪುತ್ರನಾದ ಜನ ಮೇಜಯನು ಸರ್ಪಯಾಗವನ್ನು ನಡೆಸುವಾಗ, ಆ ಅಗ್ನಿಯು ನಿಮ್ಮನ್ನೆಲ್ಲ ಸುಡಲಿ" ಎಂದು ಶಪಿಸಿದಳು. ಈ ಶಾಪವಾಕ್ಯವು ಸಾಕ್ಷಾತ್ತಾಗಿ ಬ್ರಹ್ಮನ ಕಿವಿಗೆ ಮುಟ್ಟಿತು. ದೈವವಶದಿಂದ ಸರ್ಪಗಳಿಗೆ ಇಂತಹ ಕ್ರೂರಶಾಪ ವುಂಟಾದುದು ಬ್ರಹ್ಮನಿಗೂ ಸಮ್ಮತವಾಗಿದ್ದಿತು. ಸಮಸ್ತ ದೇವತೆಗಳೊ ಡನೆ ಬ್ರಹ್ಮನೂ ಆ ಶಾಪವನ್ನು ಅನುಮೋದಿಸಿದನು. ಲೋಕದಲ್ಲಿ ಸರ್ಪಗಳು ಬಹಳವಾಗಿ ಹೆಚ್ಚಿಹೋಗಿರುವುದನ್ನೂ, ಅವೆಲ್ಲವೂ ಕ್ರೂರವಿಷವುಳ್ಳವುಗ ಳಾಗಿ, ಬಹಳ ಬಲವುಳ್ಳವುಗಳಾಗಿರುವುದನ್ನೂ ನೋಡಿ, ಬ್ರಹ್ಮನಿಗೆ ಲೋಕ ದಲ್ಲಿ ಪ್ರಜೆಗಳ ಹಿತಕ್ಕಾಗಿ ಆ ಸರ್ಪಗಳು ಸಾಯುವುದೇ ಮೇಲೆಂದು ತೋ ರಿದುದರಿಂದ, ಅವನು ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ! ಯಾವಾಗಲೂ ಇತರರಿಗೆ ಪ್ರಾಣಾಂತಕರವಾದ ಹಿಂಸೆಯನ್ನುಂಟುಮಾಡುವ

ಸರ್ಪಗಳಿಗೆ ಈಗ ತಾಯಿಯು ಮಾಡಿದ ಶಿಕ್ಷೆಯು ಯುಕ್ತವೇ! ಈ ಸರ್ಪಗಳು ಯಾವಾಗಲೂ ಇತರ ಜಂತುಗಳಿಗೆ ಹಾನಿಕರಗಳಾದುದರಿಂದ, ಇವುಗಳಿಗೆ ಈ ಶಿಕ್ಷೆಯು ದೈವಕಲ್ಪಿತವಾದುದೇ" ಎಂದು ಹೇಳಿ, ಆಮೇಲೆ ಕದ್ರುವು ಮಾಡಿದ ಈ ಕಾರ್ಯಕ್ಕಾಗಿ ಅವಳನ್ನು ಸಮ್ಮಾನಿಸಿ, ಅವಳ ಪತಿಯಾದ ಕಶ್ಯಪನನ್ನು ಕರೆದು ಹೀಗೆಂದು ಹೇಳುವನು. "ಕುಮಾರಾ! ಯಾವಾಗಲೂ ವಿಷವನ್ನು ಕಕ್ಕುತ್ತ, ಭಯಂಕರವಾದ ದೊಡ್ಡ ದೇಹವುಳ್ಳವುಗಳಾಗಿ, ಪ್ರಾಣಿಗಳನ್ನು ಕಚ್ಚುವ ಸ್ವಭಾವವುಳ್ಳ ಸರ್ಪಗಳನ್ನು ನೀನು ಹುಟ್ಟಿಸಿದೆ. ಅವುಗಳ ತಾಯಿಯೇ ಅವುಗಳಿಗೆ ಶಾಪವನ್ನು ಕೊಟ್ಟಿರುವಳು. ಇದು ಲೋಕಕ್ಕೆ ಕ್ಷೇಮಕರವಾದುದರಿಂದ, ನೀನು ಇದಕ್ಕಾಗಿ ಚಿಂತಿಸಬಾರದು. ಸರ್ಪಯಾಗದಲ್ಲಿ ಸರ್ಪಗಳಿಗೆ ನಾಶವುಂಟಾಗಬೇಕೆಂಬುದು ಪೂರ್ವಕಲ್ಪದಲ್ಲಿಯೇ ನಿರ್ಧರಿಸಲ್ಪಟ್ಟಿದೆ. ನೀನು ಶಾಂತಿಯನ್ನು ವಹಿಸಬೇಕು" ಎಂದು ಹೇಳಿ, ಅವನನ್ನು ಸಮಾಧಾನಪಡಿಸಿದಮೇಲೆ, ಬ್ರಹ್ಮದೇವನು ಅವನಿಗೆ ವಿಷಹಾರಕವಾದ ಒಂದು ವಿದ್ಯೆಯನ್ನುಪದೇಶಿಸಿ ಹೊರಟುಹೋದನು.

ಇಷ್ಟರಲ್ಲಿ ಇತ್ತಲಾಗಿ ಕರ್ಕೋಟಕನೆಂಬ ಸರ್ಪಶ್ರೇಷ್ಠವು ತನ್ನ ಸಹೋದರರಿಗೆ ತಾಯಿಯಿಂದುಂಟಾದ ಶಾಪವನ್ನು ಕೇಳಿ ಭಯಪಟ್ಟು ತಾಯಿಯ ಬಳಿಗೆ ಬಂದು ಬಹಳ ವಿನಯದಿಂದ "ಅಮ್ಮಾ! ನಾನು ನಿನ್ನ ಆಜ್ಞೆಯಂತೆ ನಡೆಯುವೆನು. ನಾನು ಕಾಡಿಗೆಯಂತೆ ಬಣ್ಣವುಳ್ಳ ಕೂದಲಿನಂತಾಗಿ, ಆ ಕುದುರೆಯ ಬಾಲಕ್ಕೆ ಸುತ್ತಿಕೊಂಡು ಅದನ್ನು ಕಪ್ಪಾಗಿ ಕಾಣಿಸುವೆನು. ನೀನು ಚಿಂತಿಸಬೇಡ" ಎಂದು ಹೇಳಿತು. ಆಗ ಕದ್ರುವು ಸಂತೋಷದಿಂದ ಆ ಕರ್ಕೋಟಕನನ್ನು ಕುರಿತು "ಸರಿ! ಹಾಗೆಮಾಡು" ಎಂದು ಹೇಳಿ ಕಳುಹಿಸಿದಳು.

ಇದು ಇಪ್ಪತ್ತನೆಯ ಅಧ್ಯಾಯವು.



{ ಕದ್ರು ವಿನತೆಯರಿಬ್ಬರೂ ಉಚ್ಚೈಶ್ರವಸ್ಸೆಂಬ ಕುದುರೆಯನ್ನು ನೋಡುವುದಕ್ಕಾಗಿ ಹೊರಟುದು. }

ಓ ತಪೋಧನಾ! ಆ ರಾತ್ರಿಯು ಕಳೆದು ಬೆಳಗಾಯಿತು. ಸೂರ್ಯನು ಉದಿಸಿದನು. ಹಟದಿಂದಲೂ, ಕೋಪದಿಂದಲೂ ಅನ್ಯೋನ್ಯ ದಾಸ್ಯವನ್ನೇ ಪಂಥವಾಗಿ ನಿರ್ಣಯಿಸಿಕೊಂಡ ಕದ್ರು ವಿನತೆಯರಿಬ್ಬರೂ ಬಹಳ ಸಡಗರದಿಂದ ಹೊರಟು ಸಮುದ್ರತೀರಕ್ಕೆ ಬಂದು ಸೇರಿದರು. ಅನಂತವಾಗಿ, ಸಮಸ್ತ ಜಲಗಳಿಗೂ ನಿಧಿಯಾದ ಸಮುದ್ರದ ಮಹಾತಿಶಯವನ್ನು ಕೇಳಬೇಕೇ? ಉದ್ದಕ್ಕೂ ದಟ್ಟವಾದ ತೀರ ವನಗಳು ಅದಕ್ಕೆ ಅಪೂರ್ವ ಶೋಭೆಯನ್ನು ಕೊಡುತ್ತಿರುವುವು. ಮತ್ತು ಆ ಸಮುದ್ರಜಲವು ಅಗಾಧವಾಗಿ, ಒಳಗೆ ಸಂಚರಿಸುತ್ತಿರುವ ಮೀನು, ಮೊಸಳೆ, ತಿಮಿ, ತಿಮಿಂಗಿಲ ಮೊದಲಾದ ಪ್ರಬಲ ಜಂತುಗಳಿಂದ ಕಲಗಿಸಲ್ಪಟ್ಟು ಮಹಾಧ್ವನಿಯಿಂದ ಮೊರೆಯಿಡುವಂತಿರುವುದು. ನಾನಾರೂಪವುಳ್ಳ ಸಾವಿರಾರು ಜಲಚರ ಪ್ರಾಣಿಗಳಿಗೆ ಆಶ್ರಯವಾಗಿರುವುದು. ಸ್ವಭಾವದಲ್ಲಿಯೂ, ಆಕೃತಿಯಲ್ಲಿಯೂ ಕ್ರೂರವಾಗಿ, ವಿಕಾರರೂಪಗಳುಳ್ಳ ಎಷ್ಟೋ ಪ್ರಾಣಿಗಳು ಅದರಲ್ಲಿ ಕಾಣಿಸುತ್ತಿರುವುವು. ಒಂದು ಕಡೆ ಆಮೆಗಳೂ, ಮತ್ತೊಂದು ಕಡೆ ದೊಡ್ಡ ಮೊಸಳೆಗಳೂ ಆಗಾಗ ತಲೆಯೆತ್ತುತ್ತಿರುವುವು. ಹೀಗೆ ಕ್ರೂರಜಂತುಗಳಿಗೆ ಆಶ್ರಯವಾಗಿರುವುದಲ್ಲದೆ ಮುತ್ತು, ಹವಳ ಮೊದಲಾಗಿ ಸಮಸ್ತ ರತ್ನಗಳಿಗೂ ಉತ್ಪತ್ತಿಸ್ಥಾನವಾಗಿ, ವರುಣದೇವನಿಗೆ ನಿವಾಸಸ್ಥಾನವೆನಿಸಿಕೊಂಡು, ನಾಗರಿಗೆ ಆಶ್ರಯಸ್ಥಾನವಾಗಿ, ನದಿಗಳಿಗೆಲ್ಲ ಪತಿಯೆನಿಸಿಕೊಂಡಿರುವುದು. ಬಾಡಬನೆಂಬ ಪಾತಾಳದ ಅಗ್ನಿಗೆ ವಾಸಸ್ಥಲವಾಗಿರುವುದು. ದೈತ್ಯರಿಗೆ ಸುಖಾಶ್ರಯವಾಗಿ, ಪ್ರಾಣಿಗಳಿಗೆ ಭಯಂಕರವಾಗಿ ತೋರುವುದು. ಅಮೃತಕ್ಕೆ ಉತ್ಪತ್ತಿಸ್ಥಾನವಾಗಿ, ದೇವತೆಗಳಿಗೆ ಶುಭಪ್ರದವಾಗಿರುವುದು. ಅದರ ಆಕಾರವನ್ನೂ, ಪರಿಮಾಣವನ್ನೂ ಹೀಗೆಂದು ಊಹಿಸುವುದಕ್ಕೂ ಆಗದೆ ಮಹಾದ್ಭುತವಾಗಿ ತೋರುವುದು. ಪವಿತ್ರವಾದ ತೀರ್ಥವುಳ್ಳುದು. ಜಲಜಂತುಗಳ ಕೂಗಾಟಗಳಿಂದ ಭಯಂಕರಧ್ವನಿಯುಳ್ಳುದಾಗಿರುವುದು. ಅಲ್ಲಲ್ಲಿ ಅಗಾಧವಾದ ನೀರಿನ ಸುಳಿಯಿಂದ ಸಮಸ್ತ ಪ್ರಾಣಿಗಳಿಗೂ ಭೀತಿಯನ್ನು ಹುಟ್ಟಿಸುವುದು. ಗಾಳಿಯಿಂದ ಅಲೆಗಳು ಉಯ್ಯಾಲೆಯಂತೆ

ತೂಗಾಡುತ್ತಿರುವುವು. ಅಲೆಯಾಟಗಳ ಹೆಚ್ಚಿಕೆಯಿಂದ ಸಮುದ್ರವೇ ಮೇಲಕ್ಕೆ ಎದ್ದಂತೆ ಕಾಣುವುದು. ಆಗಾಗ ಅಲೆಗಳೆಂಬ ಕೈಗಳನ್ನು ನಾಲ್ಕು ಕಡೆಗೂ ಬೀಸಿ ನರ್ತನಮಾಡುವಂತಿರುವುದು. ಚಂದ್ರನ ವೃದ್ಧಿಕ್ಷಯಗಳನ್ನನುಸರಿಸಿ, ಆಗಾಗ ಉಬ್ಬಿ ಅಡಗುವ ಅಲೆಗಳಿಂದ ಉಲ್ಲೋಲಕಲ್ಲೋಲವಾಗಿರುವುದು. ಪಾಂಚಜನ್ಯವೆಂಬ ವಿಷ್ಣುವಿನ ಶಂಖಕ್ಕೆ ಉತ್ಪತ್ತಿಸ್ಥಾನವಾಗಿರುವುದು. ಪೂರ್ವದಲ್ಲಿ ಭೂಮಿಯನ್ನು ಉದ್ಧರಿಸುವುದಕ್ಕಾಗಿ ವರಾಹರೂಪವನ್ನೆತ್ತಿ, ಎಣೆಯಿಲ್ಲದ ಶಕ್ತಿಯುಳ್ಳ ಭಗವಂತನಿಂದ ಕಲಗಿಸಲ್ಪಟ್ಟ ಜಲದಿಂದ ಪವಿತ್ರವಾಗಿರುವುದು. ಬ್ರಹ್ಮಋಷಿಯಾದ ಅತ್ರಿಯು ನೂರುವರ್ಷಗಳಕಾಲದವರೆಗೆ ದೃಢವ್ರತವನ್ನು ಹಿಡಿದು ತಪಸ್ಸು ಮಾಡಿದರೂ, ಅವನಿಗೆ ತನ್ನ ಆಳವನ್ನು ತೋರಿಸದೆ, ಪಾತಾಳದವರೆಗೆ ವ್ಯಾಪಿಸಿರುವುದು. ಅಮಿತ ತೇಜಸ್ಸುಳ್ಳ ಪದ್ಮನಾಭನು (ವಿಷ್ಣುವು) ಸೃಷ್ಟಿಗೆ ಮೊದಲು ಆತ್ಮಸಾಕ್ಷಾತ್ಕಾರವೆಂಬ ಯೋಗನಿದ್ರೆಯಲ್ಲಿದ್ದಾಗ, ಆ ದೇವನಿಗೆ ಶಯನಸ್ಥಾನವಾಗಿದ್ದಿತು. ಇಂದ್ರನ ವಜ್ರಾಯುಧಕ್ಕೆ ಭಯಪಟ್ಟು ಬಂದು ತನ್ನಲ್ಲಿ ಮರೆಹೊಕ್ಕ ಮೈನಾಕಪರ್ವತಕ್ಕೆ ಅಭಯವನ್ನು ಕೊಟ್ಟು ಕಾಪಾಡಿದುದು. ಯುದ್ಧದಲ್ಲಿ ಪ್ರಾಣಭಯದಿಂದ ಮೊರೆಯಿಡುತ್ತ ಬಂದ ದೈತ್ಯರಿಗೆ ಆಶ್ರಯವನ್ನು ಕೊಟ್ಟುದು. ಬಡಬಾಗ್ನಿಯ ತೃಪ್ತಿಗಾಗಿ ಜಲವೆಂಬ ಹವಿಸ್ಸನ್ನು ಕೊಟ್ಟು, ಅದನ್ನು ಸದಾ ತೃಪ್ತಿಗೊಳಿಸತಕ್ಕುದು. ನದಿಗಳೆಂಬ ಸಾವಿರಾರು ಪತ್ನಿಯರು ನಾನು ತಾನೆಂದು ಸ್ಪರ್ಧೆಯಿಂದ ಮುಂದೆಬಿದ್ದು ಬಂದು ಅದನ್ನು ಸುತ್ತಲೂ ಆಲಿಂಗಿಸುತ್ತಿರುವರು. ಹೀಗೆ ಅಪಾರವಾಗಿ, ಅಗಾಧವಾಗಿ, ಅತಿ ವಿಸ್ತೀರ್ಣವಾಗಿ, ಅಪ್ರಮೇಯವಾಗಿ, ಅಲೆಗಳಿಂದ ಮೇಲೆದ್ದು ಕುಣಿದಾಡುವಂತೆ ತೋರುವ ಆ ಮಹಾ ಸಮುದ್ರದ ಅತಿಶಯವನ್ನು ಆ ಕಶ್ಯಪನ ಪತ್ನಿಯರಿಬ್ಬರೂ ಆಶ್ಚರ್ಯದಿಂದ ನೋಡಿ ಸ್ತಬ್ಧರಾದರು.

ಇದು ಇಪ್ಪತ್ತೊಂದನೆಯ ಅಧ್ಯಾಯವು.



{ತಾಯಿಯ ಮಾತಿನಂತೆ ಕೆಲವು ಸರ್ಪಗಳು ಬಂದು ಉಚ್ಚೈಃ ಶ್ರವಸ್ಸಿನ ಬಾಲಕ್ಕೆ ಸುತ್ತಿಕೊಂಡುದು.}

ಓ ಮುನೀಂದ್ರಾ! ಕೇಳು! ಆಮೇಲೆ ಬೇರೆ ಕೆಲವು ಸರ್ಪಗಳಿಗೂ ಮನಸ್ಸಿನಲ್ಲಿ ಭೀತಿ ಹುಟ್ಟಿತು. ಅವೆಲ್ಲಾ ಒಂದು ಕಡೆಯಲ್ಲಿ ಸೇರಿ ತಮ್ಮೊಳಗೆ ತಾವು ಆಲೋಚನೆಮಾಡಿಕೊಂಡುವು. "ತಾಯಿಯ ಮಾತನ್ನು ನಾವು ನಡೆಸಲೇಬೇಕು! ಅವಳ ಕೋರಿಕೆಯನ್ನು ನಡೆಸದಿದ್ದರೆ, ಅವಳು ನಮ್ಮಲ್ಲಿ ವಾತ್ಸಲ್ಯವನ್ನು ತೊರೆದು ನಮ್ಮನ್ನೂ ಶಾಪದಿಂದ ದಹಿಸಿಬಿಡುವಳು. ಅವಳು ಪ್ರಸನ್ನಳಾದರೆ ನಮಗೆ ಶಾಪವನ್ನು ಕೊಡದೆ ಬದುಕಿಸುವಳು ಆದುದರಿಂದ ನಾವು ಕುದುರೆಯ ಬಾಲಕ್ಕೆ ಸುತ್ತಿಕೊಂಡು, ಆದನ್ನು ಕಪ್ಪಾಗಿ ಕಾಣಿಸಬೇಕು" ಎಂದು ನಿರ್ಧರಿಸಿ, ಅವೆಲ್ಲವೂ ಉಚ್ಚೈಃಶ್ರವಸ್ಸಿನ ಬಾಲದಲ್ಲಿ ಕೂದಲುಗಳಂತೆ ಸೇರಿಕೊಂಡುವು.

ಇಷ್ಟರಲ್ಲಿಯೇ ದಕ್ಷಕುಮಾರಿಯರೂ, ಅಕ್ಕ ತಂಗಿಯರೂ, ಸವತಿಯರೂ ಆದ ಕದ್ರುವಿನತೆಯರಿಬ್ಬರೂ, ತಮ್ಮತಮ್ಮ ಮಾತೇ ಗೆಲ್ಲುವುದೆಂಬ ಉತ್ಸಾಹದಿಂದ ಆಕಾಶಮಾರ್ಗವಾಗಿಯೇ ಸಮುದ್ರತೀರಕ್ಕೆ ಬಂದು ವಾಯುವಿನಿಂದ ಉಲ್ಲೋಲಕಲ್ಲೋಲವಾಗಿ, ಮಹಾಘೋಷದಿಂದ ಮೊರೆಯುತ್ತಿರುವ ಸಮುದ್ರವನ್ನು ಕಂಡರು. ಮೊಸಳೆಗಳೂ, ತಿಮಿಂಗಿಲಗಳೂ ನಾನಾರೂಪವುಳ್ಳ ಭಯಂಕರಪ್ರಾಣಿಗಳೂ ಅಲ್ಲಲ್ಲಿ ಸಹಸ್ರಸಂಖ್ಯೆಯಿಂದ ಓಡಾಡುತ್ತಿರುವುವು. ಆಳದಿಂದಲೂ, ಆಕಾರದಿಂದಲೂ ಅತಿಭಯಂಕರವಾಗಿದ್ದರೂ, ಅನೇಕ ರತ್ನಗಳಿಗೂ, ವರುಣದೇವನಿಗೂ, ನಾಗರಿಗೂ, ನಿವಾಸಸ್ಥಾನವೆನಿಸಿ ರಮ್ಯವಾಗಿರುವುದು. ಬಾಡಬಾಗ್ನಿಗೂ, ದೈತ್ಯರಿಗೂ, ದೇವತೆಗಳಿಗೂ ಆಶ್ರಯವಾಗಿ, ಅಮೃತಕ್ಕೆ ಉತ್ಪತ್ತಿಸ್ಥಾನವಾಗಿ ಪುಣ್ಯತೀರ್ಥದಿಂದ ತುಂಬಿರುವುದು. ಅನೇಕ ಮಹಾನದಿಗಳು ಸಾವಿರಾರು ಕಡೆಯಿಂದ ಬಂದು ಯಾವಾಗಲೂ ಅದನ್ನು ತುಂಬುತ್ತಿರುವುವು. ಅದು ಅಲೆಗಳಿಂದ ಕುಣಿದಾಡುವಂತಿರುವುದು. ಬೇರೊಂದು ಆಕಾಶದಂತೆಯೇ ತೋರುವುದು. ಪಾತಾಳಾಗ್ನಿಯೆಂಬ ಬಡಬಾಗ್ನಿಯ ಜ್ವಾಲೆಯೊಡಗೂಡಿ, ಗರ್ಜಿಸುವಂತೆ

ಘೋಷಿಸುತ್ತಿರುವ ಆ ಸಮುದ್ರದ ಬಳಿಗೆ ಆ ಕದ್ರುವಿನತೆಯರಿಬ್ಬರೂ ಬಂದರು.

ಇದು ಇಪ್ಪತ್ತೆರಡನೆಯ ಅಧ್ಯಾಯವು.

ಗರುಡೋತ್ಪತ್ತಿ ವೃತ್ತಾಂತವು. ದೇವತೆಗಳ ಪ್ರಾರ್ಥನೆಯಿಂದ ಗರುಡನು ತನ್ನ ತೀವ್ರತೇಜಸ್ಸನ್ನು ಉಡುಗಿಸಿಕೊಂಡುದು.

ಆಮೇಲೆ ಕದ್ರುವೂ, ವಿನತೆಯೂ ವಿಮಾನದಿಂದ ಆ ಮಹಾಸಮುದ್ರವನ್ನು ದಾಟಿ, ಆತುರದಿಂದ ಉಚ್ಚೈಶ್ರವಸ್ಸೆಂಬ ಕುದುರೆಯ ಸಮೀಪದಲ್ಲಿ ಬಂದಿಳಿದರು. ಇಬ್ಬರೂ ಆ ಉತ್ತಮಾಶ್ವವನ್ನು ದೃಷ್ಟಿಸಿ ನೋಡಿದರು. ಅದರ ದೇಹವೆಲ್ಲವೂ ಚಂದ್ರಕಿರಣದಂತೆ ಬಿಳುಪಾಗಿ ಬಾಲವುಮಾತ್ರ ಕಪ್ಪಾಗಿ ಕಾಣಿಸಿತು. ಕರೀಕೂದಲಿನ ಗೊಂಚಲುಗಳಿಂದ ಕೂಡಿದಂತಿದ್ದ ಅದರ ಬಾಲವನ್ನು ನೋಡಿ ವಿನತೆಯು ಬಹಳ ವ್ಯಸನಗೊಂಡಳು. ಆದರೇನು? ಕ್ರೂರಬುದ್ಧಿಯುಳ್ಳ ಕದ್ರುವು ತನ್ನ ದಾಸ್ಯಕ್ಕಾಗಿ ಅವಳನ್ನು ನಿರ್ಬಂಧಿಸಿದಳು ತಾನು ಮಾಡಿಕೊಂಡಿದ್ದ ಒಪ್ಪಂದದಂತೆ ವಿನತೆಯು ಪರಾಜಯವನ್ನು ಹೊಂದಿದುದರಿಂದ, ಕದ್ರುವಿಗೆ ದಾಸಿಯಾಗಿರಬೇಕಾಯಿತು. ಆದರಂತೆಯೇ ಅವಳು ದಾಸ್ಯವನ್ನು ವಹಿಸಿ, ತನ್ನ ಸವತಿಯ ಸೇವೆಯನ್ನು ಮಾಡುತಿದ್ದಳು. ಇದೇ ಸಮಯದಲ್ಲಿ ಮೊಟ್ಟೆಯಲ್ಲಿ ಅಡಗಿದ್ದ ಗರುಡನು ತನಗೆ ಜನನಕಾಲವು ಬರಲು, ತಾಯಿಯು ತನ್ನ ಸಮೀಪದಲ್ಲಿದ್ದಾಗಲೇ ಮಹಾತೇಜಸ್ಸಿನಿಂದ ಮೊಟ್ಟೆಯನ್ನು ಭೇದಿಸಿಕೊಂಡು ಹೊರಕ್ಕೆ ಬಂದನು. ಅವನ ಅದ್ಭುತಶಕ್ತಿಯನ್ನು ಕೇಳಬೇಕೆ? ಮಹಾಬಲವುಳ್ಳವನು! ಎಣೆಯಿಲ್ಲದ ಉತ್ಸಾಹವುಳ್ಳವನು. ತನ್ನ ಕಾಂತಿಯಿಂದ ಸಮಸ್ತ ದಿಕ್ಕುಗಳನ್ನೂ ಬೆಳಗುತ್ತಿರುವನು! ಇಷ್ಟಬಂದ ರೂಪದಿಂದ ತೋರತಕ್ಕವನು. ಇಷ್ಟಬಂದ ಕಡೆಗೆ ಸಂಚರಿಸಬಲ್ಲವನು. ಇಷ್ಟಬಂದಂತೆ ತನ್ನ ವೀರ್ಯವನ್ನು ತೋರಿಸತಕ್ಕವನು. ಜ್ವಲಿಸುವ ಅಗ್ನಿರಾಶಿಯಂತೆ ಭಯಂಕರವಾದ ತೇಜಸ್ಸಿನಿಂದ ಉರಿಯುತ್ತಿರುವನು. ಅವನ

ಕಣ್ಣುಗಳೆರಡೂ ಪಿಂಗಳವರ್ಣವಾಗಿ, ಮಿಂಚಿನಂತೆಥ ಳಥಳಿಸುತ್ತಿರುವುವು. ಪ್ರಳಯಕಾಲದ ಬೆಂಕಿಯಂತೆ ಬೆಳಗುತ್ತಿರುವನು. ಇಂತಹ ಆ ಪಕ್ಷಿರಾಜನು, ಭಯಂಕರವಾದ ಬೇರೊಂದು ಬಡಬಾಗ್ನಿಯೋ ಎಂಬಂತೆ ದೊಡ್ಡ ಆಕೃತಿಯನ್ನು ತಾಳಿ, ಭಯಂಕರಧ್ವನಿಯನ್ನು ತೋರಿಸುತ್ತ ಹುಟ್ಟಿದೊಡನೆ ಆಕಾಶಕ್ಕೆ ಹಾರಿದನು. ಆಗ ದೇವತೆಗಳೆಲ್ಲರೂ ಇವನ ಆಕೃತಿಯನ್ನು ನೋಡಿ, ಅಗ್ನಿರಾಶಿಯೆಂದು ಭ್ರಮಿಸಿ ಅಗ್ನಿದೇವನನ್ನು ಧ್ಯಾನಿಸುತ್ತ, ಅವನಲ್ಲಿ ಮರೆಹೊಕ್ಕು ಹೀಗೆಂದು ಪ್ರಾರ್ಥಿಸುವರು. “ಓ ಅಗ್ನಿದೇವಾ! ನೀನು ಹೀಗೆ ಮಿತಿಮೀರಿ ನಿನ್ನ ಜ್ವಾಲೆಯನ್ನು ಕೆದರಬಾರದು. ಏಕಕಾಲದಲ್ಲಿ ನಮ್ಮೆಲ್ಲರನ್ನೂ ದಹಿಸಬೇಕೆಂದು ಕೋರಿರುವೆಯೇನು? ನಿನ್ನ ಮುಖತ್ತಾದ ಜ್ವಾಲೆಗಳ ರಾಶಿಯು ಮೇಲೆಮೇಲೆ ಜ್ವಲಿಸುತ್ತ ಹೋಗುವುದನ್ನು ಕಾಣೆಯಾ? ಶರಣಾಗತರಾದ ನಮ್ಮನ್ನು ದಹಿಸದೆ ರಕ್ಷಿಸು” ಎಂದರು ಆಗ ಅಗ್ನಿಯು ಅವರಿಗೆ ಕಾಣಿಸಿಕೊಂಡು “ಎಲೈ ದೇವತೆಗಳಿರಾ! ನೀವು ನೆನಸುವಂತೆ ಈ ಪ್ರಕಾಶವು ನನ್ನ ಜ್ವಾಲೆಯಲ್ಲ ಅವನು ಮಹಾಬಲಾಢ್ಯನಾದ ಗರುತ್ಮಂತನು. ತೇಜಸ್ಸಿನಲ್ಲಿ ಅವನು ನನಗೆ ಸಮಾನನು. ತಾಯಿಯಾದ ವಿನತೆಗೆ ಆನಂದವರ್ಧಕನಾದ ಅವನು ಹುಟ್ಟುವಾಗಲೇ ದಿವ್ಯತೇಜಸ್ಸಿನಿಂದ ಹುಟ್ಟಿರುವನು. ಇವನ ತೇಜಸ್ಸನ್ನು ನೋಡಿ ನೀವು ಭ್ರಮಿಸಿದಂತಿದೆ. ಮಹಾಬಲಾಢ್ಯನೂ, ಕಶ್ಯಪಪುತ್ರನೂ ಆದ ಇವನು ಸರ್ಪಗಳನ್ನು ನಾಶಗೊಳಿಸತಕ್ಕವನು. ಇವನು ದೈತ್ಯದಾನವರಿಗೆ ವಿರೋಧಿಯಾಗಿ ದೇವತೆಗಳಿಗೆ ಕ್ಷೇಮವನ್ನುಂಟುಮಾಡತಕ್ಕವನು. ಆದುದರಿಂದ ಇವನಿಗಾಗಿ ನೀವೇನೂ ಭಯಪಡಬೇಕಾದುದಿಲ್ಲ. ನನ್ನೊಡನೆ ಬಂದು ಅವನ ಪ್ರಭಾವವನ್ನು ನೋಡಿರಿ!” ಎಂದನು.

ಅಗ್ನಿಯು ಹೀಗೆಂದು ಹೇಳಲು, ಆ ದೇವತೆಗಳೂ, ಋಷಿಗಳೂ ಸೇರಿ ಗರುಡನ ಸಮೀಪಕ್ಕೆ ಬಂದು ಅವನನ್ನೇ ಪರದೈವಸ್ವರೂಪವನ್ನಾಗಿ ಭಾವಿಸಿ ವಿನಯದಿಂದ ಹೀಗೆಂದು ಸ್ತುತಿಸುವರು. “ಓ ವೈನತೇಯಾ! ನೀನು ಋಷಿ! (ಉತ್ತಮಜ್ಞಾನವುಳ್ಳವನು) ಶತ್ರುಗಳನ್ನು ತಪಿಸತಕ್ಕವನು. ನೀನು ಮಹಾತ್ಮನು! ನೀನೇ ಪ್ರಭು! ಪಕ್ಷಿಗಳಿಗೆಲ್ಲಾ ರಾಜನು. ದೇವ

ಸ್ವರೂಪನು. ನೀನೇ ಸೂರ್ಯನು. (ಲೋಕಪ್ರವರ್ತಕನು) ಪರಮೇಷ್ಠಿಯೂ, ಪ್ರಜಾಧಿಪತಿಯೂ, ಇಂದ್ರನೂ, ಹಯಗ್ರೀವನೂ, ಜಗತ್ಪತಿಯಾದ ಶಿವನೂ, ಎಲ್ಲಕ್ಕೂ ಮುಖವಾದ ಬ್ರಹ್ಮವೂ ನೀನೇ. ನೀನು ವಿಪ್ರನು. ಅಗ್ನಿಯೂ, ವಾಯುವೂ ನೀನೇ. ಧಾತೃ ವಿಧಾತೃಗಳೂ (ಜ್ಞಾನಶಕ್ತಿ ಮಾಯಾಶಕ್ತಿಗಳೆರಡೂ) ನೀನೇ. ದೇವೋತ್ತಮನಾದ ವಿಷ್ಣುವೂ ನೀನೇ! ಮಹತ್ತೂ ನೀನೇ. ಇದಿರಾದ ಶತ್ರುಗಳನ್ನೆಲ್ಲ ನೀನು ಭಂಗಿಸತಕ್ಕವನು. ನೀನು ಅಮೃತಸ್ವರೂಪನು. ನೀನೇ ಮಹತ್ತಾದ ಕೀರ್ತಿ. ಸಮಸ್ತ ಪ್ರಭೆಗಳ ರಾಶಿಯೂ ನೀನೇ. ಎಲ್ಲರಿಗೂ ಪ್ರಿಯವಸ್ತುವೂ ನೀನೇ. ನಮ್ಮೆಲ್ಲರಿಗೂ ನೀನೇ ರಕ್ಷೆ ! ನೀನೇ ಗತಿ ! ನಿನ್ನಿಂದ ನಮಗೆ ಈ ಭಯವು ಪ್ರಾಪ್ತವಾಗುವುದೆಂದರೇನು? ಅಕ್ಷಯಕೀರ್ತಿಯುಳ್ಳ ಓ ಗರುತ್ಮಂತಾ! ಬಲವೆಂಬ ಅಲೆಗಳಿಗೆ ನೀನು ಸಮುದ್ರನು. ಎಲ್ಲವನ್ನೂ ಸಾಧಿಸತಕ್ಕ ಶಕ್ತಿಯುಳ್ಳವನು. ಯಾವಾಗಲೂ ಉತ್ಸಾಹಗುಂದದವನು. ಸಮಸ್ತ ಭಾಗ್ಯಸಮೃದ್ಧಿಯುಳ್ಳವನು. ಶತ್ರುದುಸ್ಸಹನು. ಭೂತಭವಿಷ್ಯಗಳೆಲ್ಲವೂ ನಿನ್ನಿಂದಲೇ ಉತ್ಪನ್ನವಾಗತಕ್ಕುವು. ಸರ್ವೋತ್ತಮನೆನಿಸಿದ ನೀನು, ಸೂರ್ಯನು ಹೇಗೋ ಹಾಗೆ ಚರಾಚರಾತ್ಮಕವಾದ ಸಕಲಜಗತ್ತನ್ನೂ ನಿನ್ನ ಕಾಂತಿಯಿಂದ ಆವರಿಸುವೆ. ಸೂರ್ಯನನ್ನೇ ನಿನ್ನ ಕಾಂತಿಯಿಂದ ತಿರಸ್ಕರಿಸುತ್ತಿರುವೆ. ಎಲ್ಲವನ್ನೂ ಕೊನೆಮುಟ್ಟಿಸತಕ್ಕವನೂ ನೀನೇ. ನಿತ್ಯಾನಿತ್ಯ ಪ್ರಪಂಚಗಳೆಲ್ಲವೂ ನೀನೇ! ಓ ಅಗ್ನಿಯಂತೆ ತೇಜಸ್ಸುಳ್ಳವನೇ! ಕೋಪಗೊಂಡ ಸೂರ್ಯನಂತೆ ಈಗ ನೀನು ನಿನ್ನ ತೇಜಸ್ಸಿನಿಂದ ಪ್ರಜೆಗಳನ್ನೆಲ್ಲ ದಹಿಸುತ್ತಿರುವೆಯೇಕೆ? ಪ್ರಳಯಕಾಲದಲ್ಲಿ ಭಯಂಕರವಾದ ಕಾಲಾಗ್ನಿಯು ತಲೆದೋರಿ, ಲೋಕವನ್ನೆಲ್ಲ ನಾಶಗೊಳಿಸುವಂತೆ ನೀನು ಈಗ ಈ ಭಯಂಕರರೂಪವನ್ನು ತಾಳಿರುವುದೇಕೆ? ಪಕ್ಷಿರಾಜನಾದ ನಿನ್ನನ್ನು ನಾವು ಮರೆಹೊಕ್ಕಿರುವೆವು. ಅಗ್ನಿಗೂ, ಮಿಂಚಿಗೂ ಸಮಾನತೇಜಸ್ಸುಳ್ಳವನಾಗಿಯೂ, ಗಗನಚಾರಿಯಾಗಿಯೂ, ಮಹಾಬಲನಾಗಿಯೂ ಇರುವ ನಿನ್ನಲ್ಲಿ ಶರಣಾಗತರಾಗಿ ಬೇಡಿಕೊಳ್ಳುವೆವು. ಪುಟಹಾಕಿದ ಚಿನ್ನದಂತೆ ಮೈಯುಳ್ಳ ಓ ಪ್ರಭೂ ! ಪರಕ್ಕಿಂತಲೂ ಪರನೂ, ವರಪ್ರದನೂ, ಜಯಿಸಲಸಾಧ್ಯವಾದ ಪರಾಕ್ರಮವುಳ್ಳವನೂ ಆದ ನಿನ್ನ ತೇಜಸ್ಸಿನಿಂದ ಲೋಕವೆ

ಲ್ಲವೂ ತಪಿಸುತ್ತಿರುವುದು. ನಿನ್ನಲ್ಲಿ ಮರೆಹೊಕ್ಕ ನಮ್ಮೆಲ್ಲರನ್ನೂ ಕಾಪಾಡು. ವಿಮಾನಚಾರಿಗಳಾದ ಅನೇಕದೇವತೆಗಳು ನಿನ್ನ ತೇಜಸ್ಸಿನಿಂದ ತಿರಸ್ಕೃತರಾಗಿ ಭಯಪಟ್ಟು ದಾರಿತಪ್ಪಿ ಓಡುತ್ತಿರುವರು. ನೀನಾದರೋ ಪರಮ ದಯಾಳುವೂ, ಮಹಾತ್ಮನೂ ಆದ ಕಶ್ಯಪಋಷಿಯ ಮಗನು. ನೀನು ಹೀಗೆ ನಿರ್ದಯನಾಗಿ ಕೋಪಗೊಂಡಿರಬಾರದು. ಪ್ರಭುವಾದ ನೀನು ದಯೆಯನ್ನು ತೋರಿಸು ನಿನ್ನ ತೇಜಸ್ಸನ್ನು ಉಡುಗಿಸಿಕೊಂಡು ನಮ್ಮನ್ನು ಕಾಪಾಡು. ದೊಡ್ಡ ಸಿಡಿಲಿನ ಧ್ವನಿಯಂತಿರುವ ನಿನ್ನ ಧ್ವನಿಯಿಂದ ಭೂವ್ಯಾಕಾಶಗಳೂ, ಸ್ವರ್ಗವೂ, ದಿಕ್ಕುಗಳೂ, ನಮ್ಮ ಹೃದಯವೂ ನಡುಗುತ್ತಿರುವುವು. ಅಗ್ನಿಯಂತಿರುವ ಈ ನಿನ್ನ ತೇಜಸ್ಸನ್ನೂ, ಈ ನಿನ್ನ ದೊಡ್ಡ ರೂಪವನ್ನೂ ಉಪಸಂಹರಿಸು. ಕೋಪಗೊಂಡ ಕಾಲಯಮನಂತಿರುವ ನಿನ್ನ ತೇಜಸ್ಸನ್ನು ನೋಡಿ ನಮ್ಮೆಲ್ಲರ ಮನಸ್ಸೂ ಸ್ತಿಮಿತವಿಲ್ಲದೆ ತತ್ತಳಿಸುತ್ತಿರುವುದು. ದೈನ್ಯದಿಂದ ಬೇಡುವ ನಮ್ಮೆಲ್ಲರಿಗೂ ಪ್ರಸನ್ನನಾಗು. ನಮಗೆ ಸೌಖ್ಯವನ್ನು ಕೊಡು" ಎಂದರು.

ಎಲೈ ಶೌನಕಾದಿಗಳೇ! ಹೀಗೆ ದೇವತೆಗಳಿಂದಲೂ, ಋಷಿಗಳಿಂದಲೂ ಸ್ತುತಿಸಲ್ಪಟ್ಟ ಗರುಡನು ಅವರಲ್ಲಿ ಪ್ರಸನ್ನನಾಗಿ ತನ್ನ ತೇಜಸ್ಸನ್ನು ಉಡುಗಿಸಿಕೊಂಡನು.

ಇದು ಇಪ್ಪತ್ತುಮೂರನೆಯ ಅಧ್ಯಾಯವು.

---

{ ರಾಹುವಿನ ಉಪದ್ರವಕ್ಕಾಗಿ ಸೂರ್ಯನು ಕೋಪಗೊಂಡುದು. ಬ್ರಹ್ಮಾಜ್ಞೆಯಿಂದ ಅರುಣನು ಸೂರ್ಯನಿಗೆ ಸಾರಥಿಯಾದುದು. }

ಓ ಮಹರ್ಷಿಗಳೇ! ದೇವತೆಗಳು ಹೀಗೆ ಭಯಪಟ್ಟು ಪ್ರಾರ್ಥಿಸಿದಮೇಲೆ, ಗರುಡನು ತನ್ನ ದೇಹವನ್ನು ತಾನೇ ನೋಡಿಕೊಂಡನು. ಆಗ ಅವನಿಗೆ ತನ್ನ ಭಯಂಕರಸ್ವರೂಪವು ತಿಳಿಯಿತು. ಆಗ ಅವನು ತನ್ನಲ್ಲಿ "ಆಹಾ! ನನ್ನನ್ನು ನೋಡಿ ಎಲ್ಲರೂ ಭಯಪಡುವುದು ನ್ಯಾಯ

ವೇ. ಪ್ರಾಣಿಗಳಿಗೆ ಹೀಗೆ ಭಯವನ್ನುಂಟುಮಾಡಬಾರದು. ನನ್ನ ತೇಜಸ್ಸನ್ನು ಉಪಸಂಹರಿಸಿಕೊಳ್ಳುವೆನು" ಎಂದು ತನ್ನ ತೇಜಸ್ಸನ್ನೂ, ಆಕೃತಿಯನ್ನೂ ಉಡುಗಿಸಿಕೊಂಡನು. ಆಮೇಲೆ ಅವನು ತನ್ನ ತಂದೆಯ ಮನೆಯಲ್ಲಿದ್ದ ತನ್ನಣ್ಣನಾದ ಅರುಣನನ್ನು ತನ್ನ ಬೆನ್ನಮೇಲೇರಿಸಿಕೊಂಡನು. ಆ ಗರುಡನು ನೆನೆಸಿದ ಮಾತ್ರದಲ್ಲಿಯೇ ಇಷ್ಟಬಂದಕಡೆಗೆ ಹೋಗಬಲ್ಲ ಶಕ್ತಿಯುಳ್ಳವನಾದುದರಿಂದ, ಆ ಅರುಣನನ್ನೂ ಎತ್ತಿಕೊಂಡು ಸಮುದ್ರವನ್ನು ದಾಟಿ, ಅದರ ಮತ್ತೊಂದು ತೀರದಲ್ಲಿದ್ದ ತನ್ನ ತಾಯಿಯಾದ ವಿನತೆಯ ಬಳಿಗೆ ಬಂದು, ಅವಳಮುಂದೆ ಆ ಅರುಣನನ್ನು ಕುಳ್ಳಿರಿಸಿದನು. ಓ ಮುನೀಂದ್ರಾ! ಇದೇ ಸಮಯಕ್ಕೆ ಸೂರ್ಯನು ಅತಿ ಕೋಪಾವೇಶದಿಂದ ತನ್ನ ಅತ್ಯುಗ್ರ ಕಿರಣಗಳಿಂದ ಲೋಕಗಳನ್ನೆಲ್ಲ ದಹಿಸುವ ಪ್ರಯತ್ನದಲ್ಲಿದ್ದನು" ಎಂದನು.

ಈ ನಡುವೆ *ಶೌನಕನು ಸೌತಿಯನ್ನು ಕುರಿತು "ಓ ಸೌತೀ! ಭಗವಂತನಾದ ಸೂರ್ಯನು ಲೋಕಗಳನ್ನೆಲ್ಲ ದಹಿಸುವಷ್ಟು ಕೋಪಗೊಳ್ಳಲು ಕಾರಣವೇನು? ಇವನಿಗೆ ದೇವತೆಗಳು ಮಾಡಿದ ಅಪಕಾರವುಂಟೇನು?" ಎಂದನು. ಅದಕ್ಕಾ ಸೌತಿಯು "ಅದರ ಕಾರಣವನ್ನು ಹೇಳುವೆನು ಕೇಳು. ಹಿಂದೆ ರಾಹುವೆಂಬ ದೈತ್ಯನು ಸಮುದ್ರಮಥನಕಾಲದಲ್ಲಿ ವಂಚನೆಯಿಂದ ಬಂದು ಅಮೃತವನ್ನು ಪಾನಮಾಡುತಿದ್ದಾಗ, ಆ ವಂಚನೆಯನ್ನು ಸೂರ್ಯಚಂದ್ರರು ಹೊರಪಡಿಸಿದರು. ಅದರಮೇಲೆ ರಾಹುವಿಗೆ ಸೂರ್ಯಚಂದ್ರರಮೇಲೆ ವೈರವುಂಟಾಗಿ, ಆಗಾಗ ಅವನು ಬಂದು ಸೂರ್ಯಚಂದ್ರರನ್ನು ಬಾಧಿಸುತಿದ್ದನು. ಒಮ್ಮೆ ಆ ರಾಹುವಿನ ಬಾಧೆಯಿಂದ ಸೂರ್ಯನಿಗೆ ಮಿತಿಮಿರಿದ ಕ್ರೋಧವುಂಟಾಯಿತು. ಅದಕ್ಕಾಗಿ ಅವನು ತನ್ನಲ್ಲಿ ತಾನು "ನಾನು ಈ ದೇವತೆಗಳ ಸಹಾಯಕ್ಕಾಗಿ ಹೋದುದರಿಂದಲ್ಲವೇ ನನಗೆ ಈ ರಾಹುವಿನಿಂದ ಈ ಬಾಧೆಯುಂಟಾಯಿತು. ಅನೇಕರ ಅನರ್ಥಕ್ಕೆ ಕಾರಣವಾಗಿದ್ದ ಕಷ್ಟಕ್ಕೆ ಈಗ ನಾನೊ

* ಇಲ್ಲಿ ರುರುವು ಪ್ರಮತಿಯನ್ನು ಕುರಿತು ಕೇಳಿದುದಾಗಿಯೂ ಪಾಠಾಂತರವುಂಟು.

ಬ್ಬನೇ ಗುರಿಯಾದಂತಾಯಿತು. ಎಲ್ಲರೂ ತಮ್ಮ ತಮ್ಮ ಕಷ್ಟಗಳಲ್ಲಿ ಇತರರ ಸಹಾಯವನ್ನು ಹುಡುಕುವರೇ ಹೊರತು, ಇತರರು ಕಷ್ಟಕ್ಕೆ ಸಿಕ್ಕಿಬಿದ್ದಾಗ ಯಾರೂ ಸಹಾಯಕ್ಕೆ ಬರಲಾರರು. ದೇವತೆಗಳಿಗಾಗಿ ನಾನು ಅಷ್ಟು ಕಷ್ಟಪಟ್ಟು ಸಹಾಯಮಾಡಿರುವಾಗಲೂ, ಈಗ ರಾಹುವಿನ ಬಾಯಿಗೆ ತುತ್ತಾಗುತ್ತಿರುವ ನನ್ನನ್ನು ಬಿಡಿಸಲು ಯಾವ ದೇವತೆಗಳೂ ಮುಂದೆ ಬಾರದೆ ಸುಮ್ಮನೆ ನೋಡಿಕೊಂಡಿರುವರಲ್ಲವೆ? ಇರಲಿ! ಈ ಲೋಕಗಳನ್ನೇ ಒಟ್ಟಕ್ಕೆ ನಾಶಮಾಡಿ ಬಿಡುವೆನು. ಇದರಲ್ಲಿ ಸಂದೇಹವಿಲ್ಲ'' ಎಂದು ನಿಶ್ಚಯಿಸಿಕೊಂಡು, ಅಸ್ತಮಯ ಪರ್ವತಕ್ಕೆ ಹೋಗಿ ಸೇರಿದನು. ಆಮೇಲೆ ಅಲ್ಲಿಂದಲೇ ಲೋಕನಾಶಕ್ಕಾಗಿ ತನ್ನ ಉಗ್ರಕಿರಣಗಳನ್ನು ವಿಸ್ತರಿಸತೊಡಗಿದನು. ಆಗ ಮಹರ್ಷಿಗಳೆಲ್ಲರೂ ಭೀತಿಗೊಂಡು, ದೇವತೆಗಳ ಬಳಿಗೆ ಬಂದು ''ಅಯ್ಯೋ! ಇದೇನನರ್ಥವು! ಸೂರ್ಯಾಸ್ತಮಯವಾಗಿ ಈಗ ನಡುರಾತ್ರಿಯ ಸಮಯವಾಯಿತು. ಈ ಅರ್ಧರಾತ್ರಿಯಲ್ಲಿ ಮೂರುಲೋಕವನ್ನೂ ನಾಶಗೊಳಿಸುವಂತೆ ಭಯಂಕರವಾದ ಬಿಸಿಲಿನ ತಾಪವು ಹೆಚ್ಚುತ್ತಿರುವುದಲ್ಲಾ! ಇದರ ಕಾರಣವೇನು?'' ಎಂದರು. ಆಗ ದೇವತೆಗಳೆಲ್ಲರೂ ಭಯಪಟ್ಟು ಆ ಋಷಿಗಳೊಡನೆ ಬ್ರಹ್ಮನಲ್ಲಿಗೆ ಬಂದು ''ಪ್ರಭೂ! ಏನಿದು! ಇಂತಹ ಮಹತ್ತಾದ ತಾಪವುಂಟಾಗಲು ಕಾರಣವೇನು? ಸೂರ್ಯನಾದರೋ ಕಾಣಿಸುವುದಿಲ್ಲ. ಇದೇನೋ ವಿಪರೀತವಾಗಿರುವುದು. ಲೋಕಕ್ಷಯವಾಗುವಂತೆ ಕಾಣುವುದು. ಅರ್ಧರಾತ್ರಿಸಮಯದಲ್ಲಿಯೇ ಹೀಗಿರುವಾಗ, ಇನ್ನು ಸೂರ್ಯನು ಉದಿಸಿಬಿಟ್ಟರೆ ಇನ್ನೇನು ಗತಿಯಾಗುವುದೋ'' ಎಂದರು.

ಅದಕ್ಕಾ ಬ್ರಹ್ಮನು ''ಎಲೈ ದೇವತೆಗಳಿರಾ! ವಾಸ್ತವವೇ! ಈಗ ಸೂರ್ಯನು ಲೋಕನಾಶಕ್ಕಾಗಿ ಯತ್ನಿಸಿರುವನು. ಅವನು ನಾಳೆ ಉದಿಸಿದೊಡನೆ ಲೋಕವೆಲ್ಲವೂ ಸುಟ್ಟು ಬೂದಿಯಾಗುವುದೇ ನಿಶ್ಚಯವು. ಆದರೆ, ಇದಕ್ಕೆ ಪರಿಹಾರಕಮಾರ್ಗವೊಂದು ಮೊದಲೇ ಏರ್ಪಟ್ಟಿದೆ. ಕಶ್ಯಪನ ಮಗನಾದ ಅರುಣನೆಂಬವನೊಬ್ಬನುಂಟು. ಅವನು ಮಹಾತೇಜಸ್ವಿ. ಮಹಾಕಾಯವುಳ್ಳವನು. ಅವನೊಬ್ಬನೇ ಸೂರ್ಯನ ಮುಂದೆ ನಿಲ್ಲಬಲ್ಲ

ವನು. ಅವನು ಸೂರ್ಯನಿಗೆ ಸಾರಥಿಯಾಗಿ, ಅವನ ತೇಜಸ್ಸನ್ನು ತನ್ನಲ್ಲಿ ಉಪಸಂಹರಿಸಿಕೊಳ್ಳಬಲ್ಲನು. ಇದರಿಂದ ದೇವತೆಗಳಿಗೂ ಋಷಿಗಳಿಗೂ ಕ್ಷೇಮವುಂಟಾಗುವುದು" ಎಂದು ಹೇಳಿಕಳುಹಿಸಿದನು. ಅದರಂತೆಯೇ ಅರುಣನು, ಬ್ರಹ್ಮನ ಆಜ್ಞೆಯಿಂದ ಸೂರ್ಯನಿಗೆ ಸಾರಥಿಯಾಗಿ, ಸೂರ್ಯನು ಉದಿಸಿದೊಡನೆ ಅವನ ತೇಜಸ್ಸನ್ನು ಆಕರ್ಷಿಸಿಕೊಂಡನು. ಸೂರ್ಯನು ಕೋಪಗೊಳ್ಳುವುದಕ್ಕೂ, ಅರುಣನು ಸಾರಥಿಯಾಗಿ ನಿಲ್ಲುವುದಕ್ಕೂ ಕಾರಣವು ಇದೇ. ಇನ್ನು ಗರುಡನ ವಿಷಯವಾಗಿ ಮುಂದೆ ನಡೆದ ವೃತ್ತಾಂತವನ್ನು ಕೇಳು" ಎಂದನು.

ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು.

ವಿನತೆಯು ಕದ್ರುವಿಗೂ, ಗರುಡನು ಸರ್ಪಗಳಿಗೂ ವಾಹನವಾಗಿ ಹೊತ್ತುಕೊಂಡುದು. ಸೂರ್ಯತಾಪದಿಂದ ಬೆಂದ ತನ್ನ ಮಕ್ಕಳನ್ನು ರಕ್ಷಿಸಲು ಕದ್ರುವು ಇಂದ್ರನನ್ನು ಸ್ತುತಿಸಿದುದು.

ಮಹಾಬಲವುಳ್ಳ ಗರುಡನು ವಿನತೆಯಬಳಿಗೆ ಬಂದನಲ್ಲವೆ? ಅವನು ಅಲ್ಲಿಗೆ ಬಂದಮೇಲೆ, ಕದ್ರುವು ದಾಸಿಯಾದ ವಿನತೆಯನ್ನು ಒಮ್ಮೆ ತನ್ನ ಕೆಲಸಕ್ಕಾಗಿ ಕರೆದು, ಬಹಳ ನಮ್ರತೆಯಿಂದ ಬಂದು ನಿಂತ ಆ ವಿನತೆಯನ್ನು ನೋಡಿ ಆ ಕದ್ರುವು ಅವಳ ಮಗನಾದ ಗರುಡನು ಸಮೀಪದಲ್ಲಿದ್ದಾಗಲೇ ಹೀಗೆಂದು ಹೇಳುವಳು. " ವಿನತೇ! ಸಮುದ್ರದ ನಡುವೆ ನಾಗಗಳಿಗೆಲ್ಲ ನಿವಾಸಸ್ಥಾನವಾದ ಒಂದು ಏಕಾಂತಸ್ಥಳವುಂಟು. ಅದು ಬಹು ರಮ್ಯವಾಗಿ, ನೋಡುವುದಕ್ಕೆ ಆಸೆಯನ್ನುಂಟುಮಾಡುವಂತಿರುವುದು. ಅಲ್ಲಿಗೆ ನನ್ನನ್ನು ಹೊತ್ತುಕೊಂಡು ಹೋಗಿಬಿಡು" ಎಂದಳು. ಒಡನೆಯೇ ಗರುಡನ ತಾಯಿಯಾದ ವಿನತೆಯು ಸರ್ಪಮಾತೆಯಾದ ಕದ್ರುವನ್ನು ಹೊತ್ತುಕೊಂಡು ಹೊರಟಳು. ಗರುಡನೂಕೂಡ ತನ್ನ ತಾಯಿಯ ಆಜ್ಞೆಯಿಂದ ಸರ್ಪಗಳನ್ನೆಲ್ಲ ಹೊತ್ತುಕೊಂಡು ಅವಳ ಹಿಂದೆ ಹೊರಟನು. ಹೀಗೆ ಅವರಿಬ್ಬರೂ ಆಕಾಶಮಾರ್ಗದಿಂದ ಹೋಗುತ್ತಿರುವಾಗ, ಗರುಡನು ತಾನು ಹೊತ್ತಿದ್ದ

ಸರ್ಪಗಳೊಡನೆ ಸೂರ್ಯಬಿಂಬಕ್ಕೆ ಸಮೀಪವಾದನು. ಆಗ ಆ ಸೂರ್ಯ ಕಿರಣದ ತಾಪವನ್ನು ತಡೆಯಲಾರದೆ, ಸರ್ಪಗಳೆಲ್ಲ ಬೆಂದು ಮೂರ್ಛೆಹೊಂದಿದುವು. ಆಗ ಕದ್ರುವು ತನ್ನ ಮಕ್ಕಳ ದುಃಸ್ಥಿತಿಯನ್ನು ಕಂಡು ಭಯಾರ್ತಳಾಗಿ ಇಂದ್ರನನ್ನು ಸ್ತೋತ್ರಮಾಡುವಳು.

"ಓ ಸರ್ವದೇವೇಶಾ! ನಿನಗೆ ವಂದನವು. ಓ ಬಲಸೂದನಾ! ನಿನಗೆ ನಮಸ್ಕಾರವು. ನಮುಚಿಯೆಂಬ ದಾನವನನ್ನು ಸಂಹರಿಸಿದ ನಿನಗೆ ನಮಸ್ಕಾರವು. ಓ ಸಹಸ್ರಾಕ್ಷಾ! ಶಚೀಪತೀ! ಸೂರ್ಯತಾಪದಿಂದ ಬೆಂದುಹೋಗುತ್ತಿರುವ ಸರ್ಪಗಳನ್ನು ಜಲವರ್ಷದಿಂದ ಸೇಚಿಸಿ, ಅವರನ್ನು ಅಪಾಯದಿಂದ ದಾಟಿಸು. ಓ ದೇವೋತ್ತಮಾ! ನಮ್ಮೆಲ್ಲರಿಗೂ ನೀನೇ ಮುಖ್ಯ ಗತಿ. ನಿನಗೆ ಅಪಾರವಾದ ಜಲವನ್ನು ಸೃಷ್ಟಿಸುವ ಶಕ್ತಿಯುಂಟು. ಮೇಘವೂ ನೀನೇ! ವಾಯುವೂ ನೀನೇ! ಅಗ್ನಿಯೂ ನೀನೇ! ಆಕಾಶದಲ್ಲಿ ಕಾಣುವ ಮಿಂಚುಗಳೂ ನೀನೇ! ಮೇಘಸಮೂಹಗಳನ್ನು ಆಕಾಶದಲ್ಲಿ ಹರಡುವವನೂ ನೀನೇ! ನೀನೇ ಮಹಾಮೇಘವೆಂದೂ ಕರೆಯಲ್ಪಡುವೆ. ಎಣೆಯಿಲ್ಲದ ಮತ್ತು ಭೀಕರವಾದ ವಜ್ರಾಯುಧವೂ ನೀನೇ! ಗುಡುಗುವ ಮೇಘವೂ ನೀನೇ! ಲೋಕಗಳನ್ನು ಸೃಷ್ಟಿಸತಕ್ಕವನೂ, ಸಂಹರಿಸತಕ್ಕವನೂ ನೀನೇ! ನೀನು ಎಲ್ಲಿಯೂ ಪರಾಭವವನ್ನು ಹೊಂದದವನು. ನೀನೇ ಸಮಸ್ತಭೂತಗಳಲ್ಲಿರುವ ಶಕ್ತಿಸ್ವರೂಪನು. ಪ್ರಭಾನಿಧಿಯೆನಿಸಿದ ಸೂರ್ಯನೂ ನೀನೇ! ಅದ್ಭುತವಾದ ಮಹಾಭೂತವೂ ನೀನೇ! ರಾಜನೂ, ದೇವರಾಜನೂ ನೀನೇ! ನೀನೇ ವಿಷ್ಣು! ನೀನೇ ಇಂದ್ರನು. ನೀನೇ ದೇವನು. ನೀನೇ ಪರಮಗತಿ. ಸಮಸ್ತವೂ ನೀನೇ! ಅಮೃತವೂ ನೀನೇ! ಪೂಜ್ಯನಾದ ಚಂದ್ರನೂ ನೀನೇ! ಲವ, ಕ್ಷಣ, ಮುಹೂರ್ತ, ತಿಥಿಗಳೆಂಬ ಕಾಲವಿಭಾಗಗಳೆಲ್ಲವೂ ನೀನೇ! ಶುಕ್ಲಪಕ್ಷ ಕೃಷ್ಣಪಕ್ಷಗಳು, ಕಲೆಗಳು, ಕಾಷ್ಠಗಳು, ತ್ರುಟಿ, ಇವೆಲ್ಲವೂ ನೀನೇ! ಸಂವತ್ಸರಗಳು, ಋತುಗಳು, ಮಾಸಗಳು, ಹಗಲುರಾತ್ರಿಗಳು, ಇವೆಲ್ಲವೂ ನೀನೇ! ವನಪರ್ವತಗಳಿಂದ ಕೂಡಿದ ಭೂಮಿಯೂ ನೀನೇ! ಅಂಧಕಾರ ರಹಿತವಾಗಿ ಸೂರ್ಯನೊಡಗೂಡಿದ ಆಕಾಶವೂ ನೀನೇ! ತಿಮಿ, ತಿಮಿಂಗಿಲಾದಿ ಜಲ

ಚರಗಳಿಂದಲೂ, ವಿಾನು ಮೊಸಳೆಗಳಿಂದಲೂ, ದೊಡ್ಡ ಅಲೆಗಳಿಂದಲೂ ಕೂಡಿದ ಮಹಾಸಮುದ್ರವೂ ನೀನೇ! ಜ್ಞಾನಿಗಳಾದ ಮಹರ್ಷಿಗಳಿಂದಲೂ ನಿನ್ನ ಕೀರ್ತಿಯು ಕೊಂಡಾಡಲ್ಪಡುವುದು. ಅವರಿಂದ ಆರಾಧಿಸಲ್ಪಡ ತಕ್ಕವನೂ ನೀನೇ! ಉಪಾಸಕರ ಕ್ಷೇಮಕ್ಕಾಗಿ ಯಜ್ಞಗಳಲ್ಲಿ ಸೋಮರಸವನ್ನೂ, ಹವಿಸ್ಸುಗಳನ್ನೂ ಕೈಕೊಳ್ಳುವವನೂ ನೀನೇ! ನೀನು ಎಣೆಯಿಲ್ಲದ ಸೇನಾಸಮೂಹವುಳ್ಳವನು. ದ್ವಿಜರು ಫಲಾಪೇಕ್ಷೆಯಿಂದ ಈ ಲೋಕದಲ್ಲಿ ನಿನ್ನನ್ನು ಯಜ್ಞಗಳ ಮೂಲಕವಾಗಿ ಆರಾಧಿಸುವರು. ಮಂತ್ರಗಳಿಂದ ನಿನ್ನನ್ನು ಸ್ತುತಿಸುವರು. ಯಜ್ಞಶೀಲರಾದ ಬ್ರಾಹ್ಮಣರು ನಿನ್ನನ್ನುದ್ದೇಶಿಸಿಯೇ ಸರ್ವಪ್ರಯತ್ನಗಳಿಂದ ವೇದವೇದಾಂಗಗಳನ್ನು ಅನುಸಂಧಾನಮಾಡುವರು" ಎಂದಳು.

ಇದು ಇಪ್ಪತ್ತೈದನೆಯ ಅಧ್ಯಾಯವು.

---

{ ಕದ್ರುವಿನ ಸ್ತೋತ್ರಕ್ಕೆ ಸಂತುಷ್ಟನಾಗಿ ಇಂದ್ರನು ಜಲವನ್ನು ವರ್ಷಿಸಿದುದು. }

ಕದ್ರುವು ಹೀಗೆ ಸ್ತೋತ್ರಮಾಡಲು ದೇವೇಂದ್ರನು ಅವಳ ಸ್ತುತಿಗೆ ಮೆಚ್ಚಿ, ಆಗಲೇ ಕರೀಮೇಘಗಳನ್ನು ಆಕಾಶವನ್ನೆಲ್ಲ ಆವರಿಸುವಂತೆ ಮಾಡಿದನು. "ನೀವು ಸುಖವಾದ ಜಲವರ್ಷವನ್ನು ಕರೆಯಿರಿ" ಎಂದು ಆ ಮೇಘಗಳಿಗೆ ಆಜ್ಞಾಪಿಸಿದನು. ಒಡನೆಯೇ ಮೇಘಗಳು ಗುಡುಗುಮಿಂಚುಗಳೊಡನೆ, ಒಂದಕ್ಕೊಂದು ಹೋರಾಡುವಂತೆ ಪ್ರಬಲವರ್ಷವನ್ನು ಕರೆದುವು. ಹೀಗೆ ಆ ಮೇಘಗಳು ಎಡೆಬಿಡದೆ ದೊಡ್ಡ ಮಳೆಯನ್ನು ಸುರಿಸಲು, ಆಕಾಶದಲ್ಲಿ ಜಲಪ್ರಳಯವಾದಂತೆ ಕಾಣಿಸಿತು. ಮಿಂಚು, ಗುಡುಗು, ಗಾಳಿ ಇವುಗಳೊಡನೆ ಅಪಾರವಾದ ವರ್ಷಧಾರೆಗಳು ಬೀಳುತಿದ್ದಾಗ, ಆ ನೀರಿನ ಅಲೆಯಾಟಗಳಿಂದ ಆಕಾಶವೇ ಕುಣಿದಾಡುವಂತೆ ಕಾಣಿಸುತಿತ್ತು. ಎಡೆಬಿಡದೆ ವರ್ಷಿಸುವ ಆ ಮೇಘಗಳಿಂದ ಆಕಾಶದಲ್ಲಿ ಚಂದ್ರಸೂರ್ಯ ಕಿರಣಗಳೇ ಕಾಣದಂತಾಯಿತು. ಈ ಜಲವರ್ಷದಿಂದ ನಾಗಗಳ ತಾಪವೆಲ್ಲ ಅಡಗಿ, ಅವು ಅತ್ಯಂತ ಸಂತೋಷಗೊಂಡುವು. ಭೂಮಿಯೆಲ್ಲ ನೀರು

ತುಂಬಿ ಜಲಮಯವಾಯಿತು. ಆ ತಂಪಾದ ನೀರು ರಸಾತಲದ ವರೆಗೂ ವ್ಯಾಪಿಸಿ ತಂಪನ್ನುಂಟುಮಾಡಿತು. ಭೂಮಿಯೆಲ್ಲವೂ ಜಲಪ್ರವಾಹದಿಂದ ಅಲೆಯಾಡುತ್ತಿದ್ದಿತು. ನಾಗಗಳೆಲ್ಲ ಸಂತೋಷದಿಂದ ತಮ್ಮ ತಾಯಿಯೊಡನೆ ರಮಣಕದ್ವೀಪಕ್ಕೆ ಬಂದು ಸೇರಿದುವು

ಇದು ಇಪ್ಪತ್ತೇಳನೆಯ ಅಧ್ಯಾಯವು.

---

{ ಗರುಡನು ವಿನತೆಯನ್ನು ಅವಳ ದಾಸ್ಯಕ್ಕೆ ಕಾರಣವೇನೆಂದು ಕೇಳಿದುದು. ಸರ್ಪಗಳು ಅವಳ ದಾಸ್ಯವನ್ನು ತಪ್ಪಿಸುವುದಕ್ಕೆ ಉಪಾಯಗಳನ್ನು ತಿಳಿಸಿದುದು. }

ಹೀಗೆ ವರ್ಷಧಾರೆಯಿಂದ ತಾಪವನ್ನು ನೀಗಿ ಸಂತೋಷಗೊಂಡ ಸರ್ಪಗಳೆಲ್ಲವೂ ಗರುಡನಿಂದ ರಮಣಕದ್ವೀಪಕ್ಕೆ ಸಾಗಿಸಿ ತರಲ್ಪಟ್ಟುವು. ಆ ದ್ವೀಪವು ವಿಶ್ವಕರ್ಮನಿಂದ ನಿರ್ಮಿತವಾದುದು. ಭಯಂಕರಗಳಾದ ಮೊಸಳೆಗಳಿಗೆ ಆಶ್ರಯಸ್ಥಾನವಾದುದು. ಮೊದಲು ಅಲ್ಲಿ ಲವಣನೆಂಬ ರಾಕ್ಷಸನಿದ್ದುದನ್ನು ಆ ನಾಗಗಳೆಲ್ಲವೂ ನೋಡಿದ್ದುವು. ಗರುಡನೊಡನೆ ಆ ದ್ವೀಪಕ್ಕೆ ಬಂದ ನಾಗಗಳೆಲ್ಲ ರಮಣೀಯವಾದ ಅಲ್ಲಿನ ವನಗಳನ್ನು ನೋಡಿದುವು. ಆ ವನಗಳಿಗೆ ಸುತ್ತಲೂ ಸಮುದ್ರದ ಅಲೆಗಳು ಬಂದು ಹೊಡೆಯುತ್ತಿರುವುದರಿಂದ, ಅದು ಸದಾ ಶೀತಲವಾಗಿರುವುದು. ನಾನಾ ಜಾತಿಯ ಪಕ್ಷಿಗಳು ಕಿವಿಗಿಂಪಾಗಿ ಕೂಗುತ್ತಿರುವುವು. ವಿಚಿತ್ರ ಫಲಪುಷ್ಪಗಳಿಂದ ತುಂಬಿದ ಕಾಡುಗಳು ಮನೋಹರವಾಗಿರುವುವು. ಮತ್ತು ಅಲ್ಲಲ್ಲಿ ದಿವ್ಯಭವನಗಳು! ಅಂದವಾದ ತಾವರೆಕೊಳಗಳು! ಸ್ವಚ್ಛಜಲವುಳ್ಳ ದೇವಯೋಗ್ಯವಾದ ಮಡುಗಳು! ಇವುಗಳಿಂದ ಅಲಂಕೃತವಾಗಿರುವುದು. ಸುಗಂಧವಾಯುವು ಸದಾ ಬೀಸುತ್ತಿರುವುದು. ಅಲ್ಲಿ ಆಕಾಶಕ್ಕೆ ಹಾರುವಂತೆ ಉದ್ದವಾಗಿರುವ ಚಂದನವೃಕ್ಷಗಳುಕೂಡ, ಗಾಳಿಯಿಂದಲುಗಿದಾಗಲೆಲ್ಲ ಪುಷ್ಪವರ್ಷವನ್ನು ಕರೆಯುವಂತೆ ಹೂಗಳನ್ನುದುರಿಸುತ್ತಿರುವುವು. ಅಲ್ಲಿ ಮರದಿಂದುದಿರುವ ಪುಷ್ಪಗಳೂ, ಪುಷ್ಪರಸಗಳೂ ನಾಗಗಳ ಮೇಲೆ ಬೀಳುತ್ತಿರುವುದರಿಂದ, ಆ ಮರಗಳು ಅಲ್ಲಿ ಬಂದವರಿಗೆ ಪುಷ್ಪವರ್ಷವನ್ನೂ,

ಜಲವರ್ಷವನ್ನೂ ಕರೆಯುವಂತೆ ಕಾಣುವುವು. ಆ ಪ್ರದೇಶವು ಯಾವಾಗಲೂ ಮನಸ್ಸಿಗೆ ಹರ್ಷವನ್ನು ಕೊಡುತ್ತ, ಗಂಧರ್ವರಿಗೂ, ಅಪ್ಸರಸ್ಸುಗಳಿಗೂ ಅತ್ಯಂತ ಪ್ರಿಯವಾದುದು. ಮದಿಸಿದ ಭ್ರಮರಗಳು ಅಲ್ಲಲ್ಲಿ ಝುಂಕರಿಸುತ್ತಿರುವುವು. ಜನಗಳ ಮನಸ್ಸನ್ನಾಕರ್ಷಿಸುವ ಅನೇಕ ವಸ್ತುಗಳಿಂದ ಆ ದ್ವೀಪವು ಅತಿ ಮನೋಹರವಾಗಿ, ನಾಗರ ಮನಸ್ಸಿಗೆ ಸದಾ ಹರ್ಷಪ್ರದವಾಗಿರುವುದು. ಇಂತಹ ವನವನ್ನು ಸೇರಿದಮೇಲೆ ಅಲ್ಲಿ ಆ ನಾಗಗಳೆಲ್ಲವೂ ಸ್ವಲ್ಪ ಹೊತ್ತಿನವರೆಗೆ ವಿಹರಿಸುತ್ತಿದ್ದು, ಆಮೇಲೆ ಗರುಡನನ್ನು ಕುರಿತು "ಎಲೈ ಪಕ್ಷಿಯೇ! ಇಲ್ಲಿದ್ದುದು ಸಾಕು. ಬೇರೊಂದು ದ್ವೀಪಕ್ಕೆ ನಮ್ಮನ್ನು ಎತ್ತಿಕೊಂಡು ಹೋಗು. ಅತಿ ಮನೋಹರವಾಗಿ ಶುದ್ಧಜಲವುಳ್ಳ ದ್ವೀಪವೊಂದುಂಟು. ಅಲ್ಲಿಗೆ ಹೋಗುವೆವು. ಈ ನೆಪದಿಂದ ನೀನೂ ನಮ್ಮೊಡನೆ ಅನೇಕ ರಮ್ಯಪ್ರದೇಶಗಳನ್ನು ನೋಡಿದಂತಾಗುವುದು" ಎಂದುವು.

ಸರ್ಪಗಳ ಹೆಮ್ಮೆಯ ಮಾತನ್ನು ಕೇಳಿ ಗರುಡನು ತನ್ನ ಮನಸ್ಸಿನಲ್ಲಿ ನೊಂದು, ಸ್ವಲ್ಪಹೊತ್ತು ಚಿಂತಿಸುತ್ತಿದ್ದು, ಆಮೇಲೆ ತಾಯಿಯಾದ ವಿನತೆಯನ್ನು ನೋಡಿ "ಅಮ್ಮಾ! ಈ ಸರ್ಪಗಳು ಹೇಳಿದ ಕೆಲಸವನ್ನೆಲ್ಲ ನಾವು ಮಾಡಬೇಕಾದ ಕಾರಣವೇನಿದೆ?" ಎಂದನು. ಅದಕ್ಕಾ ವಿನತೆಯು ವ್ಯಸನದಿಂದ ಅವನನ್ನು ಕುರಿತು "ಕುಮಾರಾ! ದುರ್ದೈವವಶದಿಂದ ನಾನು ನನ್ನ ಸವತಿಗೆ ದಾಸಿಯಾಗಿರುವೆನು. ನನ್ನ ಸವತಿಯಾದ ಕದ್ರುವು ವಂಚನೆಯಿಂದ ಸರ್ಪಗಳ ಮೂಲಕವಾಗಿ ನಮ್ಮಿಬ್ಬರ ಪಂಥದಲ್ಲಿ ನನ್ನನ್ನು ಜಯಿಸಿಬಿಟ್ಟಳು. ನಾನು ಮಾಡಿಕೊಂಡಿದ್ದ ಪಂಥವನ್ನು ಸುಳ್ಳಾಗಿ ಮಾಡಿಬಿಟ್ಟಳು" ಎಂದಳು. ಈ ಮಾತನ್ನು ಕೇಳಿ ಗರುಡನಿಗೆ ಮಹಾವ್ಯಸನವುಂಟಾಯಿತು. ಆಗ ಅವನು ಅಲ್ಲಿದ್ದ ಸರ್ಪಗಳನ್ನು ನೋಡಿ "ಎಲೈ ನಾಗರೇ! ಈಗಲೇ ನಾನು ನನ್ನನ್ನೂ, ನನ್ನ ತಾಯಿಯನ್ನೂ ಈ ದಾಸ್ಯದಿಂದ ಬಿಡಿಸಿಕೊಳ್ಳುವ ಪ್ರಯತ್ನವನ್ನು ಮಾಡಬೇಕಾಗಿದೆ. ಇದಕ್ಕಾಗಿ ನಿಮಗೆ ಯಾವುದನ್ನು ತಂದುಕೊಟ್ಟು, ಯಾವ ಸಂಗತಿಯನ್ನು ತಿಳಿಸಿ, ಅಥವಾ ಎಂತಹ ಪ್ರಯತ್ನವನ್ನು ಮಾಡಿದರೆ ನಾವು ಬಿಡುಗಡೆ

ಹೊಂದಬಹುದೋ ಅದನ್ನು ಮುಚ್ಚುಮರೆಯಿಲ್ಲದೆ ನಿಸ್ಸಂಕೋಚವಾಗಿ ಹೇಳಿರಿ'' ಎಂದನು. ಅದಕ್ಕಾ ಸರ್ಪಗಳು "ಓ ಪಕ್ಷೀ ! ನೀನು ನಿನ್ನ ಪರಾಕ್ರಮದಿಂದ ನಮಗೆ ಅಮೃತವನ್ನು ತಂದುಕೊಟ್ಟರೆ, ಆಗ ನಿನಗೆ ಈ ದಾಸ್ಯದಿಂದ ವಿಮೋಚನವಾಗುವುದು'' ಎಂದುವು.

ಇದು ಇಪ್ಪತ್ತೇಳನೆಯ ಅಧ್ಯಾಯವು.

---

ಗರುಡನು ಅಮೃತವನ್ನು ತರುವುದಕ್ಕಾಗಿ ಹೊರಡುವುದಾಗಿ ಹೇಳಿ ತಾಯಿಯಲ್ಲಿ ಭಕ್ಷ್ಯವನ್ನು ಕೇಳಿದುದು. ಆಗ ವಿನತೆಯು ಸಮುದ್ರಮಧ್ಯದಲ್ಲಿರುವ ಪ್ರಾಣಿಹಿಂಸಕರಾದ ಬೇಡರನ್ನು ಭಕ್ಷಿಸುವಂತೆ ಅನುಮತಿ ಕೊಟ್ಟುದು.

ಸರ್ಪಗಳು ಹೇಳಿದ ಮಾತನ್ನು ಕೇಳಿ ಗರುಡನು ತಾಯಿಯನ್ನು ನೋಡಿ "ಅಮ್ಮಾ ! ನಾನು ಈಗಲೇ ಅಮೃತವನ್ನು ತರುವುದಕ್ಕಾಗಿ ಹೊರಡುವೆನು. ನನಗೆ ಆಹಾರವನ್ನೇನಾದರೂ ತೋರಿಸಿಕೊಡು'' ಎಂದನು. ಅದಕ್ಕಾ ವಿನತೆಯು "ಕುಮಾರಾ ! ಸಮುದ್ರಮಧ್ಯದಲ್ಲಿ ಒಂದು ದೊಡ್ಡ ದ್ವೀಪವುಂಟು. ಅದರ ಒಂದು ಭಾಗದಲ್ಲಿ ಬೇಡರು ವಾಸಮಾಡತಕ್ಕ ದೊಡ್ಡ ಹಳ್ಳಿಯೊಂದಿರುವುದು. ಅಲ್ಲಿ ಕೇವಲ ದಯಾಶೂನ್ಯರೂ, ದುಷ್ಟರೂ, ತಮ್ಮ ಪಾಪಗಳಿಂದ ಪರಗತಿಗಳನ್ನು ಕೆಡಿಸಿಕೊಂಡವರೂ ಆದ ನಿಷಾದರು ಬಹಳಮಂದಿಯಿರುವರು ಅವರನ್ನು ನೀನು ಯಥೇಚ್ಛವಾಗಿ ಭಕ್ಷಿಸಿ, ಆಮೇಲೆ ಅಮೃತವನ್ನು ತರುವುದಕ್ಕೆ ಯತ್ನಿಸು ! ಆದರೆ ಪುತ್ರಾ ! ಈ ಕೊಲೆಗೆಲಸದಲ್ಲಿ ಆ ಬೇಡರನ್ನು ಹೊರತು ಬೇರೆ ಬ್ರಾಹ್ಮಣರನ್ನು ಮಾತ್ರ ಎಂತಹ ಸ್ಥಿತಿಯಲ್ಲಿಯೂ ನೀನು ಅಪಾಯಕ್ಕೆ ಗುರಿಮಾಡದಂತೆ ಎಚ್ಚರತೆಗೆದುಕೊಳ್ಳಬೇಕು. ಬ್ರಾಹ್ಮಣನು ಅಗ್ನಿಗೆ ಸಮಾನನು. ಯಾವ ಪ್ರಾಣಿಗಾದರೂ ಅವನು ಅವಧ್ಯನು. ಬ್ರಾಹ್ಮಣನ ಕೋಪವು ಸೂರ್ಯಾಗ್ನಿಗಳಿಗೂ, ವಿಷಕ್ಕೂ, ಆಯುಧಕ್ಕೂ ಸಮಾನವು. ಸಮಸ್ತ ಪ್ರಾಣಿಗಳಿಗೂ ಬ್ರಾಹ್ಮಣನೇ ಮೇಲೆಂದು ಹೇಳುವರು.

ಈ ಕಾರಣದಿಂದ ದೊಡ್ಡವರು ಬ್ರಾಹ್ಮಣನನ್ನು ಪೂಜಿಸುವರು. ಆದುದರಿಂದ ನಿನಗೆ ಎಷ್ಟೇ ಕೋಪವಿದ್ದರೂ, ಯಾವ ಸಂದರ್ಭದಲ್ಲಿಯೂ ಬ್ರಾಹ್ಮಣನನ್ನು ಕೊಲ್ಲಬೇಡ. ಅಂತವನಿಗೆ ದ್ರೋಹವನ್ನೂ ಎಣಿಸಬೇಡ. ತೀಕ್ಷ್ಣವ್ರತವುಳ್ಳ ಒಬ್ಬ ಬ್ರಾಹ್ಮಣನು ಕೋಪಗೊಂಡಾಗ, ಅವನ ಕೋಪವು ದಹಿಸುವಂತೆ ಅಗ್ನಿಸೂರ್ಯರೂ ದಹಿಸಲಾರರು. ಆದುದರಿಂದ ನಾನು ಹೇಳುವ ಕೆಲವು ಲಕ್ಷಣಗಳನ್ನು ನೋಡಿ ನೀನು ಬ್ರಾಹ್ಮಣನೇ ಅಲ್ಲವೇ ಎಂದು ತಿಳಿದುಕೋ. ಬ್ರಾಹ್ಮಣನೇ ಸಮಸ್ತಪ್ರಾಣಿಗಳಿಗೂ ಮೊದಲು ಹುಟ್ಟಿದವನು. ನಾಲ್ಕು ವರ್ಣಗಳಲ್ಲಿ ಮೇಲಾದವನು. ತಂದೆಗೂ ಗುರುವಿಗೂ ಸಮಾನನು" ಎಂದಳು. ಆಗ ಗರುಡನು "ಅಮ್ಮಾ! ಬ್ರಾಹ್ಮಣನೆಂಬವನು ಹೇಗಿರುವನು? ಅವನ ಶೀಲಸ್ವಭಾವಗಳೆಂತವು? ಅವನ ಪ್ರಭಾವನೇನು? ನೋಡುವುದಕ್ಕೆ ಅವನು ಅಗ್ನಿಯಂತೆ ಜ್ವಲಿಸುವನೆ? ಚಂದ್ರನಂತೆ ಶೀತಲವಾಗಿರುವನೆ? ಅವನನ್ನು ಗುರುತುಹಿಡಿಯುವುದು ಹೇಗೆ? ನನಗೆ ಚೆನ್ನಾಗಿ ತಿಳಿಯುವಂತೆ ಅವನ ಮುಖ್ಯ ಲಕ್ಷಣಗಳನ್ನೆಲ್ಲ ತಿಳಿಸಬೇಕು" ಎಂದನು. ಅದಕ್ಕಾ ವಿನತೆಯು "ಪುತ್ರಾ! ಬೇರೆ ಲಕ್ಷಣಗಳೇನೂ ಈಗ ನಿನಗೆ ಅವಶ್ಯವಿಲ್ಲ. ನೀನು ಆ ಬೇಡರನ್ನು ನುಂಗುವಾಗ ನಿನ್ನ ಕಂಠದಲ್ಲಿ ಮುಳ್ಳು ಚುಚ್ಚಿದಂತಾದರೆ, ಇಲ್ಲವೇ ಕೊಳ್ಳಿಯಿಂದ ಸುಟ್ಟಂತಾದರೆ, ಆಗ ಅದರಲ್ಲಿ ಬ್ರಾಹ್ಮಣನ ಸಂಬಂಧವುಂಟೆಂದು ತಿಳಿ. ಎಷ್ಟೇ ಕೋಪದಲ್ಲಿಯೂ ನೀನುಮಾತ್ರ ಬ್ರಾಹ್ಮಣನನ್ನು ಕೊಲ್ಲಬೇಡ. ಅಲ್ಲದೆ ನಿನ್ನ ಹೊಟ್ಟೆಯೊಳಕ್ಕೆ ಹೋದಮೇಲೆಯೂ ಜೀರ್ಣಿಸದಿದ್ದರೆ ಆಗ ಅದರಲ್ಲಿ ಬ್ರಾಹ್ಮಣನ ಸಂಬಂಧವುಂಟೆಂದು ತಿಳಿ" ಎಂದಳು. ವಿನತೆಗೆ ಗರುಡನ ವೀರ್ಯವೆಂತದೆಂಬುದು ಚೆನ್ನಾಗಿ ತಿಳಿದಿದ್ದರೂ, ಸರ್ಪಗಳ ಮೋಸದಿಂದ ಮಹಾವ್ಯಸನಕ್ಕೀಡಾದ ಆಕೆಯು, ಅವನಿಗೆ ಹೀಗೆಂದು ಆಶೀರ್ವಾದಮಾಡಿದಳು. "ಕುಮಾರಾ! ನಿನ್ನ ರೆಕ್ಕೆಗಳನ್ನು ವಾಯುದೇವನು ರಕ್ಷಿಸಲಿ! ಚಂದ್ರಸೂರ್ಯರು ನಿನಗೆ ಬೆಂಗಾವಲಾಗಿರಲಿ! ಅಗ್ನಿಯು ನಿನ್ನ ಶಿರಸ್ಸನ್ನೂ, ವಸುಗಳು ಅಷ್ಟದಿಕ್ಕುಗಳಲ್ಲಿಯೂ ಇದ್ದು ನಿನ್ನ ಶರೀರವನ್ನೂ, ಸರ್ವಗತನಾದ ವಿಷ್ಣುವು ನಿನ್ನ ಸರ್ವಾವಯವಗಳನ್ನೂ ರಕ್ಷಿಸುತ್ತಿರಲಿ. ನಾನು ಸದಾ ನಿನಗೆ ಶ್ರೇಯಃಪ್ರಾರ್ಥನೆಯನ್ನು ಮಾಡುತ್ತ, ಅದಕ್ಕೆ ಬೇಕಾದ ಮಂಗ

ಳಕಾರ್ಯಗಳನ್ನು ನಡೆಸುತ್ತ ಇಲ್ಲಿಯೇ ಕುಳಿತಿರುವೆನು. ನಿನಗೆ ದಾರಿಯಲ್ಲಿ ಶುಭವಾಗಲಿ. ನಿನ್ನ ಪ್ರಯತ್ನವು ಸಿದ್ಧಿಸಲಿ" ಎಂದಳು.

ತಾಯಿಯ ಮಾತನ್ನು ಕೇಳಿದೊಡನೆ ಗರುಡನು ರೆಕ್ಕೆಗಳನ್ನು ಬಿಚ್ಚಿ ಆಕಾಶಕ್ಕೆ ಹಾರಿಬಿಟ್ಟನು ಕ್ಷುಧಾತುರನಾಗಿದ್ದ ಗರುಡನು ನೆಟ್ಟಗೆ ಆ ಬೇಡರ ಹಳ್ಳಿಯಿದ್ದ ಕಡೆಗೆ ಹೊರಟು, ಕಾಲಯಮನಂತೆ ಅಲ್ಲಿಗೆ ಪ್ರವೇಶಿಸಿದನು. ಮೊದಲು ಆ ಬೇಡರನ್ನೆಲ್ಲ ಸಂಹರಿಸುವುದಕ್ಕಾಗಿ ದೊಡ್ಡ ಧೂಳನ್ನೆಬ್ಬಿಸಿದನು. ಸಮುದ್ರದ ನೀರನ್ನೆಲ್ಲ ಮೇಲೆಬ್ಬಿಸಿ ಅವರನ್ನು ಮುಳುಗಿಸಿದನು. ಸಮೀಪದಲ್ಲಿದ್ದ ಪರ್ವತಗಳನ್ನೂ, ವೃಕ್ಷಗಳನ್ನೂ ಕಿತ್ತುತಂದು ಅವರಮೇಲೆ ಹಾಕಿದನು. ಆಮೇಲೆ ಸತ್ತು ಕೆಟ್ಟು ಭಯದಿಂದೋಡುತ್ತಿದ್ದ ಆ ಬೇಡರು ಬರುವ ದಾರಿಯಲ್ಲಿ ದೊಡ್ಡದಾಗಿ ಬಾಯನ್ನು ತೆರೆದು ಕುಳಿತನು. ಭಯದಿಂದೋಡಿ ಬಂದ ಬೇಡರೆಲ್ಲರೂ ಹಿಂದುಮುಂದು ತೋರದೆ ಗರುಡನ ಬಾಯೊಳಗೇ ಪ್ರವೇಶಿಸಿಬಿಟ್ಟರು. ಕಾಡಿನಲ್ಲಿ ಬಿರುಗಾಳಿಯೂ, ಧೂಳೂ ಎದ್ದು, ಮರಗಿಡಗಳೆಲ್ಲವೂ ಆಡುತ್ತಿರುವಾಗ ಅಲ್ಲಿನ ಪಕ್ಷಿಗಳು ಭಯಪಟ್ಟು ದಿಕ್ಕುತೋರದೆ ಆಕಾಶಕ್ಕೆ ಹಾರುವಂತೆ, ಆ ಬೇಡರು ಸಾವಿರಾರು ಸಂಖ್ಯೆಯಿಂದ ಆ ಗರುಡನ ದೊಡ್ಡ ಬಾಯೊಳಗೇ ಪ್ರವೇಶಿಸಿಬಿಟ್ಟರು. ಹಸಿವಿನ ಆತುರದಿಂದಿದ್ದ ಆ ಪಕ್ಷಿರಾಜನು ಆ ಬೇಡರನ್ನೆಲ್ಲ ನುಂಗುವುದಕ್ಕಾಗಿ ತಟ್ಟನೆ ಬಾಯನ್ನು ಮುಚ್ಚಿಕೊಂಡನು.

ಇದು ಇಪ್ಪತ್ತೆಂಟನೆಯ ಅಧ್ಯಾಯವು.

ಗರುಡನು ಬೇಡರನ್ನು ನುಂಗುವಾಗ ಒಬ್ಬ ಬೇಡತಿಯ ಸಹವಾಸದಿಂದ ಕೆಟ್ಟುಹೋದ ಬ್ರಾಹ್ಮಣನೊಬ್ಬನು ಗರುಡನ ಕಂಠದಲ್ಲಿ ಸಿಕ್ಕಿ ದಹಿಸಿದಂತಾಗಲು ಗರುಡನು ಅವನನ್ನು ರಕ್ಷಿಸಿದುದು. ಗರುಡ ಕಶ್ಯಪರ ಸಂವಾದವು. ಗಜ ಕಚ್ಛಪ ವೃತ್ತಾಂತವು.

ಓ ಮಹರ್ಷಿಗಳೇ ಕೇಳಿರಿ! ಗರುಡನು ಬೇಡರನ್ನು ನುಂಗಿದಾಗ, ಅವನ ಕಂಠದಲ್ಲಿ ಉರಿಯುವ ಕೊಳ್ಳಿಯಿಂದ ತಿವಿದಂತಾಯಿತು. ಆಗ

ಅವನಿಗೆ ತಾಯಿಯ ಮಾತು ನೆನಪಿಗೆ ಬಂದಿತು. ಆ ಬೇಡರ ಗುಂಪಿನಲ್ಲಿ ಬ್ರಾಹ್ಮಣನೊಬ್ಬನು ತನ್ನ ಪತ್ನಿಯಾದ ಬೇಡತಿಯೊಡನೆ ಸಿಕ್ಕಿಬಿದ್ದಿದ್ದನು. ಆಗ ಗರುಡನು ಅದರ ಸೂಚನೆಯನ್ನು ಕಂಡುಕೊಂಡು "ಓ ಬ್ರಾಹ್ಮಣಾ! ಬಾಯನ್ನು ತೆರೆಯುವೆನು. ಬೇಗನೆ ಹೊರಕ್ಕೆ ಬಂದುಬಿಡು. ನೀನು ಪಾಪಕಾರ್ಯಗಳಲ್ಲಿಯೇ ನಿರತನಾಗಿದ್ದರೂ, ಬ್ರಾಹ್ಮಣನನ್ನು ಕೊಲ್ಲಬಾರದೆಂದು ನನ್ನ ತಾಯಿಯು ಹೇಳಿರುವಳು" ಎಂದನು. ಈ ಮಾತನ್ನು ಕೇಳಿ ಒಳಗಿದ್ದ ಬ್ರಾಹ್ಮಣನು "ನನ್ನ ಪ್ರಿಯೆಯಾದ ಬೇಡಿತಿಯೂ ನನ್ನೊಡನೆ ತಪ್ಪಿಸಿಕೊಂಡು ಬರಲಿ. ಅದಕ್ಕೆ ನೀನು ಅವಕಾಶವನ್ನು ಕೊಡಬೇಕು" ಎಂದನು. ಆಗ ಗರುಡನು "ಸರಿ! ಹಾಗೆಯೇ ಆಗಲಿ. ನೀನು ಆ ಬೇಡಿತಿಯನ್ನೂ ಹಿಡಿದುಕೊಂಡು ಬೇಗನೆ ಹೊರಕ್ಕೆ ಬಂದುಬಿಡು. ಅನ್ಯಾಯವಾಗಿ ನನ್ನ ಜಠರಾಗ್ನಿಯಲ್ಲಿ ಬೆಂದು ಸಾಯಬೇಡ" ಎಂದನು. ಕೂಡಲೇ ಆ ಬ್ರಾಹ್ಮಣನು ತನ್ನ ಪತ್ನಿಯೊಡನೆ ಆ ಗರುಡನ ಬಾಯಿಂದ ಹೊರಗೆ ಬಂದು, ಗರುಡನನ್ನು ಹರಸಿ, ಆ ಬೇಡತಿಯನ್ನು ಕರೆದುಕೊಂಡು ತನ್ನ ಇಚ್ಛೆಬಂದಂತೆ ಹೊರಟುಹೋದನು. ಒಡನೆಯೇ ಗರುಡನು ತನ್ನ ರೆಕ್ಕೆಗಳನ್ನು ಬಿಚ್ಚಿಕೊಂಡು ಆಕಾಶದಲ್ಲಿ ಹಾರಿಹೋಗುತ್ತಿರುವಾಗ, ತನ್ನ ತಂದೆಯಾದ ಕಶ್ಯಪನನ್ನು ಕಂಡು, ತನ್ನ ವೃತ್ತಾಂತವನ್ನೆಲ್ಲ ಅವನಿಗೆ ತಿಳಿಸಿದನು. ಆಮೇಲೆ ಕಶ್ಯಪನು "ಕುಮಾರಾ! ನಿನಗೂ, ನಿನ್ನಣ್ಣನಿಗೂ, ತಾಯಿಗೂ ಕುಶಲವಷ್ಟೆ? ಮುಖ್ಯವಾಗಿ ನಿನಗೆ ಬೇಕಾದಷ್ಟು ಆಹಾರವು ಮನುಷ್ಯಲೋಕದಲ್ಲಿ ದೊರೆಯುತ್ತಿರುವುದೆ? ಇಷ್ಟು ವೇಗದಿಂದ ನೀನು ಎಲ್ಲಿಗೆ ಹೋಗುತ್ತಿರುವೆ? ಹೇಳು" ಎಂದನು. ಅದಕ್ಕಾ ಗರುಡನು "ಓ ಜನಕಾ! ನಮ್ಮೆಲ್ಲರಿಗೂ ಕುಶಲವು. ತಾಯಿಯೂ, ನಾನೂ, ನನ್ನಣ್ಣನೂ ಕುಶಲದಿಂದಿರುವೆವು. ಆದರೆ, ನನಗೆ ಮಾತ್ರ ಭೋಜನದಲ್ಲಿ ಸೌಖ್ಯವಿಲ್ಲ. ನನಗೆ ಬೇಕಾದಷ್ಟು ಆಹಾರವು ಮಾತ್ರ ದೊರೆಯುವ ಹಾಗಿಲ್ಲ. ಈಗ ಅಮೃತವನ್ನು ತಂದುಕೊಡಬೇಕೆಂದು ಸರ್ಪಗಳು ಪ್ರೇರಿಸಿರುವುವು. ನನ್ನ ತಾಯಿಯ ದಾಸ್ಯವನ್ನು ಬಿಡಿಸುವುದಕ್ಕಾಗಿ ಅಮೃತವನ್ನು ತರಲು ನಾನು ಹೋಗುತ್ತಿರುವೆನು. ನಾನು ಹೊರಡುವಾಗ ನನಗೆ ಆಹಾರವನ್ನು ಕೊಡೆಂದು ನನ್ನ ತಾಯಿ

ಯನ್ನು ಕೇಳಲು, ಸಮುದ್ರಮಧ್ಯದಲ್ಲಿದ್ದ ನಿಷಾದರನ್ನು ಭಕ್ಷಿಸುವಹಾಗೆ ತಾಯಿಯು ಹೇಳಿದಳು. ಅದರಂತೆ ನಾನು ಸಾವಿರಾರು ಮಂದಿ ಬೇಡರನ್ನು ಭಕ್ಷಿಸಿಯೂ ನನ್ನ ಹಸಿವು ಅಡಗಲಿಲ್ಲ. ಬೇರೆ ಯಾವುದನ್ನು ಭಕ್ಷಿಸಿದರೆ ಅಮೃತವನ್ನು ತರುವುದಕ್ಕೆ ನನಗೆ ಶಕ್ತಿಯುಂಟಾಗುವುದೋ, ಅಂತಹ ಬೇರೆ ಯಾವುದಾದರೂ ಆಹಾರವನ್ನು ತೋರಿಸಿಕೊಡು. ನನ್ನ ಹಸಿವು ಬಾಯಾರಿಕೆಗಳೆರಡೂ ತೀರುವಹಾಗೆ ಮಾಡು'' ಎಂದನು.

ಅದಕ್ಕೆ ಕಶ್ಯಪನು ''ಕುಮಾರಾ! ಅದೋ! ಅಲ್ಲಿ ಪವಿತ್ರವಾದ ಸರೋವರವೊಂದಿರುವುದು ನೋಡು. ಅದರ ಪವಿತ್ರತೆಯು ದೇವಲೋಕದಲ್ಲಿಯೂ ಪ್ರಖ್ಯಾತಿಗೊಂಡಿರುವುದು. ಅದರಲ್ಲಿ ಒಂದು ದೊಡ್ಡ ಆನೆಯು ಪೂರ್ವಜನ್ಮದಲ್ಲಿ ತನಗೆ ಜ್ಯೇಷ್ಠಸಹೋದರನಾಗಿದ್ದ ಒಂದು ಆಮೆಯೊಡನೆ ಯಾವಾಗಲೂ ಜಗಳವಾಡುತ್ತ ಅದನ್ನು ತಲೆಕೆಳಗಾಗಿ ಹಿಡಿದು ಎಳೆದಾಡುತ್ತಿರುವುದು. ಅವೆರಡಕ್ಕೂ ಪೂರ್ವಜನ್ಮದಲ್ಲಿ ವಿರೋಧವುಂಟಾದುದಕ್ಕೆ ಕಾರಣವನ್ನೂ, ಅವೆರಡರ ಶರೀರದ ಪ್ರಮಾಣವೆಷ್ಟೆಂಬುದನ್ನೂ ತಿಳಿಸುವೆನು ಕೇಳು. ಆ ಕಥೆಯು ವೈರಾಗ್ಯವನ್ನು ಹುಟ್ಟಿಸತಕ್ಕುದು. ನಿನಗೆ ಕ್ಷೇಮವಾಗಲಿ. ಪೂರ್ವದಲ್ಲಿ ಬಹಳ ಕೋಪಸ್ವಭಾವವುಳ್ಳ ವಿಭಾವಸುವೆಂಬ ಮಹರ್ಷಿಯಿದ್ದನು. ಅವನಿಗೆ ಸುಪ್ರತೀಕನೆಂಬ ತಮ್ಮನೊಬ್ಬನಿದ್ದನು. ಇವನು ಮಹಾ ತಪಸ್ವಿ! ಆದರೆ ಈ ಸುಪ್ರತೀಕನಿಗೆ ತಂದೆಯ ಸ್ವತ್ತನ್ನು ಅಣ್ಣತಮ್ಮಂದಿರಾದ ತಮ್ಮಲ್ಲಿ ಹಂಚಿಕೊಳ್ಳಬೇಕೆಂಬ ಅಭಿಲಾಷೆ ಹುಟ್ಟಿತು. ಅವನು ತನ್ನ ಅಣ್ಣನೊಡನೆ ಒಂದಾಗಿರಲು ಇಷ್ಟಪಡದೆ ಆಸ್ತಿಯನ್ನು ವಿಭಾಗಿಸುವುದಕ್ಕಾಗಿಯೇ ನಿರ್ಬಂಧಿಸುತಿದ್ದನು. ಅಣ್ಣನಾದ ವಿಭಾವಸುವಾದರೋ ಆಗಾಗ ತಮ್ಮನನ್ನು ಮೃದುವಾಕ್ಯಗಳಿಂದ ಸಮಾಧಾನಗೊಳಿಸುತ್ತ ''ಸಹೋದರಾ! ಆಸ್ತಿಯ ವಿಭಾಗದಲ್ಲಿ ಅನೇಕದೋಷಗಳುಂಟು. ಅಜ್ಞತೆಯಿಂದ ಕೆಲವರು ಆಸ್ತಿಯನ್ನು ವಿಭಾಗಮಾಡಬೇಕೆಂದು ನಿರ್ಬಂಧಿಸುವರು. ಹಣವನ್ನು ವಿಭಾಗಿಸಿಕೊಂಡು ಹೋದಮೇಲೆ, ಸಹೋದರರಿಗೆ ಮೊದಲಿದ್ದ ಸಹೋದರವಾತ್ಸಲ್ಯವೂ ತಪ್ಪಿಹೋಗುವುದು. ಆ ಹಣದಲ್ಲಿಯೇ ಮೋಹವು ಹೆಚ್ಚಿ ಒಬ್ಬರನ್ನೊಬ್ಬರು ಲಕ್ಷ್ಯಮಾಡುವುದಿಲ್ಲ. ಅವ

ರು ಯಾವಾಗಲೂ, ಸ್ವಾರ್ಥಪರರಾಗಿ ತಮ್ಮತಮ್ಮ ಹಣವನ್ನಿಟ್ಟುಕೊಂಡು ಬೇರೆಬೇರೆಯಾಗಿಯೇ ಇದ್ದುಬಿಡುವರು. ಅಣ್ಣತಮ್ಮಂದಿರಲ್ಲಿ ಈ ಒಗ್ಗಟ್ಟು ತಪ್ಪಿದಾಗ, ಇಂತಹ ಸಮಯವನ್ನೇ ಕಾದಿರತಕ್ಕ ವಿರೋಧಿಗಳು, ಮಿತ್ರರಂತೆ ಸೇರಿ ಅವರಲ್ಲಿ ಭೇದಬುದ್ಧಿಯನ್ನು ಹೆಚ್ಚಿಸುವರು. ಬೇರೆ ಕೆಲವರು ಇದೇ ಸಮಯವನ್ನು ನೋಡಿ ಮೇಲೆ ಬೀಳುವರು ಕೆಲವರು ಇವರ ಹಣವನ್ನು ಕಿತ್ತುತಿನ್ನುವುದಕ್ಕಾಗಿ ಯತ್ನಿಸುವರು. ಆದುದರಿಂದ ಅನ್ಯೋನ್ಯಭೇದಬುದ್ಧಿಯುಳ್ಳ ಸಹೋದರರು ಶೀಘ್ರದಲ್ಲಿಯೇ ದೊಡ್ಡ ನಷ್ಟಕ್ಕೆ ಈಡಾಗುವರು. ಆದುದರಿಂದ ಓ ಸಹೋದರಾ! ಒಡಹುಟ್ಟಿದವರು ಮನೆಯಲ್ಲಿ ತಮ್ಮ ಹಿರಿಯರ ಮಾತಿಗೆ ಕಟ್ಟುಪಟ್ಟಿರಬೇಕು. ಒಬ್ಬರಲ್ಲಿ ಒಬ್ಬರು ಸಂದೇಹಪಡಬಾರದು. ಆಸ್ತಿಯನ್ನು ವಿಭಾಗಿಸಿಕೊಳ್ಳಲೂ ಬಾರದು. ಯೋಗ್ಯರಾದವರು ಈ ಕಾರ್ಯವನ್ನು ಶ್ಲಾಘಿಸಲಾರರು " ಎಂದನು.

ಎಷ್ಟು ಹೇಳಿದರೇನು? ಸುಪ್ರತೀಕನು ವಿಭಾಗಕ್ಕಾಗಿಯೇ ನಿರ್ಬಂಧಿಸುತ್ತಿದ್ದನು. ಹೀಗೆ ಮೇಲೆಮೇಲೆ ನಿರ್ಬಂಧಿಸುತ್ತಿದ್ದುದರಿಂದ, ಅಣ್ಣನಿಗೆ ಬಹಳ ಕೋಪವುಂಟಾಯಿತು. ಆಗ ಅವನು "ಸುಪ್ರತೀಕಾ! ನೀನು ಆಸ್ತಿಯ ವಿಭಾಗಕ್ಕಾಗಿಯೇ ನಿರ್ಬಂಧಿಸುತ್ತಿರುವೆ. ನಿನ್ನನ್ನು ನಿವಾರಿಸುವುದು ಸಾಧ್ಯವಿಲ್ಲದಿದೆ. ಮದಾಂಧನಾದ ನೀನು ಆನೆಯ ಜನ್ಮವನ್ನು ಹೊಂದು" ಎಂದು ಶಪಿಸಿದನು. ಆಗ ಸುಪ್ರತೀಕನು ಕೋಪಗೊಂಡು "ನೀನೂ ಜಲಚರವಾದ ಆಮೆಯ ರೂಪವನ್ನು ಹೊಂದು" ಎಂದು ಪ್ರತಿಶಾಪವನ್ನು ಕೊಟ್ಟನು. ಹೀಗೆ ಅಣ್ಣತಮ್ಮಂದಿರಿಬ್ಬರೂ ಹಣಕ್ಕಾಗಿ ಬುದ್ಧಿಗೆಟ್ಟು, ಒಬ್ಬರನ್ನೊಬ್ಬರು ಶಪಿಸಿಕೊಂಡು, ಇಬ್ಬರೂ ಆಮೆಯಾಗಿಯೂ, ಆನೆಯಾಗಿಯೂ ಹುಟ್ಟಿದರು. ಅವರ ಕೋಪವು ಜನ್ಮಾಂತರದಲ್ಲಿಯೂ ಅವರ ಬೆನ್ನಟ್ಟಿ ಬಂದುದರಿಂದ, ತಮ್ಮ ತಿರ್ಯಗ್ಜನ್ಮದಲ್ಲಿಯೂ ಅವರು ಅನ್ಯೋನ್ಯದ್ವೇಷವನ್ನು ಬಿಡಲಿಲ್ಲ. ಇಬ್ಬರೂ ಆಕಾರದಲ್ಲಿಯೂ, ಬಲದಲ್ಲಿಯೂ ಕೊಬ್ಬಿ, ಈ ಸರೋವರದಲ್ಲಿ ಈಗಲೂ ಜಗಳವಾಡುತ್ತಿರುವರು. ಅದೋ! ಅವೆರಡರಲ್ಲಿ ಒಂದಾದ ಮಹಾಗಜವು ಗರ್ಜಿಸುತ್ತ ಮೇಲೇಳುವುದನ್ನು ನೋಡು. ಇದರ ಗರ್ಜನೆಯನ್ನು ಕೇಳಿ ಕೋಪಗೊಂ

ಡು, ಮಹಾಕಾಯವುಳ್ಳ ಆಮೆಯೂ ಕೂಡ ತನ್ನ ಕೈಯಾಟದಿಂದ ಕೊಳವನ್ನೆಲ್ಲ ಕಲಕುತ್ತ ಮೇಲೆಬೀಳುವುದು ನೋಡು. ಮಹಾವೀರ್ಯವುಳ್ಳ ಆನೆಯು ಆಮೆಯನ್ನು ಕಂಡೊಡನೆ ಸುಂಡಿಲನ್ನಾಡಿಸುತ್ತ ಅನೇಕ ಮತ್ಸ್ಯಗಳಿಂದ ತುಂಬಿದ ಆ ಸರೋವರವನ್ನೆಲ್ಲ ದಂತಗಳಿಂದಲೂ, ಸುಂಡಿಲಿನಿಂದಲೂ, ಬಾಲದಿಂದಲೂ, ಪಾದಾಹತಿಯಿಂದಲೂ ಅಪ್ಪಳಿಸಿ, ಕೋಪದಿಂದ ನೀರಿಗಿಳಿಯುತ್ತಿರುವುದನ್ನು ನೋಡು. ಮಹಾಬಲವುಳ್ಳ ಆಮೆಯು ಕೊಳದಿಂದ ತಲೆಯನ್ನೆತ್ತಿಕೊಂಡು ಯುದ್ಧಕ್ಕಿದಿರಾಗುತ್ತಿರುವುದು. ಆ ಆನೆಯು ಆರು ಯೋಜನಗಳ ಎತ್ತರವಾಗಿಯೂ ಅದಕ್ಕೆ ಎರಡಷ್ಟು ಉದ್ದವಾಗಿಯೂ ಇರುವುದು. ಆ ಆಮೆಯ ದೇಹವು ಮೂರು ಯೋಜನಗಳಷ್ಟು ಎತ್ತರವಾಗಿ, ಹತ್ತು ಯೋಜನಗಳ ಸುತ್ತಳತೆಯುಳ್ಳದು. ಅವೆರಡೂ ಯುದ್ಧಮದವುಳ್ಳವುಗಳು. ಒಂದನ್ನೊಂದು ಕೊಲ್ಲಬೇಕೆಂದೇ ಹಟದಿಂದಿರುವುವು. ಕುಮಾರಾ! ನೀನು ಮಹಾಮೇಘಗಳಂತಿರುವ ಅವೆರಡನ್ನೂ ಭಕ್ಷಿಸಿಬಿಡು! ಆಮೇಲೆ ಸುಖವಾಗಿ ಅಮೃತವನ್ನು ತರುವುದಕ್ಕಾಗಿ ಹೋಗು. ದೊಡ್ಡ ಬೆಟ್ಟದಂತೆ ಭಯಂಕರಾಕಾರವುಳ್ಳ ಆನೆಯನ್ನು ಭಕ್ಷಿಸಿ, ನಿನ್ನ ಹಸಿವನ್ನು ತೀರಿಸು” ಎಂದನು.

ಕಶ್ಯಪನು ಹೀಗೆಂದು ಹೇಳಿ ಅವನಿಗೆ ಮಂಗಳಾಶೀರ್ವಾದಗಳನ್ನು ನಡೆಸಿ “ಕುಮಾರಾ! ದೇವತೆಗಳೊಡನೆ ಯುದ್ಧದಲ್ಲಿ ನಿನಗೆ ಮಂಗಳವಾಗಲಿ! ಪೂರ್ಣಕುಂಭಗಳೂ, ಬ್ರಾಹ್ಮಣಾಶೀರ್ವಾದಗಳೂ, ಗೋವುಗಳೂ, ಇನ್ನೂ ಕ್ಷೇಮಕರಗಳಾದ ಮಂಗಳಗಳೆಲ್ಲ ನಿನಗೆ ಒದಗಿ ಬರಲಿ! ವತ್ಸಾ! ನೀನು ದೇವತೆಗಳೊಡನೆ ಯುದ್ಧಮಾಡುವಾಗ, ಋಕ್ಕು ಮೊದಲಾದ ಚತುರ್ವೇದಗಳೂ, ಪಾಪನಿವಾರಕಗಳಾದ ಹೋಮದ್ರವ್ಯಗಳೂ, ಸಕಲಮಂತ್ರಗಳೂ ನಿನಗೆ ಬಲವನ್ನು ಹೆಚ್ಚಿಸಲಿ!” ಎಂದು ಮಂಗಳಾಶೀರ್ವಾದಗಳನ್ನು ಮಾಡಿದನು.

ಹೀಗೆ ತಂದೆಯಿಂದಾಜ್ಞಪ್ತನಾದ ಗರುಡನು ಒಡನೆಯೇ ಅನೇಕ ಪಕ್ಷಿಗಳಿಗಾಶ್ರಯವಾಗಿ, ಶುದ್ಧಜಲವುಳ್ಳ ಸರೋವರವನ್ನು ದೃಷ್ಟಿಸಿ ನೋಡಿ ಭಯಂಕರವೇಗದಿಂದ ಅದರಲ್ಲಿ ಪ್ರವೇಶಿಸಿ, ಒಂದು ನಖಾಗ್ರದಿಂದ ಆನೆಯು

ನ್ನೂ, ಮತ್ತೊಂದು ನಖದಿಂದ ಆನೆಯನ್ನೂ ಚುಚ್ಚಿ ಮೇಲಕ್ಕೆತ್ತಿಕೊಂಡು ಆಕಾಶಕ್ಕೆ ಹಾರಿಬಿಟ್ಟನು. ಆಮೇಲೆ ಅವನು ಲಂಬವೆಂಬ ಒಂದು ತೀರ್ಥದಬಳಿಗೆ ಬಂದು, ಅಲ್ಲಿದ್ದ ಕೆಲವು ದಿವ್ಯವೃಕ್ಷಗಳ (ಕಲ್ಪವೃಕ್ಷಗಳ) ಬಳಿಗೆ ಬಂದನು. ಅವನು ಅಲ್ಲಿಗೆ ಬಂದಾಗ ಅವನ ರೆಕ್ಕೆಗಳ ಗಾಳಿಯ ವೇಗದಿಂದ, ಸುವರ್ಣಮಯಗಳಾದ ಆ ವೃಕ್ಷಗಳೆಲ್ಲವೂ ತಮಗೆ ಉಳಿಗಾಲವಿಲ್ಲವೆಂದು ಭಯದಿಂದ ನಡುಗುವಂತಾದುವು. ಕೇಳಿದ ಕೋರಿಕೆಗಳನ್ನೆಲ್ಲ ಕೊಡತಕ್ಕ ಆ ವೃಕ್ಷಗಳ ಸ್ಥಿತಿಯನ್ನು ನೋಡಿ ಗರುಡನು, ಅವುಗಳಿಗೇನೂ ಅಪಾಯವಾಗಬಾರದೆಂದು ಅಲ್ಲಿಂದ ಹೊರಟುಬಿಟ್ಟನು. ಸುವರ್ಣಫಲಗಳಿಂದಲೂ, ವೈಡೂರ್ಯಶಾಖೆಗಳಿಂದಲೂ ಪ್ರಕಾಶಿಸುವ, ಮತ್ತು ಸುತ್ತಲೂ ಸಮುದ್ರಜಲದಿಂದಾವೃತವಾದ ಬೇರೆ ಕೆಲವು ಮಹಾವೃಕ್ಷಗಳನ್ನು ಕಂಡು ಅಲ್ಲಿಗೆ ಬಂದನು. ಅವುಗಳ ನಡುವೆ ದೊಡ್ಡದೊಂದು ಆಲದ ಮರವು ಕಾಣಿಸಿತು. ಅನೇಕ ಶಾಖೆಗಳಿಂದ ಸಾವಿರಯೋಜನಗಳ ವಿಸ್ತಾರಕ್ಕೆ ಹರಡಿ, ಅನೇಕಪಕ್ಷಿಗಳಿಗೆ ಆಶ್ರಯವಾಗಿ, ಒಳ್ಳೇ ಸುಖಚ್ಛಾಯೆಯುಳ್ಳ ಆ ಮರದ ಸಮೀಪಕ್ಕೆ ಹಾರಿಬಂದನು. ಮನೋವೇಗದಿಂದ ತನ್ನಲ್ಲಿಗೆ ಬಂದ ಪಕ್ಷಿರಾಜನನ್ನು ಕಂಡು ಸಂತೋಷದಿಂದ ಆ ವೃಕ್ಷವು “ಓ ಪತಗೇಶ್ವರಾ! ಇದೋ! ಈ ನನ್ನ ಶಾಖೆಯು ನೂರು ಯೋಜನಗಳ ವಿಸ್ತಾರಕ್ಕೆ ನೀಡಿದೆ. ನೀನು ಇದರಮೇಲೆ ಸುಖವಾಗಿ ಕುಳಿತು, ನೀನು ತಂದಿರುವ ಆಹಾರಗಳನ್ನು (ಗಜ ಕಚ್ಛಪಗಳನ್ನು) ಭಕ್ಷಿಸಬಹುದು” ಎಂದಿತು. ಒಡನೆಯೇ ಗರುಡನು ಉತ್ಸಾಹದಿಂದ ಆ ಕೊಂಬೆಯ ಮೇಲೆ ಕುಳಿತೊಡನೆ, ಅನೇಕ ಪಕ್ಷಿಗಳಿಗೆ ಆಶ್ರಯವಾಗಿ, ಹಸುರೆಲೆಗಳಿಂದ ದಟ್ಟವಾಗಿ ತುಂಬಿದ್ದ ಆ ದೊಡ್ಡ ಶಾಖೆಯು, ಲಟಲಟನೆ ಮುರಿದುಹೋಯಿತು.

ಇದು ಇಪ್ಪತ್ತೊಂಭತ್ತನೆಯ ಅಧ್ಯಾಯವು.



ಮುರಿದ ಕೊಂಬೆಯ ಅಡಿಭಾಗದಲ್ಲಿ ಜೋಲಾಡುತ್ತಿದ್ದ ವಾಲಖಿಲ್ಯರಿಗೆ ಅಪಾಯವಾಗಬಾರದೆಂದು ಗರುಡನು, ಆ ಕೊಂಬೆಯು ಕೆಳಗೆ ಬೀಳದಂತೆ ಬಾಯಲ್ಲಿ ಕಚ್ಚಿಕೊಂಡೇ ಹಾರಿದುದು. ಕಶ್ಯಪಾಜ್ಞೆಯಿಂದ ಹಿಮಾಲಯಕ್ಕೆ ಹೋಗಿ, ಅಲ್ಲಿ ಕೊಂಬೆಯನ್ನಿಳಿಸಿ, ತನ್ನ ಆಹಾರಗಳಾದ ಗಜಕಚ್ಛಪಗಳನ್ನು ಭಕ್ಷಿಸಿದುದು. ದೇವತೆಗಳು ಈ ಉತ್ಪಾತಗಳನ್ನು ಕಂಡು ಅಮೃತವನ್ನು ಭದ್ರಪಡಿಸಲು ಯತ್ನಿಸಿದುದು.

ಗರುಡನ ಕಾಲು ಸೋಕಿದ ಮಾತ್ರದಿಂದಲೇ ಆ ದೊಡ್ಡ ಕೊಂಬೆಯು ಮುರಿದು ಕೆಳಗೆ ಬೀಳುವಂತಾಯಿತು ಆಗ ಗರುಡನು ಆ ಕೊಂಬೆಯು ಮುರಿದುದನ್ನು ಆಶ್ಚರ್ಯದಿಂದ ನೋಡುತ್ತಿರುವಾಗ, ಅದರ ಕೆಳಗೆ ತಲೆಕೆಳಗಾಗಿ ನೇತಾಡುತಿದ್ದ ಕೆಲವು ಋಷಿಸಮೂಹವನ್ನು ಕಂಡನು. ಆ ಬ್ರಹ್ಮಋಷಿಗಳು ತಪೋನಿರತರಾಗಿ ಅಲ್ಲ ನೇತಾಡುತ್ತಿರುವುವನ್ನು ನೋಡಿದೊಡನೆ, ಗರುಡನು ತನ್ನಲ್ಲಿ ತಾನು "ಆಹಾ! ಈ ಕೊಂಬೆಯು ಕೆಳಗೆ ಬಿದ್ದರೆ, ಇವರಡಿಯಲ್ಲಿರುವ ಋಷಿಗಳಿಗೆಲ್ಲ ಪ್ರಾಣಾಪಾಯವು ತಪ್ಪದು. ಅದಕ್ಕೆ ಅವಕಾಶಕೊಡಬಾರದು" ಎಂದು ನೆನಸಿ, ಆ ಕೊಂಬೆಯು ಕೆಳಗೆ ಬೀಳುವುದರೊಳಗಾಗಿ ಅದನ್ನು ತನ್ನ ಕೊಕ್ಕಿನಿಂದ ಕಚ್ಚಿಕೊಂಡು, ಕಾಲುಗುರುಗಳಿಂದ ಆ ಗಜಕಚ್ಛಪಗಳೆರಡನ್ನೂ ದೃಢವಾಗಿ ಸಿಕ್ಕಿಸಿಕೊಂಡು, ಆ ಮೂರು ಮಹಾಭಾರಗಳೊಡನೆ ಆಕಾಶಕ್ಕೆ ಹಾರಿಬಿಟ್ಟನು. ಹೀಗೆ ಆ ಪಕ್ಷಿಯು ದೇವತೆಗಳಿಗೂ ಅಸಾಧ್ಯವಾದ ಕಾರ್ಯವನ್ನು ಮಾಡಿದುದನ್ನು ನೋಡಿ, ವಾಲಖಿಲ್ಯರೆಂಬ ಆ ಮಹರ್ಷಿಗಳು ಮನಸ್ಸಿನಲ್ಲಿ ಆಶ್ಚರ್ಯಪಡುತ್ತ, ಆ ಪಕ್ಷಿರಾಜನನ್ನು ನೋಡಿ "ಇವನು ಇಂತಹ ಗುರುವಾದ ವಸ್ತುಗಳನ್ನು ಹೊತ್ತುಕೊಂಡು, ಆ ಮಹಾಭಾರದೊಡನೆ ಆಕಾಶದಲ್ಲಿ ಹಾರುವುದರಿಂದ ಇವನಿಗೆ "ಗರುಡ"ನೆಂಬ ಹೆಸರಾಗಲಿ" ಎಂದರು.

ಗರುಡನಾದರೋ ಆ ಮಹರ್ಷಿಗಳಿಗೆ ಅಪಾಯವಿಲ್ಲದಿರಬೇಕೆಂದು ಆ ಗಜಕಚ್ಛಪಗಳನ್ನೂ, ಕೊಂಬೆಯನ್ನೂ ಹೊತ್ತುಕೊಂಡು ಹಾಗೆಯೇ ಆಕಾಶಮಾರ್ಗವಾಗಿ ಹಾರಿ, ಅನೇಕದೇಶಗಳನ್ನು ಸುಮ್ಮನೆ ದಾಟಿಹೋಗು ತ್ತಿದ್ದನೇ ಹೊರತು, ಆ ಕೊಂಬೆಯನ್ನು ಎಲ್ಲಿಳಿಸುವುದೆಂದು ಅವನಿಗೆ ತೋ ರಲಿಲ್ಲ. ಆಮೇಲೆ ಅವನು ತನ್ನ ತಂದೆಯಾದ ಕಶ್ಯಪನು ತಪಸ್ಸುಮಾಡು ತ್ತಿದ್ದ ಗಂಧಮಾದನಪರ್ವತಕ್ಕೆ ಬಂದನು ಅಲ್ಲಿ ಕಶ್ಯಪನು ಮಹಾ ಕಾಯವುಳ್ಳ ಆ ಗರುಡನನ್ನು ಕಂಡನು. ಗರುಡನಾದರೋ, ಆಗ ತೇಜ ಸ್ಸಿನಲ್ಲಿಯೂ, ಬಲದಲ್ಲಿಯೂ ಅಸಮಾನನಾಗಿ, ಪರ್ವತಾಕಾರದಿಂದ ತೋ ರುತ್ತ, ಮನೋ ವಾಯುವೇಗದಿಂದ ಹಾರಿಬರುತ್ತ, ಮೇಲಕ್ಕೆತ್ತಿದ ಬ್ರಹ್ಮ ದಂಡದಂತೆ ಕಾಣುತ್ತಿರುವನು. ಹೀಗೆಂದು ಊಹಿಸುವುದಕ್ಕಾಗಲಿ, ನೆನೆಸು ವುದಕ್ಕಾಗಲಿ ಸಾಧ್ಯವಲ್ಲದ ಮಹಾಶಕ್ತಿಯಿಂದ, ಸರ್ವಪ್ರಾಣಿ ಭಯಂಕ ರನಾಗಿ ಜ್ವಲಿಸುವ ಬೆಂಕಿಯಂತಿರುವನು. ದೇವಾಸುರ ರಾಕ್ಷಸರಿಗೂ ಇದಿರಿಸಲಸಾಧ್ಯನಾಗಿ, ತನ್ನ ರೆಕ್ಕೆಗಳ ಗಾಳಿಯಿಂದಲೇ ಪರ್ವತಶಿಖರಗಳ ನ್ನು ಭೇದಿಸುವನು! ಸಮುದ್ರವನ್ನು ಉಕ್ಕಿಸುವನು! ಲೋಕಗಳನ್ನು ನಡು ಗಿಸುವನು! ನೋಡುವವರಿಗೆ ಯಮನಂತೆ ಉಗ್ರರೂಪಿಯಾಗಿ ಕಾಣಿಸು ವನು. ಹೀಗೆ ಬರುತ್ತಿರುವ ಗರುಡನನ್ನು ಕಂಡು ಮಹಾತ್ಮನಾದ ಕಶ್ಯಪನು, ವಾಲಖಿಲ್ಯರ ವಿಷಯದಲ್ಲಿ ಗರುಡನಿಗಿದ್ದ ಅಭಿಪ್ರಾಯವನ್ನು ತಿಳಿದುಕೊಂ ಡು, “ಕುಮಾರಾ! ಸಾಹಸಕಾರ್ಯವನ್ನು ಮಾಡಬೇಡ! ನೀನೂ ಅಪಾ ಯಕ್ಕೊಳಗಾಗಬೇಡ! ಸೂರ್ಯಕಿರಣವನ್ನೇ ಪಾನಮಾಡುತ್ತ ತಪೋನಿರತ ರಾಗಿರುವ ಈ ವಾಲಖಿಲ್ಯ ಮಹರ್ಷಿಗಳ ಕೋಪಕ್ಕೆ ನೀನು ಗುರಿಯಾದರೆ, ಅವರ ಕೋಪಾಗ್ನಿಯಿಂದ ನೀನು ಭಸ್ಮವಾಗುವೆ. ಅದಕ್ಕೆ ಅವಕಾಶ ವಿಲ್ಲದಂತೆ ಎಚ್ಚರದಿಂದಿರು” ಎಂದು ಹೇಳಿ, ಆಮೇಲೆ ಮಹಾತ್ಮರೂ, ಪಾಪರಹಿತರೂ ಅದ ಆ ವಾಲಖಿಲ್ಯರನ್ನುಕುರಿತು ಹೀಗೆಂದು ಹೇಳು ವನು. “ಓ ತಪಸ್ವಿಗಳಿರಾ! ನನ್ನ ಮಗನಾದ ಗರುಡನು ಈಗ ಆರಂ ಭಿಸಿದ ಕಾರ್ಯವು ಪ್ರಜೆಗಳ ಹಿತಕ್ಕಾಗಿಯೇ. ಈ ಮಹತ್ತಾದ ಕಾರ್ಯಕ್ಕೆ ಯತ್ನಿಸಿರುವ ಇವನಿಗೆ ನೀವು ಅನುಕೂಲರಾಗಿ, ನೀವೂ ಅದಕ್ಕೆ ಅನುಮತಿ ಯನ್ನು ಕೊಡಬೇಕು” ಎಂದು ಅವರಲ್ಲಿ ಪ್ರಾರ್ಥಿಸಿದನು. ಕಶ್ಯಪನ ಬಾ

ಯಿಂದ ಈ ಮಾತು ಹೊರಟಕೂಡಲೆ ವಾಲಖಿಲ್ಯರು ಆ ಕೊಂಬೆಯನ್ನು ಬಿಟ್ಟು ಕೆಳಗಿಳಿದು, ತಪಸ್ಸಿಗಾಗಿ ಪುಣ್ಯಸ್ಥಳವಾದ ಹಿಮಾಲಯಕ್ಕೆ ಹೋದರು. ಆಮೇಲೆ ಇತ್ತಲಾಗಿ ಗರುಡನು, ಕೊಂಬೆಯನ್ನು ಬಾಯಲ್ಲಿ ಕಚ್ಚಿದ್ದ ಹಾಗೆಯೇ ತೊದಲುಮಾತಿನಿಂದ "ಜನಕಾ! ನಾನು ಈ ಕೊಂಬೆಯನ್ನು ಎಲ್ಲಿ ಬಿಸಾಡಲಿ? ಮನುಷ್ಯರಹಿತವಾದ ಸ್ಥಳವೊಂದನ್ನು ನನಗೆ ತೋರಿಸಬೇಕು" ಎಂದನು. ಅದಕ್ಕಾ ಕಶ್ಯಪನು ಸಮೀಪದಲ್ಲಿ, ನಿರ್ಜನವಾಗಿಯೂ, ಸದಾ ಮಂಜಿನಿಂದ ಮುಚ್ಚಿದ ತಪ್ಪಲುಗಳುಳ್ಳದಾಗಿಯೂ, ಮನುಷ್ಯನಿಗೆ ಮನಸ್ಸಿನಿಂದಲೂ ಹೋಗಲಸಾಧ್ಯವಾಗಿಯೂ ಇದ್ದ ಪರ್ವತವೊಂದನ್ನು ತೋರಿಸಿದನು. ಗರುಡನು ಆ ಪರ್ವತದ ವಿಶಾಲವಾದ ಮಧ್ಯಪ್ರದೇಶಕ್ಕೆ ಆ ಮೂರು ಭಾರಗಳೊಡನೆ ವೇಗದಿಂದ ಹೊರಟನು. ನೂರು ಗೋಚರ್ಮಗಳಿಂದ ಹೆಣೆದ ಹಗ್ಗದಿಂದಾದರೂ ಸುತ್ತಿ ಎಳೆಯಲಿಕ್ಕಾಗದ ಆ ಮಹಾಶಾಖೆಯೊಡನೆ, ಗರುಡನು ನೂರು ಯೋಜನಗಳ ದೂರಕ್ಕೆ ಹಾರಿಹೋಗಿ, ತನ್ನ ತಂದೆಯು ಹೇಳಿದಂತೆ ಅದನ್ನು ಆ ಪರ್ವತದ ಮೇಲೆ ಮಹಾಧ್ವನಿಯುಂಟಾಗುವಂತೆ ಬಿಸಾಡಿಬಿಟ್ಟನು.

ಆ ಗರುಡನ ರೆಕ್ಕೆಯ ಗಾಳಿಯಿಂದ ಮಹಾಪರ್ವತವೇ ಕಂಪಿಸಿತು. ಅದರಲ್ಲಿದ್ದ ಪುಷ್ಪಿತಗಳಾದ ಗಿಡಗಳೆಲ್ಲವೂ ಕದಲಿ ಹೂಗಳು ಉದಿರುವಾಗ, ಅವು ಪುಷ್ಪವೃಷ್ಟಿಯನ್ನು ಕರೆಯುವಂತಿದ್ದುವು. ಸುವರ್ಣರತ್ನಗಳಿಂದ ಕೂಡಿದ ಆ ಪರ್ವತಕ್ಕೆ ಭೂಷಣಗಳೆನಿಸಿದ ಎಷ್ಟೋ ಶಿಖರಗಳು ಗರುಡನ ವೇಗದಿಂದ ಒಡೆದುಬಿದ್ದುವು. ಗರುಡನು ಬಿಸಾಡಿದ ಶಾಖೆಯಿಂದ ಅಲ್ಲಿನ ಅನೇಕವೃಕ್ಷಶಾಖೆಗಳು ಸುವರ್ಣಮಯಗಳಾದ ಹೂಗಳೊಡನೆ ಮುರಿದು, ಮಿಂಚಿನಿಂದ ಕೂಡಿದ ಮೇಘಗಳಂತೆ ಕಾಣಿಸುತ್ತಿತ್ತು. ಆ ಪುಷ್ಪಗಳೆಲ್ಲವೂ ನೆಲದಮೇಲಿನ ಗೈರಿಕಧಾತುಗಳ ಬಣ್ಣಗಳಿಂದಲೂ, ಸೂರ್ಯಕಿರಣಗಳಿಂದಲೂ ಮಿಶ್ರಿತವಾಗಿ, ಅಪೂರ್ವಶೋಭೆಯನ್ನುಂಟುಮಾಡುತಿದ್ದುವು. ಆಮೇಲೆ ಗರುಡನು ಆ ಪರ್ವತಶಿಖರಗಳಮೇಲೆ ಕುಳಿತು, ಆ ಗಜಕಚ್ಛಪಗಳೆರಡನ್ನೂ ಭಕ್ಷಿಸಿ, ಒಡನೆಯೇ ಆ ಪರ್ವತಶಿಖರದಿಂದ ಸ್ವರ್ಗ

ಲೋಕದ ಕಡೆಗೆ ಹಾರಿಬಿಟ್ಟನು. ಅಷ್ಟರಲ್ಲಿಯೇ ದೇವತೆಗಳಿಗೆ ಅಶುಭ ಸೂಚಕಗಳಾದ ಉತ್ಪಾತಗಳು ಕಾಣಿಸಿದುವು. ದೇವತೆಗಳೆಲ್ಲರಿಗೂ ಮನಸ್ಸಿನಲ್ಲಿ ಭೀತಿ ಹುಟ್ಟಿತು. ಇಂದ್ರನ ವಜ್ರಾಯುಧವು ಇದ್ದಕ್ಕಿದ್ದಹಾಗೆ ಉರಿಯತೊಡಗಿತು. ಹೊಗೆಯೊಡನೆಯೂ, ಜ್ವಾಲೆಗಳೊಡನೆಯೂ ಆಕಾಶದಿಂದ ಉಲ್ಕೆಗಳು ಬಿದ್ದುವು. ವಸುಗಳು, ರುದ್ರರು, ಆದಿತ್ಯರು, ಸಾಧ್ಯರು, ಮರುತ್ತುಗಳು ಮುಂತಾದ ಯಾವಯಾವ ದೇವಗಣಗಳುಂಟೋ ಅವೆಲ್ಲ ತಮ್ಮೊಳಗೇ ಒಂದಕ್ಕೊಂದು ಹೊಡೆದಾಡತೊಡಗಿದುವು. ಹಿಂದೆ ದೇವಾಸುರಯುದ್ಧದಲ್ಲಿಯೂ ಕಂಡು ಕೇಳದ ಉತ್ಪಾತಗಳೆಷ್ಟೋ ಕಾಣಿಸಿದುವು. ಬರಸಿಡಿಲುಗಳೊಡನೆ ಬಿರುಗಾಳಿಯು ಬೀಸಿತು. ಸಾವಿರಾರು ಕಡೆಯಿಂದ ಕೊಳ್ಳಿಗಳು ಬಿದ್ದುವು. ಮೇಘವಿಲ್ಲದೆ ಆಕಾಶವು ಮಹಾಧ್ವನಿಯಿಂದ ಮೊಳಗಿತು. ದೇವದೇವನಾದ ಪರ್ಜನ್ಯನು ರಕ್ತವರ್ಷವನ್ನು ಸುರಿಸಿದನು. ದೇವತೆಗಳು ಧರಿಸಿದ್ದ ಪುಷ್ಪಮಾಲಿಕೆಗಳು ಬಾಡಿದುವು. ಅವರ ತೇಜಸ್ಸು ಕಂದಿತು. ಭಯಂಕರವಾದ ಉತ್ಪಾತಮೇಘಗಳು ರಕ್ತದ ಮಳೆಯನ್ನು ಕರೆದುವು. ದೇವತೆಗಳ ಕಿರೀಟಗಳೆಲ್ಲವೂ ಧೂಳುಕವಿದು ಮಾಸಿಹೋದುವು. ಇವನ್ನೆಲ್ಲ ನೋಡಿ ಇಂದ್ರನಿಗೂ, ದೇವತೆಗಳಿಗೂ ಭೀತಿ ಹುಟ್ಟಿತು. ಒಡನೆಯೇ ದೇವತೆಗಳೆಲ್ಲರೂ ದೇವೇಂದ್ರನನ್ನು ಮುಂದಿಟ್ಟುಕೊಂಡು ಬೃಹಸ್ಪತಿಯ ಬಳಿಗೆ ಬಂದರು. ಆಗ ಇಂದ್ರನು ಬೃಹಸ್ಪತಿಯನ್ನು ಕುರಿತು "ಆಚಾರ್ಯ! ಇದ್ದಕ್ಕಿದ್ದಹಾಗೆ ಭಯಂಕರಗಳಾದ ಈ ಉತ್ಪಾತಗಳು ಕಾಣಿಸಿದುದೇಕೆ? ಯುದ್ಧದಲ್ಲಿ ನಮ್ಮನ್ನು ಜಯಿಸಬಲ್ಲ ಶತ್ರುವಾರನ್ನೂ ಕಾಣೆವು" ಎಂದನು. ಅದಕ್ಕಾ ಬೃಹಸ್ಪತಿಯು "ದೇವೇಂದ್ರಾ! ನಿನ್ನ ಅಜ್ಞತೆ ಮತ್ತು ಅಪರಾಧಗಳೇ ಇದಕ್ಕೆ ಮೂಲಕಾರಣವೆಂದು ತಿಳಿ. ವಾಲಖಿಲ್ಯರೆಂಬ ಮಹರ್ಷಿಗಳ ತಪಃಪ್ರಭಾವದಿಂದ ವಿನತೆಯಲ್ಲಿ ಕಶ್ಯಪನಿಗೆ ಹುಟ್ಟಿದ ಪಕ್ಷಿರಾಜನೊಬ್ಬನುಂಟು. ಅವನು ಮಹಾಬಲಾಢ್ಯನು. ಇಷ್ಟಬಂದ ರೂಪಗಳನ್ನು ಧರಿಸಬಲ್ಲವನು. ಅವನು ತಾನು ಬಂದ ಕಾರ್ಯವನ್ನು ಸಾಧಿಸಿಕೊಂಡೇ ಹೋಗುವನು. ಎಂತವರಿಗೂ ಅಸಾಧ್ಯವಾದುದನ್ನು ಅವನು ಸಾಧಿಸಬಲ್ಲನು" ಎಂದನು.

ಈ ಮಾತನ್ನು ಕೇಳಿದೊಡನೆ ದೇವೇಂದ್ರನು ಅಮೃತಕ್ಕೆ ಕಾವಲಾಗಿದ್ದ ದೇವಯೋಧರನ್ನು ಕರೆದು “ಎಲೈ! ಮಹಾವೀರ್ಯವೂ, ಬಲವೂ ಉಳ್ಳ ಪಕ್ಷಿಯೊಂದು ನಮ್ಮಲ್ಲಿರುವ ಅಮೃತವನ್ನು ಅಪಹರಿಸಿಕೊಂಡುಹೋಗುವುದಕ್ಕಾಗಿ ಬರುತ್ತಿದೆ. ನೀವೆಲ್ಲಗೂ ದೃಢವಾದ ಕವಚಗಳನ್ನೂ, ಆಯುಧಗಳನ್ನೂ ಧರಿಸಿ, ಅಮೃತದ ಸುತ್ತಲೂ ಕಾವಲಿದ್ದು, ಆ ಅಮೃತವು ಅದಕ್ಕೆ ಸಿಕ್ಕದಂತೆ ನೋಡಿಕೊಳ್ಳಬೇಕು. ಆ ಪಕ್ಷಿಯು ಅಸಮಾನ ಬಲವುಳ್ಳವನೆಂದು ಗುರುವಾದ ಬೃಹಸ್ಪತಿಯೇ ಹೇಳಿರುವನು” ಎಂದನು. ಈ ಮಾತನ್ನು ಕೇಳಿ ದೇವಭಟರೆಲ್ಲರೂ ಆಶ್ಚರ್ಯಗೊಂಡು, ಬಹಳ ಎಚ್ಚರಿಕೆಯಿಂದ ಆ ಅಮೃತಕ್ಕೆ ಕಾವಲಾಗಿ ನಿಂತರು. ಇಂದ್ರನೂ ವಜ್ರಧಾರಿಯಾಗಿ ಅಲ್ಲಿಯೇ ಕಾವಲಿದ್ದನು. ಅನೇಕದೇವವೀರರು ಸುವರ್ಣ, ವೈಡೂರ್ಯಖಚಿತಗಳಾದ ಕವಚಗಳನ್ನು ಧರಿಸಿ, ಭಯಂಕರಗಳಾದ ವಿವಿಧಾಸ್ತ್ರಗಳನ್ನೂ, ಚರ್ಮದ ಗುರಾಣಿಗಳನ್ನೂ, ತೀಕ್ಷ್ಣವಾದ ಅಲಗುಳ್ಳ ಕತ್ತಿಗಳನ್ನೂ, ಉರಿಯನ್ನೂ, ಕಿಡಿಯನ್ನೂ, ಹೊಗೆಯನ್ನೂ ಕಕ್ಕುವ ಚಕ್ರಗಳನ್ನೂ, ಪರಿಘಗಳು, ತ್ರಿಶೂಲಗಳು, ಗಂಡುಗೊಡಲಿಗಳು, ವಿವಿಧ ಶಕ್ತಿಗಳು ಕಾಂತಿಯಿಂದ ಥಳಥಳಿಸುವ ಬಗೆಬಗೆಯ ಕತ್ತಿಗಳು, ತಮ್ಮತಮ್ಮ ದೇಹದ ಅಳತೆಗೆ ಸರಿಯಾದ ಗದೆಗಳು, ಇವುಗಳನ್ನೆಲ್ಲ ಸಿದ್ಧವಾಗಿ ಹಿಡಿದು, ದಿವ್ಯಾಭರಣಗಳಿಂದ ಅಲಂಕೃತರಾಗಿ, ಇನ್ನು ತಮಗೆ ಭಯವಿಲ್ಲವೆಂಬ ನಂಬಿಕೆಯಿಂದ ಅಲ್ಲಿ ಕಾವಲಾಗಿದ್ದರು ಎಣೆಯಿಲ್ಲದ ಬಲಪರಾಕ್ರಮಗಳುಳ್ಳವರೂ, ಅನೇಕ ದೈತ್ಯನಗರಗಳನ್ನು ಧ್ವಂಸಮಾಡಿದವರೂ ಆದ ದೇವವೀರರು, ಉರಿಯುವ ಬೆಂಕಿಯಂತೆ ದೇಹಕಾಂತಿಯುಳ್ಳವರಾಗಿ, ಅಮೃತವನ್ನು ರಕ್ಷಿಸಿಕೊಳ್ಳುವುದರಲ್ಲಿ ಬಹಳ ಎಚ್ಚರಿಕೆಯಿಂದಿದ್ದರು. ಕೈಯಲ್ಲಿ ಹಿಡಿದ ಲಕ್ಷೋಪಲಕ್ಷ ಆಯುಧಗಳ ಮತ್ತು ಮೈಮೇಲಿನ ಆಭರಣಗಳ ಕಾಂತಿಯಿಂದ ಪ್ರಕಾಶಿಸುತ್ತಿದ್ದ ಆ ದೇವಸೈನ್ಯವು ಸೂರ್ಯಕಿರಣಾವೃತವಾದ ಆಕಾಶದಂತೆ ಅಪಾರವಾಗಿದ್ದಿತು.

ಇದು ಮೂವತ್ತನೆಯ ಅಧ್ಯಾಯವು.



{ ವಾಲಖಿಲ್ಯರ ತಪಸ್ಸಿನಿಂದ ಗರುಡನು ಹುಟ್ಟಿದ ಕಥೆ. ಅವನಿಗೆ ಪಕ್ಷಿರಾಜ್ಯಾಭಿಷೇಕವು. }

ಈ ನಡುವೆ ಶೌನಕನು ಸೂತಪೌರಾಣಿಕನನ್ನು ಕುರಿತು "ಓ ಮಹಾತ್ಮಾ! ಬೃಹಸ್ಪತಿಯು ದೇವೇಂದ್ರನನ್ನು ಕುರಿತು ಅವನ ಅಪರಾಧವೇ ಈ ಅನರ್ಥಕ್ಕೆ ಕಾರಣವೆಂದು ಹೇಳಿದುದಾಗಿ ತಿಳಿಸಿದೆಯಲ್ಲವೆ? ದೇವೇಂದ್ರನು ಮಾಡಿದ ತಪ್ಪೇನು? ಅವನ ಅಜ್ಞತೆಯು ತಾನೇ ಏನು? ವಾಲಿಖಿಲ್ಯರ ತಪಸ್ಸಿನಿಂದ ಗರುಡನು ಹುಟ್ಟಿದುದು ಹೇಗೆ? ಬ್ರಾಹ್ಮಣನಾದ ಕಶ್ಯಪನಿಗೆ ಪಕ್ಷಿಯು ಮಗನಾಗಿ ಹುಟ್ಟಿದುದು ಹೇಗೆ? ಆ ಗರುಡನು ಸಮಸ್ತ ಭೂತಗಳಿಗೂ, ಅಜೇಯನೂ, ಅವಧ್ಯನೂ ಆಗಿ, ಇಷ್ಟಬಂದ ಕಡೆಗೆ ಹೋಗುವ ಮತ್ತು ಇಷ್ಟಬಂದಂತೆ ಪರಾಕ್ರಮವನ್ನು ತೋರಿಸುವ ಶಕ್ತಿಯೂ ಅವನಿಗುಂಟಾದುದು ಹೇಗೆ? ಇವೆಲ್ಲಾ ಪೂರ್ವಚರಿತ್ರದಲ್ಲಿ ಹೇಳಲ್ಪಟ್ಟಿದ್ದರೆ, ಅದನ್ನು ನಾವು ಕೇಳಬೇಕೆಂದಿರುವೆವು" ಎಂದನು

ಅದಕ್ಕಾ ಸೌತಿಯು "ಓ ಬ್ರಾಹ್ಮಣೋತ್ತಮಾ! ಇವೆಲ್ಲ ಪುರಾಣದಲ್ಲಿರುವ ವಿಷಯಗಳೇ! ಅವುಗಳನ್ನು ಸಂಗ್ರಹಿಸಿ ಹೇಳುವೆನು ಕೇಳು. ಪೂರ್ವದಲ್ಲಿ ಸೃಷ್ಟಿಕರ್ತನಾದ ಕಶ್ಯಪನು ಪುತ್ರಾಪೇಕ್ಷೆಯಿಂದ ಯಾಗವನ್ನಾರಂಭಿಸಿದನು. ಆಗ ಋಷಿಗಳೂ, ದೇವತೆಗಳೂ, ಗಂಧರ್ವರೂ ಸಹಾಯಕರಾಗಿ, ಅವನು ಹೇಳಿದ ಕೆಲಸಗಳನ್ನು ಮಾಡಿಕೊಡುತಿದ್ದರು. ಈ ನಡುವೆ ಕಶ್ಯಪನು ಇಂದ್ರನನ್ನೂ, ವಾಲಖಿಲ್ಯ ಋಷಿಗಳನ್ನೂ, ಇತರ ದೇವತೆಗಳನ್ನೂ ಸಮಿತ್ತನ್ನು ತರುವುದಕ್ಕಾಗಿ ಕಳುಹಿಸಿದನು. ಅವರಲ್ಲಿ ಇಂದ್ರನು ಹೆಚ್ಚು ದೇಹಬಲವುಳ್ಳವನಾಗಿದ್ದುದರಿಂದ, ತನ್ನ ಶಕ್ತಿಗೆ ತಕ್ಕಂತೆ ಪರ್ವತಾಕಾರವಾದ ಸಮಿತ್ತುಗಳ ಹೊರೆಯೊಂದನ್ನು ಸೇರಿಸಿ ಕಟ್ಟಿ, ನಿರಾಯಾಸವಾಗಿ ಅದನ್ನು ಸಾಗಿಸಿ ತರುತಿದ್ದನು. ಹೀಗೆ ಬರುತ್ತಿರುವಾಗ ಅದೇ ದಾರಿಯಲ್ಲಿ ಅವನ ಹೆಬ್ಬೆರಳಿನ ನಡುವೆ ಇರುವ ರೇಖೆಯಷ್ಟು ಕುಳ್ಳಾದ ದೇಹವುಳ್ಳ ಅನೇಕ ಋಷಿಗಳು (ವಾಲಖಿಲ್ಯರು) ಒಂದಾಗಿ ಸೇರಿ, ಒಂದು ಸಣ್ಣ ಮುತ್ತುಗದ ಕೊನೆಯನ್ನು ಹೆಗಲಮೇಲೆ ಹೊತ್ತುಕೊಂಡು, ಅದರ

ಭಾರವನ್ನೇ ತಡೆಯಲಾರದೆ, ತಮ್ಮ ಮೈಯೊಳಗೇ ತಾವು ಹುದುಗಿಕೊಂಡಂತೆ ಭಾರದಿಂದ ಕುಗ್ಗಿ, ಅದನ್ನು ಹೊರಲಾರದೆ ಹೊತ್ತುಕೊಂಡು ಬರುತ್ತ, ದಾರಿಯಲ್ಲಿ ಒಂದು ಹಸುವಿನ ಹೆಜ್ಜೆಯಿಂದ ಆದ ಹಳ್ಳದಲ್ಲಿ ನಿಂತಿದ್ದ ನೀರನ್ನೂ ದಾಟಿ ಬರಲಾರದೆ, ಅಲ್ಲಿಯೇ ಶಕ್ತಿಗುಂದಿ ಆಹಾರವಿಲ್ಲದೆ ಕಷ್ಟಪಡುತ್ತಿರುವುದನ್ನು ಕಂಡನು. ಬಲಗರ್ವಿತನಾದ ಇಂದ್ರನಿಗೆ ಅವರ ಸ್ಥಿತಿಯನ್ನು ನೋಡಿ ಆಶ್ಚರ್ಯವಾಯಿತು. ಅವರನ್ನು ನೋಡಿ ನಕ್ಕು ಪರಿಹಾಸ್ಯಮಾಡುತ್ತ, ದಾರಿಯಲ್ಲಿ ಕುಳಿತಿದ್ದ ಅವರ ತಲೆಯನ್ನು ದಾಟಿಕೊಂಡೇ ಮುಂದೆ ಹೊರಟುಹೋದನು. ಆಮೇಲೆ ಆ ವಾಲಖಿಲ್ಯರು ಕೋಪದಿಂದಲೂ, ವ್ಯಸನದಿಂದಲೂ ಆ ಇಂದ್ರನಿಗೆ ಭಯವನ್ನು ಹುಟ್ಟಿಸತಕ್ಕ ಒಂದು ದೊಡ್ಡ ಕಾರ್ಯವನ್ನಾರಂಭಿಸಿದರು. ಮಂತ್ರಪೂರ್ವಕವಾಗಿ ಅಗ್ನಿಯನ್ನು ಪ್ರತಿಷ್ಠಿಸಿದರು. ಆ ಅಗ್ನಿಯಲ್ಲಿ ಅವರು ಹೋಮಕಾರ್ಯವನ್ನಾರಂಭಿಸಿದ ಉದ್ದೇಶವನ್ನು ತಿಳಿಸುವೆನು ಕೇಳು. ವ್ರತನಿಯಮವುಳ್ಳ ಅವರು ಈ ಇಂದ್ರನಿಗೆ ಭಯವನ್ನುಂಟುಮಾಡತಕ್ಕ ಬೇರೊಬ್ಬ ಇಂದ್ರನನ್ನೇ ದೇವತೆಗಳಿಗೆಲ್ಲ ಅಧಿಪತಿಯನ್ನಾಗಿ ಮಾಡಬೇಕೆಂದೂ, ಆ ಹೊಸ ಇಂದ್ರನು ಇಷ್ಟಬಂದಂತೆ ವೀರ್ಯವುಳ್ಳವನೂ, ಇಷ್ಟಬಂದ ಕಡೆಗೆ ಸಂಚರಿಸತಕ್ಕವನೂ ಆಗಿ ಈ ಇಂದ್ರನಿಗಿಂತಲೂ ಬಲಪರಾಕ್ರಮಗಳಲ್ಲಿ ಶತಗುಣಾಧಿಕನಾಗಿ, ಮನೋವೇಗವುಳ್ಳವನಾಗಿ, ಭಯಂಕರನಾಗಿರಬೇಕೆಂದೂ ನಿರ್ಧರಿಸಿ “ ತಮ್ಮ ತಪಃಫಲದಿಂದ ಅಂತಹ ಹೊಸ ಇಂದ್ರನೊಬ್ಬನುಂಟಾಗಲಿ” ಎಂದು ಸಂಕಲ್ಪಿಸಿ ಹೋಮವನ್ನಾರಂಭಿಸಿದರು. ಈ ವೃತ್ತಾಂತವು ಇಂದ್ರನ ಕಿವಿಗೆ ಮುಟ್ಟಿತು. ಅದನ್ನು ಕೇಳಿದೊಡನೆ ಅವನು ಭಯಪಟ್ಟು ದುಃಖದಿಂದ ಕಶ್ಯಪನ ಬಳಿಗೆ ಬಂದು ಮರೆಹೊಕ್ಕನು. ಆಗ ಕಶ್ಯಪನು ವಾಲಖಿಲ್ಯರ ಬಳಿಗೆ ಹೋಗಿ “ ಎಲೈ ಮಹರ್ಷಿಗಳಿರಾ! ನೀವು ಯಾವ ಫಲವನ್ನುದ್ದೇಶಿಸಿ ಈ ಹೋಮಕಾರ್ಯವನ್ನಾರಂಭಿಸಿದಿರಿ? ವಾಸ್ತವಸ್ಥಿತಿಯನ್ನು ನನಗೆ ತಿಳಿಸಿರಿ ” ಎಂದನು. ಆಗ ಸತ್ಯವಾದಿಗಳಾದ ಆ ಋಷಿಗಳು “ ಮಹಾತ್ಮಾ! ಐಶ್ವರ್ಯದ ಹೆಮ್ಮೆಯಿಂದ ಕೊಬ್ಬಿ, ಸದಾಚಾರವೇನೆಂದು ತಿಳಿಯದೆ, ಅಮಾರ್ಗದಿಂದ ಹೋದ ಈ ದೇವೇಂದ್ರನಿಂದ ನಾವು ಅವಮಾನಿಸಲ್ಪಟ್ಟೆವು. ಅವನ ಹೆಮ್ಮೆಯನ್ನು ಮುರಿಯಬೇಕೆಂಬುದಕ್ಕಾಗಿಯೇ ನಾವು ಈ ಕಾರ್ಯವನ್ನಾ

ರಂಭಿಸಿರುವೆವು. ಅದು ಹಾಗೆಯೇ ನಡೆದು ತೀರಬೇಕು" ಎಂದು ಪ್ರತ್ಯುತ್ತರವನ್ನು ಹೇಳಿದರು. ಆಗ ಕಶ್ಯಪನು ಅವರನ್ನು ನೋಡಿ, ಸಮಾಧಾನ ಪೂರ್ವಕವಾಗಿ "ಎಲೈ ಮಹರ್ಷಿಗಳಿರಾ! ಆ ಇಂದ್ರನೆಂಬವನು ಬ್ರಹ್ಮ ಸಂಕಲ್ಪದಿಂದ ಮೂರು ಲೋಕಕ್ಕೂ ಇಂದ್ರನಾಗಿ ಏರ್ಪಟ್ಟವನು. ಅಂತಹ ಇಂದ್ರನನ್ನೇ ನೀವೂ ಸೃಷ್ಟಿಸುವುದಕ್ಕೆ ಪ್ರಯತ್ನಿಸುತ್ತಿರುವಿರಿ. ಇದರಿಂದ ನೀವು ಆ ಬ್ರಹ್ಮನ ಮಾತನ್ನೇ ಸುಳ್ಳಾಗಿಸಿದಂತೆ ಆಗುವುದಲ್ಲವೆ? ಆದರೆ, ನೀವು ಪ್ರಯತ್ನಿಸಿರುವ ಸಂಕಲ್ಪವೂ ಸುಳ್ಳಾಗಬಾರದು. ನಿಮ್ಮ ತಪೋಬಲದಿಂದ ಹುಟ್ಟುವ ವ್ಯಕ್ತಿಯು ಪಕ್ಷಿಗಳಿಗೆಲ್ಲಾ ಇಂದ್ರನಾಗಿರಲಿ! ನಿಮ್ಮ ತಪೋಬಲದಿಂದ ಅವನಿಗೆ ಲೋಕಾತಿಶಯವಾದ ಬಲವೂ, ಶಕ್ತಿಯೂ ಉಂಟಾಗಲಿ. ದೈನ್ಯದಿಂದ ಬೇಡಿಕೊಳ್ಳುತ್ತಿರುವ ಆ ಇಂದ್ರನಲ್ಲಿ ನೀವು ಅನುಗ್ರಹವನ್ನು ತೋರಿಸಬೇಕು" ಎಂದನು.

ಕಶ್ಯಪನು ಹೇಳಿದ ಮಾತನ್ನು ನಿರಾಕರಿಸಲಾರದೆ ಆ ವಾಲಖಿಲ್ಯ ಮಹರ್ಷಿಗಳು ಗೌರವಪೂರ್ವಕವಾಗಿ ಕಶ್ಯಪನನ್ನು ಕುರಿತು "ಓ ಋಷಿವರ್ಯಾ! ನಾವು ಇಂದ್ರನಿಗಾಗಿಮಾತ್ರವಲ್ಲ! ನಿನಗೆ ಸಂತಾನವನ್ನುದ್ದೇಶಿಸಿಯೂ ಈ ಕಾರ್ಯವನ್ನಾರಂಭಿಸಿದೆವು. ಆದುದರಿಂದ ಈ ನಮ್ಮ ಕಾರ್ಯವನ್ನು ಇದರ ಫಲದೊಡನೆ ನಿನಗೇ ಒಪ್ಪಿಸಿಬಿಡುವೆವು. ಅದನ್ನು ನೀನು ಪರಿಗ್ರಹಿಸಿ, ಮುಂದೆ ಹೇಗೆ ಮಾಡಿದರೆ ಮೇಲೆಂದು ತೋರುವುದೋ ಹಾಗೆ ನಡೆಸಬಹುದು" ಎಂದರು. ಇದೇ ಸಮಯಕ್ಕೆ ಸರಿಯಾಗಿ ಕಶ್ಯಪ ಪತ್ನಿಯಾದ ವಿನತೆಯು ಪುತ್ರಾರ್ಥವಾಗಿ ತಪಸ್ಸನ್ನು ಮಾಡಿ, ವ್ರತವನ್ನು ಹಿಡಿದು, ಸ್ನಾನದಿಂದ ಪರಿಶುದ್ಧಳಾಗಿ ತನಗೆ ಪುತ್ರನನ್ನು ಕರುಣಿಸಬೇಕೆಂದು ಪತಿಯ ಬಳಿಗೆ ಬಂದಳು. ಆಗ ದಕ್ಷಪುತ್ರಿಯಾದ ವಿನತೆಯನ್ನು ನೋಡಿ ಕಶ್ಯಪನು "ಎಲೆ ಕಲ್ಯಾಣಿ! ನಿನ್ನ ಇಷ್ಟವು ಕೈಗೂಡುವುದು. ನಿನಗೆ ಮಹಾವೀರರೂ, ಮೂರು ಲೋಕಕ್ಕೂ ಪೂಜ್ಯರೂ, ಮಹಾತ್ಮರೂ ಆದ ಇಬ್ಬರು ಪುತ್ರರು ಜನಿಸುವರು. ವಾಲಖಿಲ್ಯರ ತಪೋಬಲದಿಂದಲೂ, ನನ್ನ ಸಂಕಲ್ಪಬಲದಿಂದಲೂ ಅವರು ಮೂರು ಲೋಕಕ್ಕೂ ಪ್ರಭುಗಳೆನಿಸತಕ್ಕ ಮಹಾಮಹಿಮೆಯನ್ನು ಹೊಂದುವರು. ಆದುದರಿಂದ ಈ ನಿನ್ನ

ಗರ್ಭವನ್ನು ಬಹಳ ಎಚ್ಚರಿಕೆಯಿಂದ ರಕ್ಷಿಸುತ್ತಿರು. ಈ ಗರ್ಭದಿಂದ ಮುಂದೆ ನಿನಗೆ ಬಹಳ ಮೇಲ್ಮೆಯುಂಟಾಗುವುದು. ಆ ಇಬ್ಬರು ಮಕ್ಕಳಲ್ಲಿ ಒಬ್ಬನು ಸರ್ವಲೋಕಪೂಜಿತನಾಗಿ, ಕಾಮರೂಪವುಳ್ಳ ಪಕ್ಷಿಯಾಗಿ ಹುಟ್ಟಿ, ಪಕ್ಷಿಜಾತಿಗಳಿಗೆಲ್ಲ ಇಂದ್ರನೆನಿಸುವನು" ಎಂದನು. ಆಮೇಲೆ ಕಶ್ಯಪನು ಭಯದಿಂದ ತನ್ನಲ್ಲಿ ಮರೆಹೊಕ್ಕ ದೇವೇಂದ್ರನನ್ನು ನೋಡಿ, "ಇಂದ್ರಾ! ನೀನು ಹೆದರಬೇಡ. ನಿನಗೆ ಮಹಾಪರಾಕ್ರಮಶಾಲಿಗಳಾದ ತಮ್ಮಂದಿರಿಬ್ಬರು ಹುಟ್ಟುವರು. ಅವರು ನಿನಗೂ ಸಹಾಯಕರಾಗುವರು. ಅವರಿಂದ ನಿನಗೇನೂ ಹಾನಿಯುಂಟಾಗದು. ಅವರಿಗಾಗಿ ನೀನು ಭಯಪಡಬೇಕಾದುದಿಲ್ಲ. ನಿನ್ನ ಇಂದ್ರಪದವಿಗೂ ಅವರು ಲೋಪವನ್ನು ತರುವವರಲ್ಲ. ನೀನೇ ಇಂದ್ರನಾಗಿರುವೆ. ಆದರೆ, ಇನ್ನುಮೇಲೆ ನೀನು ಬ್ರಹ್ಮನಿಷ್ಠರಾದ ಮಹರ್ಷಿಗಳಲ್ಲಿ ಹೀಗೆ ನಡೆಯಬಾರದು. ಅಂತವರನ್ನು ನೀನು ಯಾವ ವಿಧದಿಂದಲೂ ಅವಮಾನಗೊಳಿಸಬಾರದು. ನಿನ್ನ ಕೈಯಲ್ಲಿರುವ ವಜ್ರಾಯುಧಕ್ಕಿಂತ ಕ್ರೂರವಾದ ವಜ್ರಾಯುಧವು ಅವರ ನಾಲಗೆಯಲ್ಲಿದೆಯೆಂದು ತಿಳಿ. ಅಂತವರನ್ನು ಅವಮಾನಗೊಳಿಸಬಾರದು" ಎಂದನು. ಈ ಮಾತನ್ನು ಕೇಳಿದಮೇಲೆ ಇಂದ್ರನು ನಿರ್ಭಯನಾಗಿ ಸ್ವರ್ಗಕ್ಕೆ ಹೋಗಿಸೇರಿದನು. ವಿನತೆಯ ಕೋರಿಕೆಯು ಕೈಗೂಡಿದುದರಿಂದ ಅವಳಿಗೂ ತೃಪ್ತಿಯಾಯಿತು. ಸ್ವಲ್ಪ ಕಾಲದಲ್ಲಿಯೇ ಅವಳಿಗೆ ಅರುಣನೆಂದೂ, ಗರುಡನೆಂದೂ ಇಬ್ಬರು ಮಕ್ಕಳಾದರು. ಅವರಲ್ಲಿ ಮೊದಲನೆಯವನು ತೊಡೆಯಿಲ್ಲದೆ ಅಂಗಹೀನನಾದುದರಿಂದ, ಅವನು ಸೂರ್ಯನಿಗೆ ಸಾರಥಿಯಾದನು. ದೇವತೆಗಳು ಗರುಡನನ್ನೇ ಪಕ್ಷಿಗಳಿಗೆಲ್ಲ ಇಂದ್ರನನ್ನಾಗಿ ಮಾಡಿ, ಪಟ್ಟಾಭಿಷೇಕವನ್ನು ನಡೆಸಿದರು. ಮುಂದೆ ಆ ಗರುಡನು ಮಾಡಿದ ಮಹಾಕಾರ್ಯಗಳನ್ನೂ ತಿಳಿಸುವೆನು ಕೇಳು.

ಇದು ಮೂವತ್ತೊಂದನೆಯ ಅಧ್ಯಾಯವು.



(ಗರುಡನಿಗೂ ದೇವತೆಗಳಿಗೂ ಯುದ್ಧವು ನಡೆದುದು. ದೇವತೆಗಳು ಪರಾಜಿತರಾಗಿ ಓಡಿಹೋದುದು.)

ಓ ಮಹರ್ಷಿಗಳಿರಾ! ಮಹಾಬಲವುಳ್ಳ ಗರುಡನು ಪರ್ವತಾಗ್ರದಿಂದ ಮೇಲಕ್ಕೆಗರಿ, ನೆಟ್ಟಗೆ ದೇವತೆಗಳ ಸ್ಥಾನಕ್ಕೆ ಬಂದು ಸೇರಿದನು. ಇವನ ಆರ್ಭಟವನ್ನು ನೋಡಿ ದೇವತೆಗಳ ಮೈಯೆಲ್ಲ ನಡುಗಿಹೋಯಿತು. ಭಯದಿಂದ ಬುದ್ಧಿಗೆಟ್ಟು ಅವರು ತಮ್ಮ ಕೈಯಲ್ಲಿದ್ದ ಆಯುಧಗಳನ್ನು ತಮ್ಮ ಕಡೆಯವರಮೇಲೆಯೇ ಪ್ರಯೋಗಿಸುತ್ತಿದ್ದರು. ಮಿಂಚಿಗೂ, ಅಗ್ನಿಗೂ ಸಮಾನವಾದ ತೇಜಸ್ಸುಳ್ಳವನಾಗಿ, ಅಚಿಂತ್ಯಪರಾಕ್ರಮವುಳ್ಳ ಭೌಮನೆಂಬವನೊಬ್ಬನು ಆ ಅಮೃತಕ್ಕೆ ಕಾವಲಾಗಿರುತಿದ್ದನು. ಮೊದಲು ಒಂದು ಮುಹೂರ್ತಕಾಲದವರೆಗೆ ಆ ಭೌಮನನಿಗೂ, ಗರುಡನಿಗೂ ದೊಡ್ಡ ಯುದ್ಧವು ನಡೆಯಿತು. ಕೊನೆಗೆ ಗರುಡನು ತನ್ನ ರೆಕ್ಕೆಗಳಿಂದಲೂ, ಕೊಕ್ಕಿನಿಂದಲೂ, ಕಾಲುಗುರುಗಳಿಂದಲೂ ಬಡಿದು ಅವನನ್ನು ಮೃತಪ್ರಾಯನನ್ನಾಗಿ ಮಾಡಿ ಕೆಳಕ್ಕೆ ಕೆಡಹಿಬಿಟ್ಟನು. ಆಮೇಲೆ ತನ್ನ ರೆಕ್ಕೆಯ ಗಾಳಿಯಿಂದ ದೊಡ್ಡ ಧೂಳನ್ನೆಬ್ಬಿಸಿ ದೇವತೆಗಳನ್ನೆಲ್ಲ ಅದರಿಂದ ಮುಚ್ಚಿ, ಲೋಕವನ್ನೆಲ್ಲ ಪ್ರಕಾಶಹೀನವನ್ನಾಗಿ ಮಾಡಿದನು. ದೇವತೆಗಳಿಗೆ ಅದರಿಂದ ದಿಕ್ಕುತೋರದಂತಾಯಿತು. ಅಮೃತವನ್ನು ಕಾಯುತಿದ್ದವರಿಗೆಲ್ಲ ಕಣ್ಣು ಕಾಣಿಸದಂತಾದುವು. ಸ್ವರ್ಗಲೋಕವೇ ಗರುಡನಿಂದ ಉಲ್ಲೋಲಕಲ್ಲೋಲವಾಯಿತು. ಅಲ್ಲಲ್ಲಿ ಕಣ್ಣಿಗೆ ಬಿದ್ದವರನ್ನೆಲ್ಲ ಅವನು ರೆಕ್ಕೆಗಳಿಂದಲೂ, ಕೊಕ್ಕಿನಿಂದಲೂ ಬಡಿದು ಕೆಡಹುತಿದ್ದನು. ಆಗ ದೇವೇಂದ್ರನು ವಾಯುವನ್ನು ನೋಡಿ "ಓ ಮಾರುತಾ! ನೀನು ನಿನ್ನ ಶಕ್ತಿಯಿಂದ ಈ ರಜೋವರ್ಷವನ್ನು ತೂರಿಸಿಬಿಡು. ಇದು ನಿನಗೆ ಸೇರಿದ ಕಾರ್ಯವು" ಎಂದನು. ಒಡನೆಯೇ ಬಿರುಗಾಳಿಯೆದ್ದು ಧೂಳೆಲ್ಲ ಅಡಗಿತು. ಅದರಿಂದ ಸ್ವಲ್ಪ ಬೆಳಕು ಹುಟ್ಟಿ, ದೇವತೆಗಳಿಗೆ ಸ್ವಲ್ಪ ಕಣ್ಣುಕಾಣುವಂತಾಯಿತು. ಎಲ್ಲರೂ ಗುಂಪುಕೂಡಿ ಪಕ್ಷಿರಾಜನನ್ನು ಹೊಡೆಯುವುದಕ್ಕೆ ಆರಂಭಿಸಿದರು. ಈ ಪ್ರಯತ್ನವನ್ನು ನೋಡಿ ಗರುಡನಿಗೆ ಮತ್ತಷ್ಟು ರೇಗಿತು. ಆಕಾಶದಲ್ಲಿ ಮೇಘಗರ್ಜನೆಯಂತೆ ಸಮಸ್ತ ಭೂತಗಳನ್ನೂ ನಡುಗಿಸುವ ಹಾಗೆ ಒಂದುಗರ್ಜನೆಯನ್ನು ಮಾಡಿದನು. ಒಡನೆಯೇ ಅಂತರಿಕ್ಷಕ್ಕೆ

ಹಾರಿದನು. ಹೀಗೆ ಮೇಲೆ ಹಾರುತ್ತಿರುವ ಗರುಡನನ್ನು ನೋಡಿ ಇಂದ್ರಾದಿ ದೇವತೆಗಳೆಲ್ಲ ಕವಚಧಾರಿಗಳಾಗಿ, ಪರಿಘ, ಪಟ್ಟಿಸ, ಶೂಲ, ಗದೆ ಮುಂತಾದ ವಿವಿಧಾಯುಧಗಳನ್ನು ಅಪರಿಮಿತವಾಗಿ ಅವನಮೇಲೆ ಪ್ರಯೋಗಿಸ ತೊಡಗಿದರು. ಕೆಲವರು ಅರ್ಧಚಂದ್ರ ಬಾಣಗಳನ್ನೂ, ಕೆಲವರು ಸೂರ್ಯಾಕಾರಕ್ಕಿರುವ ಕ್ಷುರಪ್ರಗಳೆಂಬ ಚಕ್ರಗಳನ್ನೂ, ಇನ್ನು ಕೆಲವರು ನಾನಾಬಗೆಯ ಶಸ್ತ್ರಗಳನ್ನೂ ಪ್ರಯೋಗಿಸಿ, ನಾನಾಕಡೆಗಳಿಂದ ಪೀಡಿಸುತಿದ್ದರೂ, ಗರುಡನು ಅವುಗಳ ಪೆಟ್ಟಿನಿಂದ ಸ್ವಲ್ಪಮಾತ್ರವೂ ಕದಲದೆ, ಅವರೊಡನೆ ಯುದ್ಧಮಾಡುತ್ತಲೇ ಇದ್ದನು. ಲೋಕವನ್ನೇ ದಹಿಸುವಂತೆ ಕಾಣುತ್ತ, ರೆಕ್ಕೆಗಳಿಂದಲೂ, ಎದೆಯಿಂದಲೂ ಹೊಡೆದು ಅವರನ್ನು ನಾನಾ ಕಡೆಗೆ ಓಡಿಸುತಿದ್ದನು. ಆ ಗರುಡನ ಕೊಕ್ಕಿನಿಂದಲೂ, ಕಾಲುಗಳಿಂದಲೂ ಗಾಯಪಟ್ಟ ದೇವತೆಗಳ ಅಂಗಾಂಗಗಳಿಂದಲೂ ರಕ್ತವು ಸುರಿಯುತ್ತಿತ್ತು. ದೇವತೆಗಳೆಲ್ಲರೂ ಆ ಪ್ರಹಾರಗಳನ್ನು ತಡೆಯಲಾರದೆ ಪಲಾಯನಮಾಡಿದರು. ದೇವತೆಗಳಿಗೆ ಉಂಟಾದ ಈ ಪರಾಜಯವನ್ನು ನೋಡಿ, ಇತರ ದೇವಗಣಗಳೆಲ್ಲವೂ ನಾಲ್ಕುಕಡೆಗಳಿಂದಲೂ ಆ ಗರುಡನನ್ನಿದಿರಿಸುವುದಕ್ಕೆ ಬಂದರು. ಸಾಧ್ಯರೂ, ಗಂಧರ್ವರೂ ಪೂರ್ವದಿಕ್ಕಿನಿಂದ ಇದಿರಿಸಿ ಬಂದರು. ವಸುಗಳೂ, ರುದ್ರರೂ ದಕ್ಷಿಣದಿಕ್ಕಿನಿಂದ ಬಂದರು. ಆದಿತ್ಯರು ಪಶ್ಚಿಮ ದಿಕ್ಕಿನಿಂದಲೂ, ಅಶ್ವಿನೀದೇವತೆಗಳು ಉತ್ತರದಿಕ್ಕಿನಿಂದಲೂ ಗರುಡನನ್ನಿದಿರಿಸಿ, ಕೊನೆಗೆ ಅವರೂ ಅವನ ಪ್ರಹಾರಗಳನ್ನು ತಡೆಯಲಾರದೆ, ಗರುಡನ ಸಾಹಸಕಾರ್ಯವನ್ನು ಆಶ್ಚರ್ಯದಿಂದ ತಿರುಗಿತಿರುಗಿ ನೋಡುತ್ತ ಪಲಾಯನಮಾಡಿದರು. ಆಮೇಲೆ ಗರುಡನು ದಾರಿಯುದ್ದಕ್ಕೂ ಕ್ರಮವಾಗಿ ತನ್ನನ್ನಿದಿರಿಸಿ ನಿಂತ ಅಶ್ವಕ್ರಂದ, ರೇಣುಕ, ಕ್ರಥನ, ತಪನ, ಉಲೂಕ, ಶ್ವಸನ, ನಿಮೇಷ, ಪ್ರರುಜ, ಪುಲಿನರೆಂಬ ವೀರರೊಡನೆ ಕ್ರಮವಾಗಿ ದ್ವಂದ್ವಯುದ್ಧಮಾಡುತ್ತ ಬಂದನು ಕೋಪಗೊಂಡ ಕಾಲರುದ್ರನಂತಿದ್ದ ಆ ಗರುಡನು ಅವರೊಬ್ಬೊಬ್ಬರನ್ನೂ ರೆಕ್ಕೆಯಿಂದಲೂ, ಕೊಕ್ಕಿನಿಂದಲೂ, ಕಾಲುಗುರುಗಳಿಂದಲೂ ಭೇದಿಸುತ್ತ ಬಂದನು. ಆದರಿಂದ ಗಾಯಪಟ್ಟ, ಆ ದೇವತೆಗಳು, ಮೈಯಿಂದ ರಕ್ತವನ್ನು ಸುರಿಸುತ್ತ ದೊಡ್ಡ ರಕ್ತಮೇಘಗಳಂತೆ ಕಾಣುತ್ತಿದ್ದರು. ಹೀಗೆ ಗರುಡನು ಅವರೆಲ್ಲರನ್ನೂ ಮೃತಪ್ರಾಯರನ್ನಾಗಿ

ಮಾಡಿ, ಅವರೆಲ್ಲರನ್ನೂ ದಾಟಿ, ಅಮೃತವಿದ್ದ ಸ್ಥಳಕ್ಕೆ ಬಂದನು. ಅಮೃತವನ್ನು ಎತ್ತಿಕೊಳ್ಳಬೇಕೆಂದು ಬಂದ ಗರುಡನಿಗೆ ಆ ಅಮೃತವಿದ್ದ ಸ್ಥಳದ ಸುತ್ತಲೂ ಜ್ವಲಿಸುವ ಬೆಂಕಿಯು ಕಾಣಿಸಿತು. ಆ ಅಗ್ನಿಜ್ವಾಲೆಯು ಸಮಸ್ತ ಭೂತಗಳಿಗೂ ಭಯಂಕರವಾಗಿ, ಆಕಾಶವನ್ನೇ ಆಹುತಿಯಾಗಿ ತೆಗೆದುಕೊಳ್ಳುವಂತೆ ಮೇಲಿಮೇಲೇರುವ ಪ್ರಬಲಜ್ವಾಲೆಗಳನ್ನು ಕೆದರುತ್ತಿದ್ದಿತು. ಇದನ್ನು ನೋಡಿ ಕಾಮರೂಪಿಯಾದ ಗರುಡನು, ಎಂಟುಸಾವಿರದ ನೂರು ಮುಖಗಳನ್ನು ಮಾಡಿಕೊಂಡು, ಅವೆಲ್ಲವುಗಳಿಂದ ಅನೇಕ ನದೀಜಲವನ್ನು ತುಂಬಿಕೊಂಡು ಬೇಗನೆ ಹಿಂತಿರುಗಿ ಬಂದು, ಆ ಬೆಂಕಿಯಮೇಲೆ ಕುಪ್ಪಳಿಸಿ, ಅದರ ಜ್ವಾಲೆಯನ್ನು ನಂದಿಸಿಬಿಟ್ಟನು. ಹೀಗೆ ಅಗ್ನಿಯನ್ನು ನಂದಿಸಿದಮೇಲೆ ತಿರುಗಿ ಆ ಅಮೃತವಿದ್ದ ಸ್ಥಳಕ್ಕೆ ಪ್ರವೇಶಿಸುವುದಕ್ಕೆ ತಕ್ಕಂತೆ ಅತಿಸೂಕ್ಷ್ಮವಾದ ಬೇರೊಂದು ರೂಪವನ್ನು ತಾಳಿದನು.

ಇದು ಮೂವತ್ತೆರಡನೆಯ ಅಧ್ಯಾಯವು.

(ಗರುಡನು ಅಮೃತದ ಸಮೀಪಕ್ಕೆ ಹೋದುದು. ಅಮೃತವನ್ನು ತರುವಾಗ ವಿಷ್ಣುವು ಪ್ರತ್ಯಕ್ಷನಾಗಿ, ಗರುಡನಿಗೆ ವರಗಳನ್ನು ಕೊಟ್ಟುದು. ಗರುಡನಿಗೆ ಸುಪರ್ಣನೆಂಬ ಹೆಸರು ದೊರೆತುದು.)

ಪಕ್ಷಿರಾಜನಾದ ಗರುಡನು, ಸುವರ್ಣಮಯವಾದ ಸಣ್ಣ ಪಕ್ಷಿಯ ಆಕಾರದಿಂದ ಥಳಥಳಿಸುತ್ತ, ವೇಗವುಳ್ಳ ಜಲಪ್ರವಾಹವು ಸಮುದ್ರದಲ್ಲಿ ಪ್ರವೇಶಿಸುವಂತೆ ಮುಂದೆ ಹೋದನು. ಆ ಅಮೃತವಿದ್ದ ಸ್ಥಳಕ್ಕೆ ಹೋಗುವಾಗ, ಅಲ್ಲಿ ಭಯಂಕರವಾಗಿ ಯಾವಾಗಲೂ ಗಿರ್ರನೆ ತಿರುಗುತ್ತಿರುವ ಉಕ್ಕಿನ ಯಂತ್ರವೊಂದನ್ನು ಕಂಡನು. ಅದು ಬಹಳ ತೀಕ್ಷ್ಣವಾದ ಅಲಗುಗಳುಳ್ಳುದಾಗಿ ಸೂರ್ಯನಂತೆ ಜ್ವಲಿಸುತ್ತ ಅಮೃತದ ಕಡೆಗೆ ಬಂದವರನ್ನು ಕೊಲ್ಲತಕ್ಕುದಾಗಿ ಅತಿ ಭಯಂಕರ ಸ್ವರೂಪದಿಂದಿದ್ದಿತು. ಅದು ಅಮೃತರಕ್ಷಣೆಗಾಗಿಯೇ ದೇವತೆಗಳಿಂದ ನಿರ್ಮಿಸಲ್ಪಟ್ಟುದು. ಗರುಡನು ತಿರುಗುತ್ತಿರುವ ಆ ಚಕ್ರದ ನಡುವೆ ಪ್ರವೇಶಿಸುವುದಕ್ಕಾಗಿ ಅವಕಾಶವನ್ನು ನಿರೀಕ್ಷಿ

ಸುತ್ತ ಅದನ್ನು ಸುತ್ತಿಸುತ್ತಿ ತಿರುಗುತಿದ್ದು, ಒಂದು ನಿಮಿಷಮಾತ್ರಕ್ಕೆ ತನ್ನ ದೇಹವನ್ನು ಅಣುಮಾತ್ರವಾಗಿ ಮಾಡಿಕೊಂಡು ಆ ಚಕ್ರದ ಅಡ್ಡಗಡ್ಡಿಗಳ (ಅರಗಳ) ನಡುವೆ ಪ್ರವೇಶಿಸಿಬಿಟ್ಟನು. ಆ ಚಕ್ರದ ಕೆಳಗೆ ಎರಡು ಘಟ ಸರ್ಪಗಳಿದ್ದುವು. ಅವುಗಳ ದೇಹವೋ ಬೆಂಕಿಯಂತೆ ಜ್ವಲಿಸುತ್ತಿರುವುವು! ನಾಲಗೆಗಳು ಮಿಂಚಿನಂತೆ ಥಳಥಳಿಸುವುವು! ಅವರ ಬಾಯಿ ಮತ್ತು ಕಣ್ಣುಗಳು ಉರಿಯನ್ನು ಕಕ್ಕುತಿದ್ದುವು. ಅವುಗಳ ಕಣ್ಣುಗಳಲ್ಲಿ ಕ್ರೂರ ವಿಷವಿದ್ದುದರಿಂದ ದೃಷ್ಟಿಯಿಂದಲೇ ಪ್ರಾಣಿಗಳನ್ನು ಕೊಲ್ಲುವುವು. ಮಹಾ ವೀರ್ಯದಿಂದಲೂ, ಭಯಂಕರರೂಪದಿಂದಲೂ ಕೂಡಿದ ಅಂತಹ ಸರ್ಪ ಗಳೆರಡೂ ಕೋಪಾವೇಶದಿಂದ ಬುಸುಗುಟ್ಟುತ್ತ, ಎವೆಮುಚ್ಚದೆ ಆ ಅಮೃತರಕ್ಷಣಾರ್ಥವಾಗಿ ಅಲ್ಲಿಯೇ ಕಾಯುತ್ತಿರುವುವು. ಆ ಸರ್ಪಗಳಲ್ಲಿ ಒಂದರ ದೃಷ್ಟಿಗೆ ಬಿದ್ದಮಾತ್ರದಿಂದಲೇ ಪ್ರಾಣಿಗಳು ಸುಟ್ಟು ಭಸ್ಮವಾಗು ವುವು. ಆ ಸರ್ಪಗಳ ಭಯಂಕರರೂಪವನ್ನು ನೋಡಿ ಗರುಡನಿಗೂ ಮನ ಸ್ಸಿನಲ್ಲಿ ಭೀತಿ ಹುಟ್ಟಿತು. ಆಗ ಅವನು ತನ್ನಲ್ಲಿ ತಾನು "ಮಹಾ ವೀರ್ಯವುಳ್ಳ ಈ ಸರ್ಪಗಳನ್ನು ಜಯಿಸುವ ಉಪಾಯವೇನು?" ಎಂದು ಯೋಚಿಸಿ, ತಾನು ಅವುಗಳ ಕಣ್ಣಿಗೆ ಬೀಳದಂತೆಯೇ ದೊಡ್ಡ ಧೂಳನ್ನೆ ಬ್ಬಿಸಿ, ಆ ಧೂಳು ಕವಿಯುವುದರಿಂದ ಅವುಗಳಿಗೆ ಕಣ್ಣುಕಾಣದಂತೆ ಮಾಡಿದನು. ಆಮೇಲೆ ನಾನಾಕಡೆಗಳಿಂದ ಅವುಗಳನ್ನು ಅಪ್ಪಳಿಸಿದನು. ತಾನು ಆಕಾಶದಲ್ಲಿಯೇ ಇದ್ದುಕೊಂಡು ಆ ಎರಡು ಸರ್ಪಗಳ ದೇಹದ ಮೇಲೆ ಹಾರಿಬಿದ್ದು, ಅವುಗಳನ್ನು ಎರಡು ತುಂಡುಗಳಾಗಿ ಕತ್ತರಿಸಿಬಿಟ್ಟ ನು. ಆಮೇಲೆ ಆ ಅಮೃತವಿದ್ದ ಸ್ಥಳಕ್ಕೆ ಹೋಗಿ ಅದನ್ನೆತ್ತಿಕೊಂಡು ಹಿಂತಿರುಗಿ ಬರುವಾಗ, ಆ ಚಕ್ರಯಂತ್ರವನ್ನೂ ಒಡೆದು ಪುಡಿಪುಡಿಯಾಗಿ ಮಾಡಿ ಅಲ್ಲಿಂದ ಹೊರಗೆ ಬಂದನು. ಹೀಗೆ ಗರುಡನು ಅಮೃತವನ್ನು ಕೈಗೆತ್ತಿಕೊಂಡರೂ, ಅದನ್ನು ಕುಡಿಯಲು ಆಸೆಪಡದೆ, ಮಹಾವೇಗದಿಂದ ಮೇಲೆ ಹಾರಿ, ತನ್ನ ದೇಹಕಾಂತಿಯಿಂದ ಸೂರ್ಯಪ್ರಭೆಯನ್ನೇ ಮರೆಸು ವಂತೆ ಹೊರಟು ಬರುತಿದ್ದನು. ಹೀಗೆ ಬರುವಾಗ ಆಕಾಶದಲ್ಲಿ ಮಹಾ ವಿಷ್ಣುವು ಅವನನ್ನು ಸಂಧಿಸಿದನು. ಅಂತಹ ಅಮೃತವು ಕೈಗೆ ಸಿಕ್ಕಿ ದ್ದರೂ ಅದನ್ನು ಕುಡಿಯುವುದಕ್ಕೆ ತಾನು ಆಸೆಪಡನೆ, ಆ ಗರುಡನು

ಆತುರದಿಂದ ಬರುವುದನ್ನು ನೋಡಿ ವಿಷ್ಣುವು ಸಂತೋಷಗೊಂಡು ಆ ಗರುಡನನ್ನು ನೋಡಿ "ವೈನತೇಯಾ! ನಿನ್ನ ಸಾಹಸಕ್ಕಾಗಿ ನಾನು ಮೆಚ್ಚಿದೆನು. ನಿನಗೆ ಬೇಕಾದ ವರವನ್ನು ಕೇಳು. ಕೊಡುವೆನು" ಎಂದನು. ಆಗ ಗರುಡನು "ನಿನ್ನ ಧ್ವಜದಲ್ಲಿ ನಾನು ಸದಾ ನೆಲೆಗೊಂಡಿರಬೇಕು. ಮತ್ತು ಈ ಅಮೃತಪಾನವಿಲ್ಲದೆಯೇ ನನಗೆ ಮುಪ್ಪು, ಸಾವು ಇವೆರಡೂ ಇಲ್ಲದಿರಬೇಕು" ಎಂದು ವರಗಳನ್ನು ಕೇಳಿದನು. ವಿಷ್ಣುವು "ಹಾಗೆಯೇ ಆಗಲೆಂದು" ಆ ವರಗಳನ್ನು ಕೊಟ್ಟನು. ಅನೇಲೆ ತಿರುಗಿ ಗರುಡನು "ಓ ದೇವಾ! ನನ್ನಿಂದಾಗಬೇಕಾದ ಕಾರ್ಯವೇನಿದ್ದರೂ ಹೇಳು. ನಾನು ನಡೆಸುವೆನು. ನಿನಗೆ ಇಷ್ಟವಾದುದನ್ನು ಕೇಳಬಹುದು" ಎಂದನು. ಅದಕ್ಕಾ ವಿಷ್ಣುವು "ಹಾಗಿದ್ದರೆ ನೀನು ನನಗೆ ವಾಹನವಾಗಿರು" ಎಂದು ಕೇಳಲು, ಗರುಡನು ಹಾಗೆಯೇ ಒಪ್ಪಿಕೊಂಡನು. ಹೀಗೆ ಗರುಡನು ತನಗೆ ವಾಹನವಾಗಿ ಕೆಳಗೂ, ಧ್ವಜರೂಪದಿಂದ ಮೇಲೆಯೂ ಇರುವಹಾಗೆ ಗರುಡನಿಗೆ ಎರಡು ಸ್ಥಾನಗಳನ್ನು ಕಲ್ಪಿಸಿಕೊಡಲು, ಗರುಡನು ಸಂತೋಷಿಸಿ ಒಡನೆಯೇ ಅಲ್ಲಿಂದ ಹಾರಿದನು. ಹೀಗೆ ಅವನು ಅಮೃತವನ್ನೆತ್ತಿಕೊಂಡು ವಾಯುವಿನೊಡನೆ ಸ್ಪರ್ಧಿಸುವಂತೆ ವೇಗದಿಂದ ಹೋಗುತ್ತಿರುವಲ್ಲಿ, ಇಂದ್ರನು ವಜ್ರಧಾರಿಯಾಗಿ ಬಂದು ಕೋಪದಿಂದ ಅವನನ್ನು ತಡೆದು, ಅವನನ್ನು ಪ್ರಹರಿಸಿದನು. ವಜ್ರಾಯುಧದಿಂದ ಪ್ರಹರಿಸಲ್ಪಟ್ಟರೂ ಆ ಗರುಡನು ಲಕ್ಷ್ಯವಿಲ್ಲದೆ ನಗುತ್ತ ಮೃದುವಾಕ್ಯದಿಂದ ಆ ಇಂದ್ರನನ್ನು ನೋಡಿ "ಓ ದೇವೇಂದ್ರಾ! ಈ ವಜ್ರವು ಯಾವ ಮಹಾತ್ಮನ ಮೈಯೆಲುಬಿನಿಂದ ಉಂಟಾಯಿತೋ ಆ ದಧೀಚಿಮಹರ್ಷಿಗೂ, ಈ ವಜ್ರಾಯುಧಕ್ಕೂ, ನಿನಗೂ ಗೌರವವನ್ನು ಕೊಡುವುದಕ್ಕಾಗಿ, ಇದೋ! ನನ್ನ ಮೈಗರಿಯೊಂದನ್ನು ಅದಕ್ಕಿದಿರಾಗಿ ಬಿಡುವೆನು. ಆ ಗರಿಯ ಮತ್ತೊಂದು ಕೊನೆಯನ್ನು ಕೂಡ ನೀನು ಕಾಣಲಾರೆ. ನಿನ್ನ ವಜ್ರಪ್ರಹಾರದಿಂದ ನನಗೆ ಲವಮಾತ್ರವೂ ಬಾಧೆಯುಂಟಾಗದೆಂದು ತಿಳಿ" ಎಂದು ಹೇಳಿ ಒಡನೆಯೇ ಅವನು ಮೈಯನ್ನೊದರಿ, ಆ ವಜ್ರಾಯುಧದ ಪೆಟ್ಟು ಬಿದ್ದ ಸ್ಥಳದಲ್ಲಿ ಒಂದು ಗರಿಯನ್ನು ಮಾತ್ರ ಸಡಿಲಿಸಿದನು. ಗರುಡನ ಮೈಯಿಂದ ಉದಿರಿದ ಅತ್ಯುತ್ತಮವಾದ ಆ ಗರಿಯ ಸೊಗಸನ್ನು ನೋಡಿ

ಸಮಸ್ತಭೂತಗಳೂ ಆಶ್ಚರ್ಯಪಟ್ಟುವು. ಹೀಗೆ ಸಂತೋಷಗೊಂಡ ಭೂತಗಳೆಲ್ಲವೂ ಇಂತಹ ಸುಂದರವಾದ ಗರಿಯುಳ್ಳ (ವರ್ಣವುಳ್ಳ) ಇವನಿಗೆ "ಸುಪರ್ಣ"ನೆಂಬ ಹೆಸರು ಪ್ರಸಿದ್ಧವಾಗಲಿ" ಎಂದುವು. ಈ ಆಶ್ಚರ್ಯ ವ್ಯಾಪಾರಗಳನ್ನೆಲ್ಲ ನೋಡಿದಮೇಲೆ ಇಂದ್ರನಿಗೆ ಆ ಪಕ್ಷಿಯು ಒಂದು ಮಹಾಭೂತವೆಂದು ತೋರಿತು. ಆಗ ಅವನು ಗರುಡನನ್ನು ನೋಡಿ "ಓ ಪಕ್ಷಿರಾಜಾ! ನಿನ್ನ ಬಲವು ಅಸಾಧಾರಣವಾದುದು! ಆ ಬಲದ ಪರಿಣಾಮವನ್ನು ತಿಳಿಯಬೇಕೆಂದು ನಾನು ಕೋರುವೆನು. ಮತ್ತು ನಿನ್ನೊಡನೆ ನನಗೆ ಶಾಶ್ವತವಾದ ಸ್ನೇಹವಿರಲೆಂದು ನಾನು ಅಪೇಕ್ಷಿಸುವೆನು" ಎಂದನು.

ಇದು ಮೂವತ್ತುಮೂರನೆಯ ಅಧ್ಯಾಯವು.

ಇಂದ್ರನಿಗೂ, ಗರುಡನಿಗೂ ಸಖ್ಯವಾದುದು. ಇಂದ್ರನು ಗರುಡನಿಗೆ ವರಗಳನ್ನು ಕೊಟ್ಟುದು. ವಿನತೆಯ ದಾಸ್ಯ ವಿಮೋಚನೆ. ಸರ್ಪಗಳಿಗೆ ಎರಡು ನಾಲಗೆಗಳುಂಟಾದುದು.

ದೇವೇಂದ್ರನು ಹೀಗೆಂದು ಹೇಳಲು, ಗರುಡನು ಅವನಿಗೆ ಪ್ರತ್ಯುತ್ತರವಾಗಿ "ಓ ದೇವರಾಜಾ! ನಿನ್ನ ಕೋರಿಕೆಯಂತೆ ನನ್ನೊಡನೆ ನಿನಗೆ ಸಖ್ಯವಿರಲಿ! ನನ್ನ ಬಲವೆಷ್ಟೆಂಬುದನ್ನು ನೀನು ತಿಳಿಯಬೇಕೆಂದು ಕೇಳಿದೆಯಲ್ಲವೆ? ನನ್ನ ಬಲವೇನೋ ಮಹತ್ತಾದುದು. ಎಂತವರಿಗೂ ಸಹಿಸಲಸಾಧ್ಯವಾದುದು. ಆದರೆ ತಮ್ಮ ಬಲವನ್ನು ತಾವೇ ಹೇಳಿಕೊಳ್ಳುವುದು ಸಜ್ಜನರ ನಡತೆಯಲ್ಲ. ಅದರಲ್ಲಿಯೂ ಏನೂ ಕಾರಣವಿಲ್ಲದೆ ತಮ್ಮನ್ನು ತಾವು ಹೊಗಳಿಕೊಳ್ಳುವವರು ನಿಂದೆಗೆ ಪಾತ್ರರಾಗುವರು. ಆದರೆ ಮತ್ತೊಬ್ಬರು, ಕೇಳಿದಾಗ ಅವುಗಳನ್ನು ತಿಳಿಸಿದರೂ, ಅದು ಅಷ್ಟೇನೂ ದೋಷವೆನಿಸುವುದಿಲ್ಲ. ತಾನಾಗಿಯೇ ಆತ್ಮಗುಣಗಳನ್ನು ಮಾತ್ರ ಹೇಳಿಕೊಳ್ಳಬಾರದು. ಈಗ ನೀನು ನನಗೆ ಆಪ್ತನಾದುದರಿಂದಲೂ, ನೀನಾಗಿ ಕೇಳುವುದರಿಂದಲೂ ಹೇಳುವೆನು. ನಿಷ್ಕಾರಣವಾಗಿ ಆತ್ಮಸ್ತುತಿಯನ್ನು ಮಾಡಿಕೊಳ್ಳಲೇಬಾ

ರದು. ಓ ದೇವೇಂದ್ರಾ! ಪರ್ವತಾರಣ್ಯಗಳಿಂದಲೂ, ಸಮುದ್ರಜಲದಿಂದಲೂ ಕೂಡಿದ ಈ ಭೂಮಿಯನ್ನೂ, ಅದರೊಡನೆ ನಿನ್ನನ್ನೂ ಸೇರಿಸಿ, ನಾನು ನನ್ನ ಒಂದೇ ರೆಕ್ಕೆಯಿಂದ ಎತ್ತಿಕೊಂಡು ಹೋಗಬಲ್ಲೆನು. ಅಥವಾ ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವನ್ನೆಲ್ಲ ಒಂದೇ ಉಂಡೆಯಾಗಿ ಮಾಡಿ ನಿರಾಯಾಸವಾಗಿ ನಾನು ಸಾಗಿಸಬಲ್ಲೆನು. ಇದೇ ನನ್ನ ಮಹತ್ತಾದ ಬಲವೆಂದು ತಿಳಿ" ಎಂದನು.

ಇದನ್ನು ಕೇಳಿ ದೇವೇಂದ್ರನು ವೀರನಾದ ಆ ಗರುತ್ಮಂತನನ್ನು ನೋಡಿ, "ಓ ಮಹಾತ್ಮಾ! ನಿನ್ನಲ್ಲಿ ಇವೆಲ್ಲವೂ ಸಂಭಾವ್ಯವೆಂದೇ ಎಣಿಸುವೆನು. ಇನ್ನು ನಿನಗೆ ನನ್ನೊಡನೆ ಉತ್ತಮವಾದ ಸ್ನೇಹವಿರಲಿ! ಈಗ ನಿನ್ನ ಸ್ವಂತಕ್ಕೆ ಈ ಅಮೃತದಿಂದೇನೂ ಪ್ರಯೋಜನವಿಲ್ಲದಿದ್ದರೆ, ಅದನ್ನು ನಮಗೇ ಹಿಂತಿರುಗಿ ಕೊಟ್ಟುಬಿಡು. ಏಕೆಂದರೆ, ನಿನ್ನ ಪ್ರಯೋಜನಕ್ಕಲ್ಲದೆ ನೀನು ಬೇರೆಯವರಿಗೆ ಇದನ್ನು ಕೊಡುವುದಾದರೆ, ಆಮೇಲೆ ಅವರೇ ನಿನ್ನನ್ನು ಪೀಡಿಸುವರು" ಎಂದನು. ಅದಕ್ಕಾ ಗರುಡನು "ದೇವರಾಜಾ! ಹಾಗಲ್ಲ. ನಾನೊಂದು ಅವಶ್ಯಕಾರಣಕ್ಕಾಗಿ ಈ ಅಮೃತವನ್ನು ತೆಗೆದುಕೊಂಡುಹೋಗುತ್ತಿರುವೆನು. ಆದರೆ, ಇದನ್ನು ನಾನು ಬೇರೊಬ್ಬರು ಕುಡಿಯುವುದಕ್ಕೆ ಮಾತ್ರ ಅವಕಾಶಕೊಡಲಾರೆನು. ಈಗಲೂ ಅದಕ್ಕೆ ನಾನೊಂದುಪಾಯವನ್ನು ಹೇಳಿಕೊಡುವೆನು. ಅದರಂತೆ ನಡೆಸು. ನಾನು ಇದನ್ನು ಎತ್ತಿಕೊಂಡುಹೋಗಿ ಎಲ್ಲಿಡುವೆನೋ ಅಲ್ಲಿಗೆ ನೀನೂ ನನ್ನನ್ನು ಹಿಂಬಾಲಿಸಿ ಬಂದು, ನಾನು ಈ ಅಮೃತಕಲಶವನ್ನು ಕೆಳಕ್ಕೆ ಇಟ್ಟಕೂಡಲೆ, ನೀನು ಅದನ್ನು ಎತ್ತಿಕೊಂಡು ಹೊರಟುಹೋಗು" ಎಂದನು. ಅದಕ್ಕಾ ಇಂದ್ರನು "ಓ ಪಕ್ಷಿರಾಜಾ! ನಿನ್ನ ಮಾತಿಗೆ ನಾನು ಬಹಳ ಸಂತೋಷಗೊಂಡೆನು. ನಿನಗೆ ಬೇಕಾದ ವರವನ್ನು ಕೇಳು. ಕೊಡುವೆನು" ಎಂದನು. ಆಗ ಗರುಡನು ಕದ್ರುವಿನ ಮಕ್ಕಳಾದ ನಾಗರು ಮಾಡಿದ ಮೋಸವನ್ನೂ, ಅದರಿಂದ ತನ್ನ ತಾಯಿಗೆ ಉಂಟಾದ ದಾಸ್ಯವನ್ನೂ ನೆನೆಸಿಕೊಂಡು "ದೇವೇಂದ್ರಾ! ನಾನು ಸರ್ವಸಮರ್ಥನಾಗಿದ್ದರೂ ಈಗ ನಿನ್ನಲ್ಲಿ ಒಂದು ವಿಷಯವನ್ನು ಕೇಳಿಕೊಳ್ಳುವೆನು. ನನ್ನ ವೈರಿಗಳಾದ ಸರ್ಪಗಳೇ

ನನಗೆ ಆಹಾರವಾಗಬೇಕು'' ಎಂದನು. ಅದಕ್ಕಾ ಇಂದ್ರನು ಹಾಗೆಯೇ ಆಗಲೆಂದು ಗರುಡನಿಗೆ ಹೇಳಿ, ನೆಟ್ಟಗೆ ಮಹಾಯೋಗೇಶ್ವರನಾದ ವಿಷ್ಣುವಿನಲ್ಲಿ ಹೋಗಿ, ಗರುಡನು ಅಮೃತವನ್ನು ತರುವುದಕ್ಕಾಗಿ ತನಗೆ ಹೇಳಿದ ಉಪಾಯವನ್ನು ವಿಷ್ಣುವಿನಲ್ಲಿ ತಿಳಿಸಿದನು. ವಿಷ್ಣುವೂ ಅದಕ್ಕೆ ಸಮ್ಮತಿಸಲು, ಅಲ್ಲಿಂದ ಹಿಂತಿರುಗಿ ಬಂದು ದೇವೇಂದ್ರನು "ಓ ವೈನತೇಯಾ! ನೀನು ಈ ಅಮೃತವನ್ನು ಎತ್ತಿಕೊಂಡುಹೋಗು. ನೀನು ಅದನ್ನು ಇಟ್ಟ ಸ್ಥಳದಿಂದ ಒಡನೆಯೇ ನಾನು ಅಪಹರಿಸಿಕೊಂಡುಬಂದುಬಿಡುವೆನು'' ಎಂದನು.

ಆಮೇಲೆ ಗರುಡನು ಅತಿವೇಗದಿಂದ ತಾಯಿಯ ಬಳಿಗೆ ಬಂದು "ಅಮ್ಮಾ! ದೇವಲೋಕದಿಂದ ಅಮೃತವನ್ನು ತಂದಿರುವೆನು. ಮುಂದಿನ ಆಜ್ಞೆಯೇನು?'' ಎಂದನು. ಅದಕ್ಕಾ ವಿನತೆಯು "ವತ್ಸಾ! ನಿನ್ನ ಸಾಹಸಕ್ಕಾಗಿ ನಾನು ಮೆಚ್ಚಿದೆನು. ನಿನಗೆ ಮುಪ್ಪು, ಸಾವು ಎರಡೂ ಇಲ್ಲದಿರಲಿ. ನೀನು ಯಾವಾಗಲೂ ದೇವತೆಗಳಿಗೆ ಹಿತಕರನಾಗಿರು'' ಎಂದಳು. ಆಮೇಲೆ ಗರುಡನು ಸಂತೋಷದಿಂದ ಸರ್ಪಗಳಿದ್ದ ಸ್ಥಳಕ್ಕೆ ಬಂದು "ಓ ಸರ್ಪಗಳಿರಾ! ನೀವು ಕೋರಿದಂತೆ ಅಮೃತವನ್ನು ತಂದಿರುವೆನು. ಇದನ್ನು ದರ್ಭೆಗಳು ಬೆಳೆದಿರತಕ್ಕ ಶುದ್ಧಸ್ಥಳದಲ್ಲಿಡುವೆನು. ನೀವು ಹೋಗಿ ಬೇಗನೆ ಸ್ನಾನವಮಾಡಿ ಮಂಗಳಕಾರ್ಯಗಳನ್ನು ಮುಗಿಸಿಕೊಂಡು ಆಮೇಲೆ ಇದನ್ನು ಭುಜಿಸಿರಿ. ನಿಮ್ಮ ಇಷ್ಟದಂತೆ ನಾನು ಅಮೃತವನ್ನು ತಂದುದಾಯಿತು. ಈ ನಿಮಿಷವು ಮೊದಲು ನನ್ನ ತಾಯಿಗೆ ದಾಸ್ಯವಿಮೋಚನೆಯಾಗಬೇಕು'' ಎಂದನು. ಆಗ ಸರ್ಪಗಳು 'ಸರಿ! ಅದಕ್ಕೆ ತಡೆಯೇನಿದೆ? ನಿನ್ನ ತಾಯಿಯು ಇನ್ನುಮೇಲೆ ದಾಸಿಯಲ್ಲ' ಎಂದು ಹೇಳಿ ಸ್ನಾನಕ್ಕಾಗಿ ಹೊರಟುಹೋದುವು. ಈ ಅವಕಾಶವನ್ನೇ ಕಾಯುತ್ತಿದ್ದ ದೇವೇಂದ್ರನು ಆ ಅಮೃತವನ್ನೆತ್ತಿಕೊಂಡು ಸ್ವರ್ಗಕ್ಕೆ ಹೊರಟುಹೋದನು. ಆಮೇಲೆ ಸರ್ಪಗಳೆಲ್ಲ ತಮ್ಮ ಸ್ನಾನಜಪಾದಿಗಳನ್ನು ತೀರಿಸಿಕೊಂಡು, ಮಂಗಳಕಾರ್ಯಗಳನ್ನೆಲ್ಲ ಮುಗಿಸಿ, ತಮಗೆ ಅಮೃತವು ಸಿಕ್ಕುವುದೆಂಬ ಉತ್ಸಾಹದಿಂದ "ನಾನು ಮುಂದು! ತಾನು ಮುಂದು'' ಎಂದು ಮೇಲೆಬಿದ್ದು ಗರು

ಡನು ಅಮೃತವನ್ನಿಟ್ಟ ಸ್ಥಳಕ್ಕೆ ಬಂದುವು. ಆದರೇನು? ಅಮೃತವು ಕಾಣಿಸಲಿಲ್ಲ. ತಾವು ವಿನತೆಗೆ ಮಾಡಿದ ಮೋಸಕ್ಕೆ ತಕ್ಕ ಪ್ರತೀಕಾರವು ತಮಗೂ ಆಯಿತೆಂದು ಮನಸ್ಸಿನಲ್ಲಿಯೇ ಕೊರಗುತ್ತ, ಆ ಅಮೃತವನ್ನಿಟ್ಟ ಸ್ಥಳದಲ್ಲಿ ಸುತ್ತಿಸುತ್ತಿ ಹುಡುಕಿದುವು. ಅಲ್ಲಿ ಅಮೃತವೇನಾದರೂ ಚೆಲ್ಲಿರಬಹುದೆಂಬ ಆಸೆಯಿಂದ ಅಮೃತವನ್ನಿಟ್ಟ ಸ್ಥಳದಲ್ಲಿದ್ದ ದರ್ಭೆಗಳನ್ನೆಲ್ಲ ನಕ್ಕಿನಕ್ಕಿ ನೋಡಲಾರಂಭಿಸಿದುವು. ಹೀಗೆ ಆತುರದಿಂದ ನಕ್ಕಿದ ಆ ಸರ್ಪಗಳಿಗೆಲ್ಲ ತೀಕ್ಷ್ಣವಾದ ದರ್ಭೆಗಳಿಂದ ನಾಲಗೆಗಳು ಎರಡಾಗಿ ಸೀಳಿಹೋದುವು. ಎಲೈ ಮಹರ್ಷಿಗಳೇ! ಅದು ಮೊದಲು ಅಮೃತಸ್ಪರ್ಶದಿಂದ ದರ್ಭೆಗಳಿಗೆಲ್ಲ ವಿಶೇಷ ಪವಿತ್ರತೆಯುಂಟಾಯಿತು. ಸರ್ಪಗಳಿಗೂ ಅದು ಮೊದಲು ಎರಡು ನಾಲಗೆಗಳಾದುವು.

ಆಮೇಲೆ ಸರ್ಪಗಳೆಲ್ಲವೂ ತಾವು ಮೋಸಹೋದುದಕ್ಕಾಗಿ ವ್ಯಸನಪಡುತ್ತ, ಗರುಡನ ಶಕ್ತಿಗೆ ಹೆದರಿ, ತಾವು ಕೊಟ್ಟ ಮಾತಿಗೆ ತಪ್ಪಲಾರದೆ ವಿನತೆಯನ್ನು ದಾಸ್ಯದಿಂದ ಬಿಡಿಸಿ ಕಳುಹಿಸಿಬಿಟ್ಟುವು. ಓ ಮಹರ್ಷೀ! ಹೀಗೆ ಗರುಡನಿಂದ ತರಲ್ಪಟ್ಟ ಅಮೃತವು ತಿರುಗಿ ದೇವೇಂದ್ರನಿಂದ ಅಪಹರಿಸಲ್ಪಟ್ಟಿತು. ಸರ್ಪಗಳಿಗೂ ದ್ವಿಜಿಹ್ವೆಯುಂಟಾಯಿತು. ಆಮೇಲೆ ಗರುಡನು ತನ್ನ ತಾಯಿಯೊಡನೆ ಸಂತೋಷದಿಂದ ಹೊರಟು, ಅರಣ್ಯದಲ್ಲಿ ಯಥೇಚ್ಛವಾಗಿ ಸಂಚರಿಸುತ್ತ, ಸಮಸ್ತ ಪಕ್ಷಿಜಾತಿಗಳಿಂದಲೂ ಗೌರವಿಸಲ್ಪಟ್ಟು ಸರ್ಪಭಕ್ಷಕನಾಗಿ ಸಂತೋಷದಿಂದಿರುತಿದ್ದನು.

ಓ ಮಹರ್ಷಿಗಳಿರಾ! ಗರುಡನು ಅಮೃತವನ್ನು ತಂದ ಈ ಕಥೆಯನ್ನು ಯಾವ ಮನುಷ್ಯನು ಬ್ರಾಹ್ಮಣಸಭೆಯಲ್ಲಿ ಪಠಿಸುವನೋ, ಮತ್ತು ಯಾವನು ಅವರಿಂದ ಕೇಳುವನೋ, ಅವನು ಸಮಸ್ತ ಪುಣ್ಯಗಳಿಗೂ ಭಾಗಿಯಾಗಿ, ದೇಹಾವಸಾನದಲ್ಲಿ ಇಂದ್ರಲೋಕವನ್ನು ಹೊಂದುವನು.

ಇದು ಮೂವತ್ತುನಾಲ್ಕನೆಯ ಅಧ್ಯಾಯವು.



## ಬೇರೆಬೇರೆ ಪ್ರಧಾನ ಸರ್ಪಗಳ ನಾಮನಿರ್ದೇಶಗಳು.

ಆಗ ಶೌನಕನು ಸೂತಪೌರಾಣಿಕನನ್ನು ಕುರಿತು “ ಓ ಮಹಾತ್ಮಾ! ಸರ್ಪಗಳನ್ನು ಅವುಗಳ ತಾಯಿಯಾದ ಕದ್ರುವೂ, ವಿನತೆಯನ್ನು ಅವಳ ಮಗನಾದ ಅರುಣನೂ ಶಪಿಸಿದುದಕ್ಕೆ ಕಾರಣವನ್ನು ಹೇಳಿದೆ. ಹಾಗೆಯೇ ಕದ್ರು ವಿನತೆಯರಿಗೆ ಅವರ ಪತಿಯು ವರಗಳನ್ನು ಕೊಟ್ಟ ವೃತ್ತಾಂತವನ್ನೂ, ವಿನತಾಪುತ್ರರಾದ ಎರಡು ಪಕ್ಷಿಗಳ (ಅರುಣ ಗರುಡರ) ಹೆಸರನ್ನೂ ನಿನ್ನಿಂದ ನಾವು ಕೇಳಿದಹಾಗಾಯಿತು. ಸರ್ಪಗಳ ಹೆಸರನ್ನು ಮಾತ್ರ ನೀನು ಹೇಳಲಿಲ್ಲ. ಆ ನಾಗರಲ್ಲಿ ಪ್ರಧಾನರಾದ ಕೆಲವರ ಹೆಸರನ್ನಾದರೂ ನಮಗೆ ತಿಳಿಸಬೇಕು ” ಎಂದನು. ಅದಕ್ಕಾ ಸೂತನು “ ಎಲೈ ತಪೋಧನರೇ ಕೇಳಿರಿ? ಸರ್ಪಗಳ ಹೆಸರು ಅನಂತವಾಗಿರುವುದರಿಂದ, ಎಲ್ಲರ ಹೆಸರನ್ನೂ ನಾನು ಹೇಳಲಾರೆನು. ಮುಖ್ಯವಾದ ಕೆಲವನ್ನು ಮಾತ್ರ ತಿಳಿಸುವೆನು ಕೇಳಿರಿ. ಸರ್ಪಗಳಲ್ಲಿ ಮೊದಲು ಹುಟ್ಟಿದವನು ಶೇಷನು. ಆಮೇಲೆ ವಾಸುಕಿ ಹುಟ್ಟಿದನು. ಅಲ್ಲಿಂದ ಕ್ರಮವಾಗಿ ಐರಾವತನು, ತಕ್ಷಕನು, ಕರ್ಕೋಟಕನು, ಧನಂಜಯನು, ಕಾಳಿಯನು, ಮಣಿನಾಗನು, ಆಪೂರಣನು, ಪಿಂಜರಕನು, ಏಲಾಪತ್ರನು, ವಾಮನನು, ನೀಲನು, ಅನೀಲನು, ಕಲ್ಮಾಷನು, ಶಬಲನು, ಆರ್ಯನು, ಉಗ್ರಕನು, ಕಲಶಪೋತಕನು, ಸುಮನಸ್ಸು, ದಧಿಮುಖ ವಿಮಲಪಿಂಡಕರು, ಆಪ್ತ ಕೋಟರ ಶಂಖವಾಲಿಶಿಖರು, ನಿಷ್ಠಾನಕನು, ಹೇಮಗುಹನು, ನಹುಷ ಪಿಂಗಳ ಬಾಹ್ಯಕರ್ಣ ಹಸ್ತಿಪದರೆಂಬವರು, ಮುದ್ಗರಪಿಂಡಕನು, ಕಂಬಲಾಶ್ವತರರು, ಕಾಳೀಯಕನು, ವೃತ್ತಸಂವರ್ತಕರೆಂಬವರಿಬ್ಬರು, ಪದ್ಮರೆಂಬವರಿಬ್ಬರು, ಶಂಕುಮುಖ ಕೂಶ್ಮಾಂಡಕರು, ಕ್ಷೇಮಕ ಪಿಂಡಕರು, ಕರವೀರ, ಪುಷ್ಪದಂಷ್ಟ್ರ, ಬಿಲ್ವಕ, ಬಿಲ್ವಪಾಂಡುರರು, ಮೂಷಕಾದನು, ಶಂಖಶಿರಸ್ಸು, ಪೂರ್ಣಭದ್ರ ಹರಿದ್ರಕರು, ಅಪರಾಜಿತ, ಜ್ಯೋತಿಕ ಶ್ರೀವಹರು, ಕೌರವ್ಯನು, ಧೃತರಾಷ್ಟ್ರನು, ಶಂಖಪಿಂಡನು, ವಿರಜಸ್ಸು, ಸುಬಾಹು, ಶಾಲಿಪಿಂಡನು, ಹಸ್ತಿಪಿಂಡನು, ಪಿಂಡರಕನು, ಸುಮುಖನು, ಕೌಣಪಾಶನು, ಕುಠರ ಕುಂಜರ ಪ್ರಭಾಕರರು, ಕುಮುದ ಕುಮುದಾಕ್ಷರು, ತಿತ್ತಿರಿ,

ಹಲಕನು, ಕರ್ದಮನೆಂಬ ಮಹಾನಾಗನು, ಬಹುಮೂಲಕನು, ಕರ್ಕರಾ ಕರ್ಕರರು, ಕುಂಡೋದರ ಮಹೋದರರು, ಇವರೆಲ್ಲರೂ ನಾಗರಲ್ಲಿ ಪ್ರಧಾನ ರಾದವರು. ಇನ್ನೂ ಅನೇಕ ನಾಗರಿರುವುದರಿಂದ ಅವರ ಹೆಸರನ್ನೆಲ್ಲ ಇಲ್ಲಿ ನಾನು ಹೇಳಲಿಲ್ಲ. ಈ ನಾಗರ ಮಕ್ಕಳು, ಮೊಮ್ಮಕ್ಕಳು, ಮರಿ ಮಕ್ಕಳು ಮುಂತಾಗಿ ಮುಂದಿನ ಸಂತಾನವೆಲ್ಲ ಎಣಿಕೆಯಿಲ್ಲದಷ್ಟಿವೆ. ಅವು ಸಹಸ್ರ, ಲಕ್ಷ, ಅರ್ಬುದ, ನ್ಯರ್ಬುದಾದಿ ಸಂಖ್ಯೆಗಳಿಂದ ಎಣಿಸಲ್ಪಟ್ಟಿವೆ. ಅವನ್ನೆಲ್ಲ ಹೆಸರು ಹಿಡಿದು ಹೇಳುವುದು ಸಾಧ್ಯವಿಲ್ಲ'' ಎಂದನು.

ಇದು ಮೂವತ್ತೈದನೆಯ ಅಧ್ಯಾಯವು.

---

{ ಆದಿಶೇಷನಿಗೆ ಬ್ರಹ್ಮನು ವರಗಳನ್ನು ಕೊಟ್ಟುದು ಬ್ರಹ್ಮನು ಭೂಭಾರವನ್ನು ಧರಿಸಲು ಅವನಿಗೆ ಆಜ್ಞೆಯನ್ನು ಕೊಟ್ಟುದು. }

ಆಮೇಲೆ ಶೌನಕನು "ಓ ಸೂತಪುತ್ರ! ಮಹಾವೀರ್ಯವುಳ್ಳ ಸರ್ಪಗಳ ಹೆಸರನ್ನೆಲ್ಲ ಹೇಳಿದೆಯಷ್ಟೆ! ತಾಯಿಯಾದ ಕದ್ರುವಿನ ಘೋರ ಶಾಪವನ್ನು ಕೇಳಿದಮೇಲೆ, ಆ ಸರ್ಪಗಳೇನು ಹೇಳಿದುವು? ಆ ವೃತ್ತಾಂತವನ್ನು ತಿಳಿಸಬೇಕು'' ಎಂದನು. ಅದಕ್ಕಾ ಸೂತನು "ಮಹರ್ಷಿಗಳೇ ಕೇಳಿರಿ. ಮಾತೃಶಾಪವನ್ನು ಕೇಳಿದೊಡನೆ ಆ ಸರ್ಪಗಳಲ್ಲಿ ಪ್ರಮುಖನೂ, ಮಹಾತ್ಮನೂ, ಯಶಸ್ವಿಯೂ ಆದ ಆದಿಶೇಷನು, ತನ್ನ ತಾಯಿಯಾದ ಕದ್ರುವನ್ನು ಬಿಟ್ಟು, ವನಕ್ಕೆ ಹೋಗಿ ವಿರಕ್ತಿಯಿಂದ ಕೇವಲ ವಾಯುಭಕ್ಷಕನಾಗಿ, ದೊಡ್ಡ ನಿಯಮವನ್ನು ಹಿಡಿದು ಉಗ್ರತಪಸ್ಸನ್ನು ಆರಂಭಿಸಿದನು. ಅಲ್ಲದೆ, ಅವನು ಗಂಧಮಾದನ ಪರ್ವತ, ಬದರಿಕಾಶ್ರಮ, ಗೋಕರ್ಣ, ಪುಷ್ಕರಾರಣ್ಯ, ಹಿಮವಂತದ ತಪ್ಪಲು, ಈ ಮೊದಲಾದ ಪವಿತ್ರಸ್ಥಳಗಳಿಗೂ, ಅಲ್ಲಲ್ಲಿರುವ ಪುಣ್ಯಕ್ಷೇತ್ರ ತೀರ್ಥಗಳಿಗೂ ಏಕಾಕಿಯಾಗಿ ಸುತ್ತುತ್ತ, ಬಹಳ ನಿಯಮದಿಂದ ಇಂದ್ರಿಯವನ್ನಡಗಿಸಿ, ತಪೋನಿರತನಾಗಿದ್ದನು. ಹೀಗೆ ಆದಿಶೇಷನು ಮುನಿಯಾಗಿ, ಜಟಾವಲ್ಕಲಗಳನ್ನು ಧರಿಸಿ, ಉಗ್ರತಪಸ್ಸಿನಲ್ಲಿ ದೇಹವನ್ನು ದಂಡಿಸಿದುದರಿಂದ, ಅವನ

ದೇಹವೆಲ್ಲವೂ ಕೃಶವಾಗಿ, ಅವನ ಮೈಯೆಲುಬು, ಮಾಂಸ, ತೊಗಲು, ಇವೆಲ್ಲ ಒಣಗಿ ನಿಸ್ಸಾರವಾದುವು. ಈ ಸ್ಥಿತಿಯನ್ನು ನೋಡಿ ಪಿತಾಮಹನಾದ ಬ್ರಹ್ಮನು ಅವನಲ್ಲಿಗೆ ಬಂದು “ ಆದಿಶೇಷಾ! ಇದೇನು ನೀನು ಮಾಡುವುದು? ಪ್ರಜೆಗಳ ಕ್ಷೇಮವನ್ನು ನೀನು ಯೋಚಿಸಬೇಡವೆ? ನೀನು ಈ ನಿನ್ನ ತೀವ್ರತಪಸ್ಸಿನಿಂದ ಪ್ರಾಣಿಗಳನ್ನೆಲ್ಲ ದಹಿಸುತ್ತಿರುವೆಯಲ್ಲಾ! ನಿನ್ನ ಉದ್ದೇಶವೇನೋ ಅದನ್ನಾದರೂ ನನಗೆ ತಿಳಿಸು! ನಾನು ಈಡೇರಿಸಿಕೊಡುವೆನು” ಎಂದನು.

ಅದಕ್ಕಾ ಶೇಷನು “ಪಿತಾಮಹಾ? ನನ್ನ ಸಹೋದರರೆಲ್ಲರೂ ಕೇವಲ ಮೂಢಬುದ್ಧಿಯುಳ್ಳವರು. ಅವರ ಸಹವಾಸದಲ್ಲಿರುವುದು ನನಗೆ ಸರ್ವಥಾ ಸಹಿಸಲಿಲ್ಲ. ಆದುದರಿಂದ ನಾನು ಏಕಾಕಿಯಾಗಿ ಹೊರಟುಬಂದೆನು. ಇದಕ್ಕೆ ನೀನು ಅಡ್ಡಿಮಾಡದೆ ಅನುಮತಿಸಬೇಕು. ಆ ನನ್ನ ಸಹೋದರರು ಯಾವಾಗಲೂ ಒಬ್ಬರನ್ನೊಬ್ಬರು ಶತ್ರುಗಳಂತೆ ಭಾವಿಸಿ, ಅನ್ಯೋನ್ಯವಾಗಿ ಅಸೂಯೆಯಿಂದ ಕುದಿಯುತ್ತಿರುವರು. ಅಂತವರನ್ನು ಕಣ್ಣಿಂದಲೂ ನೋಡಬಾರದೆಂದೇ ನಾನು ಇತ್ತಲಾಗಿ ಹೊರಟುಬಂದೆನು. ಅಲ್ಲದೆ ನಮ್ಮ ಮಲತಾಯಿಯಾದ ವಿನತೆಯನ್ನೂ, ಅವಳ ಮಕ್ಕಳನ್ನೂ ಕಂಡರೆ ಅವರಿಗಾಗದು. ಅವರ ಮೇಲ್ಮೆಯನ್ನು ನಮ್ಮವರು ಸಹಿಸಲಾರರು. ವಿನತಾಪುತ್ರನಾದ ಗರುಡನು ನಮಗೆ ಒಡಹುಟ್ಟಿದವನಾದರೂ, ಅವನಲ್ಲಿ ಯಾವಾಗಲೂ ಅವರು ದ್ವೇಷವನ್ನೇ ಕಾರುತ್ತಿರುವರು. ನಮ್ಮ ತಂದೆಯಾದ ಕಶ್ಯಪನು ಆ ಗರುಡನಿಗೆ ಅನೇಕ ವರಗಳನ್ನು ಕೊಟ್ಟಿರುವುದರಿಂದ, ನಮಗಿಂತಲೂ ಅವನು ಮಹಾಬಲಾಢ್ಯನೇ! ಇಂತವನಲ್ಲಿ ದ್ವೇಷವನ್ನು ಬೆಳೆಸಿಕೊಂಡ ಆ ನನ್ನ ಸಹೋದರರ ಸಂಬಂಧವೇ ನನಗೆ ಬೇಡವೆಂದು ನಾನು ಹೊರಟುಬಂದೆನು. ಇಲ್ಲಿ ನಾನು ತಪಸ್ಸುಮಾಡಿ, ಮತ್ತೊಂದು ಜನ್ಮದಲ್ಲಿಯಾದರೂ ಅವರೊಡನೆ ನನಗೆ ಸಂಬಂಧವಿಲ್ಲದಿರಲೆಂದು ಇಲ್ಲಿ ದೇಹತ್ಯಾಗಮಾಡಲೆಳಸಿರುವೆನು” ಎಂದನು. ಅದಕ್ಕಾ ಬ್ರಹ್ಮನು “ನಿನ್ನ ಸಹೋದರರ ನಡತೆಗಳನ್ನೂ, ತಾಯಿಯಲ್ಲಿ ತಪ್ಪಿನಡೆದ ಅವರಿಗೆ ಮುಂದೆ ಮಹಾಭಯವು ಪ್ರಾಪ್ತವಾಗಿರುವುದನ್ನೂ ನಾನು ಬಲ್ಲೆನು. ಆದರೇನು?

ಇದಕ್ಕೆ ಪರಿಹಾರವೂ ಮೊದಲೇ ನಿಶ್ಚಿತವಾಗಿದೆ. ನಿನ್ನ ಸಹೋದರರ ವಿಷಯವಾಗಿ ನೀನು ವ್ಯಸನಪಡಬೇಡ. ನಿನಗೆ ಬೇಕಾದ ವರಗಳನ್ನು ಕೇಳು. ಕೊಡುವೆನು. ಈಗ ನಾನು ನಿನ್ನಲ್ಲಿ ವಿಶೇಷ ಪ್ರೀತಿಗೊಂಡಿರುವೆನು. ಏಕೆಂದರೆ, ನಿನ್ನ ಸಹೋದರರಂತಿಲ್ಲದೆ, ನಿನ್ನ ಬುದ್ಧಿಯು ಯಾವಾಗಲೂ ಧರ್ಮವನ್ನೇ ಅನುಸರಿಸುತ್ತಿರುವುದು. ಈ ವಿಧವಾದ ಬುದ್ಧಿಯೇ ನಿನಗೆ ಎಂದೆಂದಿಗೂ ಸ್ಥಿರವಾಗಿರಲಿ" ಎಂದನು. ಆಗ ಶೇಷನು "ದೇವಾ! ನನಗೆ ಬೇಕಾದ ವರವೇ ಇದು! ನನ್ನ ಬುದ್ಧಿಯು ಯಾವಾಗಲೂ ಧರ್ಮದಲ್ಲಿಯೂ, ಶಾಂತಿಯಲ್ಲಿಯೂ, ತಪಸ್ಸಿನಲ್ಲಿಯೂ ಉತ್ಸಾಹಗೊಂಡಿರುವಂತೆ ನೀನು ಅನುಗ್ರಹಿಸು" ಎಂದನು.

ಆಗ ಬ್ರಹ್ಮನು "ಓ ಸರ್ಪರಾಜಾ! ನಿನ್ನ ಮನೋಜಯಕ್ಕೆ ನಾನು ಮೆಚ್ಚಿದೆನು. ಪ್ರಜೆಗಳಿಗೆ ಹಿತವಾದ ಕಾರ್ಯವೊಂದನ್ನು ನಾನು ನಿನಗೆ ಹೇಳುವೆನು. ಅದರಂತೆ ನೀನು ನಡೆಸಬೇಕು. ಅನೇಕ ಪರ್ವತಗಳಿಂದಲೂ, ವನಗಳಿಂದಲೂ, ಸಮುದ್ರಗಳಿಂದಲೂ, ಗ್ರಾಮನಗರಗಳಿಂದಲೂ, ಉದ್ಯಾನಗಳಿಂದಲೂ ತುಂಬಿ, ಅವುಗಳ ಭಾರದಿಂದ ಅತ್ತಿತ್ತ ತೂಗಾಡಿ ಬಳುಕುತ್ತಿರುವ ಈ ಭೂಮಿಯನ್ನು ನೀನು ನಿನ್ನ ತಲೆಯಲ್ಲಿ ಅಲ್ಲಾಡದಂತೆ ಸ್ತಿಮಿತವಾಗಿ ವಹಿಸುತ್ತಿರು" ಎಂದನು. ಅದಕ್ಕೆ ಶೇಷನು "ಓ ಪಿತಾಮಹಾ! ನೀನು ಈ ಭೂಮಿಗೆ ಮಾತ್ರವಲ್ಲದೆ ಸಮಸ್ತಲೋಕಗಳಿಗೂ, ಸಕಲಪ್ರಾಣಿಗಳಿಗೂ ಪ್ರಭು! ಎಲ್ಲರಿಗೂ ವರಪ್ರದನು. ಬ್ರಹ್ಮದೇವನಾದ ನಿನ್ನ ಆಜ್ಞೆಗೆ ಪ್ರತಿಯುಂಟೇ? ಹಾಗೆಯೇ ಮಾಡುವೆನು. ಈ ಭೂಮಿಯನ್ನು ಅಲ್ಲಾಡದಂತೆ ನನ್ನ ತಲೆಯಲ್ಲಿ ಧರಿಸುವೆನು. ಭೂಮಿಯು ಅದಕ್ಕಾಗಿ ನನಗೆ ಮಾರ್ಗವನ್ನು ಕೊಡುವಂತೆ ಮಾಡು" ಎಂದನು. ಆಗ ಬ್ರಹ್ಮನು "ಆದಿಶೇಷಾ! ನೀನು ಈ ಭೂಮಿಯ ಕೆಳಭಾಗಕ್ಕೆ ಪ್ರವೇಶಿಸು. ಭೂಮಿಯು ತಾನಾಗಿಯೇ ನಿನಗೆ ದಾರಿಯನ್ನು ಕೊಡುವುದು. ನೀನು ಈ ಭೂಮಿಯನ್ನು ಧರಿಸುವುದರಿಂದ ನನಗೆ ಬಹಳ ಪ್ರಿಯವನ್ನುಂಟುಮಾಡಿದಂತಾಗುವುದು" ಎಂದನು. ಒಡನೆಯೇ ಆದಿಶೇಷನು ದಾರಿಯನ್ನು ಮಾಡಿಕೊಂಡು, ಭೂಮಿಯ ಕೆಳಕ್ಕೆ ಹೋಗಿ, ಸಮುದ್ರಾವೃತ

ವಾದ ಭೂಮಿಯನ್ನು ನಾಲ್ಕು ಕಡೆಗಳಿಂದಲೂ ಎತ್ತಿಹಿಡಿದು ತನ್ನ ತಲೆಯ ಮೇಲೆ ನಿಶ್ಚಲವಾಗಿರುವಂತೆ ನಿಲ್ಲಿಸಿಕೊಂಡನು. ಆಗ ಬ್ರಹ್ಮನು ಅವನ ಕಾರ್ಯಕ್ಕೆ ಸಂತೋಷಪಟ್ಟು ಶೇಷನನ್ನು ಕುರಿತು “ನಾಗರಾಜಾ! ನೀನು ಅಸಹಾಯನಾಗಿ ಈ ಭೂಮಿಯನ್ನು ನಿನ್ನ ಸಹಸ್ರಶಿರಸ್ಸುಗಳಿಂದ ಹೊತ್ತು ಅಲ್ಲಾಡದಂತೆ ಅದನ್ನು ಧರಿಸಿರುವುದರಿಂದ, ಸೃಷ್ಟಿಕರ್ತನಾದ ನನ್ನಂತೆಯೂ, ಲೋಕಪಾಲಕನಾದ ಇಂದ್ರನಂತೆಯೂ, ನೀನೂ ಪ್ರಜೆಗಳನ್ನು ರಕ್ಷಿಸಿದವನಾದೆ. ಆದುದರಿಂದ ನೀನು ಶೇಷನೆಂದೂ, ಧರ್ಮದೇವನೆಂದೂ ಪ್ರಖ್ಯಾತನಾಗು” ಎಂದನು. ಅದುಮೊದಲು ಆದಿಶೇಷನು ಬ್ರಹ್ಮಾಜ್ಞೆಯಿಂದ ಭೂಭಾರವನ್ನು ಧರಿಸುತ್ತ ಭೂಮಿಯ ಕೆಳಗಿರುವನು. ವಿನತಾಪುತ್ರನಾದ ಗರುಡನನ್ನು ಬ್ರಹ್ಮನು ಆದಿಶೇಷನಿಗೆ ಸಹಾಯಕನನ್ನಾಗಿ ಕೊಟ್ಟನು. ಹೀಗೆ ಆದಿಶೇಷನು ಭೂಭಾರವನ್ನು ವಹಿಸುವುದಕ್ಕಾಗಿ ಹೊರಟುಹೋದಮೇಲೆ, ಮಹಾಬಲಾಢ್ಯನಾದ ವಾಸುಕಿಯು, ದೇವರಾಜ್ಯದಲ್ಲಿ ಇಂದ್ರನು ಹೇಗೋ ಹಾಗೆ ನಾಗರಿಂದ ನಾಗರಾಜ್ಯದಲ್ಲಿ ಅಭಿಷೇಕಿಸಲ್ಪಟ್ಟನು.

ಇದು ಮೂವತ್ತಾರನೆಯ ಅಧ್ಯಾಯವು.

---

### ತಾಯಿಯ ಶಾಪದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಸರ್ಪಗಳ ಮಂತ್ರಾಲೋಚನೆ.

ಓ ಶೌನಕಾದಿಗಳೇ! ವಾಸುಕಿಯು ಸರ್ಪರಾಜ್ಯಕ್ಕೆ ಬಂದಮೇಲೆ “ತಾಯಿಯಾದ ಕದ್ರುವಿನ ಶಾಪದಿಂದ ತಮಗೆ ಪರಿಹಾರವು ಹೇಗೆ? ಆ ಶಾಪವು ತಮ್ಮಲ್ಲಿ ಫಲಿಸದಹಾಗೆ ಮಾಡುವ ಮಾರ್ಗವೇ”ನೆಂದು ಚಿಂತಿಸುತಿದ್ದನು. ಆಮೇಲೆ ಅವನು ಒಳ್ಳೇ ನೀತಿಜ್ಞರಾದ ಐರಾವತನೇ ಮೊದಲಾದ ಸಹೋದರರೊಡನೆ ಆ ವಿಚಾರವನ್ನು ವಿಧವಿಧವಾಗಿ ಚರ್ಚಿಸುತ್ತ, ಎಲ್ಲರನ್ನೂ ಮಂತ್ರಾಲೋಚನೆಗಾಗಿ ಕರೆಸಿ, “ಓ ಸಹೋದರರೇ! ನಮಗೆ ಬಂದಿರುವ ಶಾಪವನ್ನು ನೀವೆಲ್ಲರೂ ಕೇಳಿಬಲ್ಲಿರಿ. ಆ ಶಾಪದಿಂದ ತಪ್ಪಿಸಿ

ಕೊಳ್ಳುವುದಕ್ಕೆ ನಾವೆಲ್ಲರೂ ಯತ್ನಿಸಬೇಕು. ಬೇರೆ ಎಂತವರ ಶಾಪಕ್ಕಾದರೂ ಪರಿಹಾರೋಪಾಯವುಂಟು. ಮಾತೃಶಾಪಕ್ಕೆ ಮಾತ್ರ ಪ್ರತೀಕಾರವು ಕಾಣುವುದಿಲ್ಲ. ಇದಕ್ಕೆ ಮೊದಲು ಮಾತೃಶಾಪದಿಂದ ಮುಕ್ತರಾದವರನ್ನು ನಾನು ಕಾಣಲಿಲ್ಲ. ಇದಲ್ಲದೆ ಅವ್ಯಯನೂ, ಅಪ್ರಮೇಯನೂ ಆದ ಆ ಬ್ರಹ್ಮನ ಕಣ್ಣುಮುಂದೆಯೇ ನಮಗೆ ಈ ಶಾಪವುಂಟಾಯಿತೆಂದು ಕೇಳಿ ನನ್ನ ಎದೆಯು ನಡುಗುತ್ತಿರುವುದು. ನಮ್ಮ ಸರ್ವನಾಶಕ್ಕಾಗಿಯೇ ಈ ಅನರ್ಥವು ಏರ್ಪಟ್ಟಂತಿದೆ. ನಮ್ಮ ತಾಯಿಯಾವದೋ ನೀತಿಯನ್ನರಿಯದೆ ನಮಗೆ ಮಹಾಘೋರವಾದ ಶಾಪವನ್ನು ಕೊಟ್ಟುಬಿಟ್ಟಳು. ಹಾಗಿದ್ದರೂ ಬ್ರಹ್ಮದೇವನು ಪ್ರತ್ಯಕ್ಷದಲ್ಲಿದ್ದು ಅವಳನ್ನು ತಡೆಯಲಾರದೆ ಹೋದನು. ಇದರಿಂದ ಅವನಿಗೂ ನಮ್ಮ ನಾಶವು ಸಮ್ಮತವೆಂದೇ ತೋರುವುದು. ಆದುದರಿಂದ ನಮ್ಮ ಕ್ಷೇಮಕ್ಕೆ ಹೇಗಾದರೂ ಮಾರ್ಗವನ್ನು ನಾವು ಆಲೋಚಿಸಬೇಕಾಗಿದೆ. ಈಗ ನಾವು ಕಾಲವನ್ನು ವ್ಯರ್ಥಮಾಡಬಾರದು. ನಮ್ಮಲ್ಲಿ ಎಲ್ಲರೂ ಒಳ್ಳೇ ಬುದ್ಧಿವಂತರು. ಮತ್ತು ಅನೇಕ ವಿಷಯಗಳನ್ನು ತಿಳಿದ ಪ್ರಾಜ್ಞರು. ಆದುದರಿಂದ ನಾವು ಮಂತ್ರಾಲೋಚನೆಯನ್ನು ಮಾಡಿದರೆ, ಏನಾದರೂ ಒಂದು ಉಪಾಯವನ್ನು ಕಂಡುಕೊಳ್ಳಬಹುದು. ಹಿಂದೆ ದೇವತೆಗಳು ಎಲ್ಲಿಯೋ ಗುಹೆಯಲ್ಲಿ ಅಡಗಿಕೊಂಡಿದ್ದ ಅಗ್ನಿಯನ್ನು ಕಂಡುಹಿಡಿದಂತೆ, ನಾವೂ ಕೂಡ ಏನಾದರೂ ಪ್ರತಿಕಾರವನ್ನು ಕಂಡುಹಿಡಿಯಲೇ ಬೇಕು. ಮುಂದೆ ಜನಮೇಜಯನು ಸರ್ಪಯಾಗವನ್ನೇ ಮಾಡದಂತೆಯಾಗಲಿ, ಮಾಡಿದರೂ ಅದರಲ್ಲಿ ನಮಗೆ ಮಾತೃಶಾಪದಿಂದುಂಟಾದ ಹಾನಿಯು ತಟ್ಟದಂತೆಯಾಗಲಿ ಉಪಾಯವನ್ನಾಲೋಚಿಸುವೆವು" ಎಂದನು. ಈ ಮಾತುಗಳನ್ನು ಕೇಳಿ ಸರ್ಪಗಳೆಲ್ಲವೂ ಕೂಟವನ್ನು ಕೂಡಿದುವು. ಒಳ್ಳೇ ಮಂತ್ರಾಲೋಚನೆಯಲ್ಲಿಯೂ, ಬುದ್ಧಿಯಲ್ಲಿಯೂ ಮೇಲೆನಿಸಿದ ಅನೇಕ ನಾಗಶ್ರೇಷ್ಠರು ಆಲೋಚನೆಗಾಗಿ ಕುಳಿತರು. ಹೀಗೆ ಆಲೋಚನೆಗಳು ನಡೆಯುತ್ತಿರುವಾಗ, ಒಬ್ಬೊಬ್ಬರು ಅವರಿಗೆ ತೋರಿದ ಉಪಾಯಗಳನ್ನು ಹೇಳಲಾರಂಭಿಸಿದರು. ಕೆಲವರು ಆ ಸಭೆಯಲ್ಲಿ ಮೇಲೆದ್ದು ನಿಂತು "ನಾವು ಬ್ರಾಹ್ಮಣವೇಷದಿಂದ ಜನಮೇಜಯನ ಯಜ್ಞಶಾಲೆಗೆ ಹೋಗಿ, ಅವನು ಯಜ್ಞವನ್ನು ನಿಲ್ಲಿಸಿಬಿಡುವಂತೆ ಭಿಕ್ಷೆಯ

ನ್ನು ಬೇಡುವೆವು" ಎಂದರು. ತಾವೇ ಪಂಡಿತರೆಂದು ತಿಳಿದುಕೊಂಡಿದ್ದ ಬೇರೆ ಕೆಲವರು ಮೇಲೆದ್ದು "ಅದು ಹಾಗಲ್ಲ! ಯಜ್ಞಕ್ಕೆ ಮೊದಲು ನಾವು ಆ ಜನಮೇಜಯನಲ್ಲಿ ಮಂತ್ರಿಗಳಾಗಿ ಸೇರುವೆವು. ಹೇಗಿದ್ದರೂ ಅವನು ಯಜ್ಞಕ್ಕೆ ಮೊದಲು ನಮ್ಮ ಆಲೋಚನೆಯನ್ನು ಕೇಳಿಯೇ ಕೇಳುವನು. ಆಗ ನಾವು ಆ ಯಜ್ಞಕ್ಕೆ ಅವನು ಹೇಗೆ ಪ್ರವರ್ತಿಸಬಾರದೋ ಅದಕ್ಕೆ ತಕ್ಕ ಬೋಧನೆಗಳನ್ನು ಮಾಡಿ, ಅವನು ಆ ಯಜ್ಞದ ಆಲೋಚನೆಯನ್ನೇ ಬಿಟ್ಟುಬಿಡುವಂತೆ ಮಾಡುವೆವು. ಜನಮೇಜಯನೇನೋ ಒಳ್ಳೇ ಬುದ್ಧಿಶಾಲಿ! ನಾವು ಅವನಲ್ಲಿ ಇಷ್ಟಮಂತ್ರಿಗಳಂತೆ ಸೇರಿದರೆ, ಯಜ್ಞಕ್ಕಾಗಿ ನಮ್ಮ ಆಲೋಚನೆಗಳನ್ನು ಕೇಳಿಯೇ ಕೇಳುವನು. ಆಗ ನಾವು ಯಜ್ಞದಲ್ಲಿರುವ ಭಯಂಕರಗಳಾದ ದೋಷಗಳನ್ನೆಲ್ಲ ಎತ್ತಿಹೇಳಿ, ಸರಿಯಾದ ಕಾರಣಗಳನ್ನೆಲ್ಲ ಕಲ್ಪಿಸಿ, ಅವನು ಯಜ್ಞವನ್ನಾರಂಭಿಸದಂತೆಯೇ ಮಾಡಿಬಿಡುವೆವು" ಎಂದರು. ಆಗ ಇನ್ನೂ ಕೆಲವರು ಮೇಲೆದ್ದು "ಇದಕ್ಕಿಂತಲೂ ಬೇರೊಂದು ಒಳ್ಳೇ ಉಪಾಯವು ನಮಗೆ ತೋರುವುದು. ಆ ಜನಮೇಜಯನು ಸರ್ಪಯಾಗದ ವಿಧಾನವನ್ನು ತಿಳಿದವನಾದರೂ, ಒಬ್ಬ ಪುರೋಹಿತನನ್ನು ನಿಯಮಿಸುವನಲ್ಲವೆ! ಆ ಪುರೋಹಿತನಾವನೋ ಅವನನ್ನು ತಿಳಿದುಕೊಂಡು, ಯಜ್ಞಾರಂಭಕ್ಕೆ ಮೊದಲೇ ನಮ್ಮಲ್ಲಿ ಯಾರಾದರೂ ಒಬ್ಬನು ಹೋಗಿ, ಆ ಪುರೋಹಿತನನ್ನು ಕಚ್ಚಿಬಿಟ್ಟರೆ ಅವನು ಸಾಯುವನು. ಯಜ್ಞಮಾಡಿಸುವವನೇ ಸತ್ತಮೇಲೆ ಆ ಯಜ್ಞವು ನಿಂತಹಾಗೆಯೇ!" ಎಂದರು. ಬೇರೆ ಕೆಲವರು "ಆ ಸರ್ಪಯಾಗಕ್ಕಾಗಿ ಕರೆಸಲ್ಪಡುವ ಋತ್ವಿಕ್ಕುಗಳು ಯಾರುಯಾರುಂಟೋ, ಅವರೆಲ್ಲರನ್ನೂ ನಾವು ಕಚ್ಚಿ ಕೊಂದುಬಿಡುವೆವು. ಆಗಲೂ ನಮ್ಮ ಕಾರ್ಯವು ಸಿದ್ಧಿಸಿದಂತಾಗುವುದು" ಎಂದರು. ಆಮೇಲೆ ಆ ಸರ್ಪಗಳಲ್ಲಿಯೇ ದಯಾಬುದ್ಧಿಯುಳ್ಳ ಕೆಲವರು "ಇದುವರೆಗೆ ಹೇಳಿದುದೆಲ್ಲ ಬುದ್ಧಿಯಿಲ್ಲದ ಮಾತುಗಳು! ಬ್ರಹ್ಮಹತ್ಯೆಯು ಎಂದಿಗೂ ಶ್ರೇಯಸ್ಕರವಲ್ಲ. ಎಷ್ಟೇ ವ್ಯಸನವು ಬಂದರೂ, ಧರ್ಮವನ್ನು ಮೀರದೆ ಅದಕ್ಕೆ ಪರಿಹಾರವನ್ನು ಯೋಚಿಸಬೇಕಾದುದು ಉಚಿತವು. ಅಧರ್ಮಮಾರ್ಗದಲ್ಲಿ ಹೋಗುವುದು ಜಗತ್ತಿಗೇ ಹಾಸಿಕರವು" ಎಂದರು. ಆಮೇಲೆ ಮತ್ತೆ ಕೆಲವು ಸರ್ಪಗಳು "ನಾವು

ಮೇಘಗಳಾಗಿ ಹೋಗಿ ಜನಮೇಜಯನ ಯಜ್ಞಕಾಲದಲ್ಲಿ ಉರಿಯುವ ಯಾಗಾಗ್ನಿಯಮೇಲೆ ದೊಡ್ಡ ಮಳೆಯನ್ನು ಸುರಿಸಿ ಆ ಬೆಂಕಿಯನ್ನಾರಿಸಿಬಿಡುವೆವು. ಆಗಲೂ ಯಜ್ಞವು ನಿಂತುಹೋಗುವುದು'' ಎಂದರು. ಆಮೇಲೆ ಬೇರೆ ಕೆಲವರು "ಆ ಯಜ್ಞಮಧ್ಯದಲ್ಲಿ ನಮ್ಮಲ್ಲಿ ಯಾರಾದರೂ ಹೋಗಿ, ರಾತ್ರಿಯಲ್ಲಿ ಎಲ್ಲರೂ ನಿದ್ರೆಯಿಂದ ಮೈಮರೆತಿರುವಾಗ ಅವರ ಸ್ರುಗ್ಭಾಂಡವನ್ನು ಕದ್ದುಕೊಂಡು ಬಂದುಬಿಡುವೆವು. ಆಗಲೂ ಯಜ್ಞವು ನಿಂತುಹೋಗುವುದು'' ಎಂದರು. ಮತ್ತೆ ಕೆಲವರು "ಆ ಯಜ್ಞಕಾಲದಲ್ಲಿ ನೂರುಸಾವಿರ ಸರ್ಪಗಳು ಯಜ್ಞಶಾಲೆಗೆ ನುಗ್ಗಿ, ಅಲ್ಲಿ ಸೇರಿದ ಜನರನ್ನೆಲ್ಲ ಕಚ್ಚಿ ಕೊಲ್ಲಲಿ! ಆಗಲೂ ನಮಗೆ ಭಯವು ತಪ್ಪುವುದು. ಹಾಗಿಲ್ಲವೇ ಯಜ್ಞಕಾಲದಲ್ಲಿ ಸಂಸ್ಕರಿಸಲ್ಪಟ್ಟಿರುವ ಭೋಜನಪದಾರ್ಥಗಳಿಗೆಲ್ಲ ಸರ್ಪಗಳು ತಮ್ಮ ಮಲಮೂತ್ರಗಳನ್ನೂ, ವಿಷವನ್ನೂ ಕಕ್ಕಿ ಅದನ್ನೆಲ್ಲ ಕೆಡಿಸಬಾರದೇಕೆ?'' ಎಂದರು. ಆಮೇಲೆ ಬೇರೆ ಕೆಲವರು "ನಾವೇ ಆ ರಾಜನಿಗೆ ಋತ್ವಿಕ್ಕುಗಳಾಗಿ ಸೇರಿಬಿಡುವೆವು. ದಕ್ಷಿಣೆಯನ್ನು ಬೇಡುವ ನೆಪದಿಂದ ಯಜ್ಞತ್ಯಾಗವನ್ನೇ ಯಾಚಿಸುವೆವು. ಋತ್ವಿಕ್ಕುಗಳ ಮಾತಿನಂತೆ ಅವನು ನಡೆಯುವವನಾದುದರಿಂದ, ನಾವು ಕೋರಿದುದನ್ನೆಲ್ಲ ಅವನು ಕೊಟ್ಟೇ ತೀರುವನು'' ಎಂದರು. ಬೇರೆ ಕೆಲವರು "ಇವೆಲ್ಲಕ್ಕಿಂತಲೂ ಮೇಲಾದ ಉಪಾಯವೊಂದು ನಮಗೆ ತೋರುವುದು. ಆ ರಾಜನು ಸ್ನಾನಕ್ಕಾಗಿ ಕೊಳದಲ್ಲಿಳಿದು ನೀರಿನಲ್ಲಿ ವಿನೋದಿಸುತ್ತಿರುವಾಗ, ಮೆಲ್ಲಗೆ ನಾವು ಕೆಳಗಡೆಯಿಂದ ಹೋಗಿ, ಅವನ ಕಾಲನ್ನು ಹಿಡಿದು, ನಮ್ಮ ನಿವಾಸಸ್ಥಳವಾದ ಪಾತಾಳಕ್ಕೆ ಎಳೆದುಕೊಂಡು ಹೋಗಿ, ಅಲ್ಲಿ ಅವನ ಮೈಗೆ ಸುತ್ತಿಕೊಂಡು, ಅವನನ್ನು ಕಟ್ಟಿಹಾಕುವೆವು. ಆಗ ಯಜ್ಞವು ನಿಂತುಹೋಗುವುದು'' ಎಂದರು. ಆಗ ಬೇರೆ ಕೆಲವರು "ಕಟ್ಟಿಹಾಕಿಡುವುದೇನು? ಆಗಲೇ ಅವನನ್ನು ಕಚ್ಚಿಕೊಂದುಬಿಟ್ಟರೆ ತೀರಿತು! ಆಗ ನಮ್ಮ ಅನರ್ಥದ ಬುಡವನ್ನೇ ಕಡಿದಂತಾಯಿತು. ಓ ಸರ್ಪರಾಜಾ! ಇದೇ ನಮ್ಮ ಕೊನೆಯ ತೀರ್ಮಾನವು. ಇದರಮೇಲೆ ನಿನ್ನ ಅಭಿಪ್ರಾಯದಂತೆ ನಡೆಸಬಹುದು'' ಎಂದರು.

ನಾಗರೆಲ್ಲರೂ ಹೀಗೆ ತಮುತಮುಗೆ ತೋರಿದ ಅಭಿಪ್ರಾಯಗಳನ್ನು ಹೇಳಿ, ವಾಸುಕಿಯು ತೀರ್ಮಾನವೇನೆಂದು ಇದಿರುನೋಡುತಿದ್ದರು. ಆಗ ವಾಸುಕಿಯು ತನ್ನಲ್ಲಿ ತಾನು ಚೆನ್ನಾಗಿ ಆಲೋಚಿಸಿಕೊಂಡು "ಎಲೈ ನಾಗರೇ! ನಿಮ್ಮ ಆಲೋಚನೆಗಳೊಂದೂ ನನಗೆ ನೀತಿಸಮ್ಮತವಾಗಿ ತೋರಲಿಲ್ಲ. ನೀವು ಹೇಳಿದಂತೆ ಕಚ್ಚುವುದು, ಕೊಲ್ಲುವುದು, ಈ ಉಪಾಯಗಳೇನೂ ನನಗೆ ಉಚಿತವಾಗಿ ತೋರಲಿಲ್ಲ. ಆದರಿಂದ ನಮುಗೆ ಶ್ರೇಯಸ್ಸೂ ಇಲ್ಲ. ಮಹಾತ್ಮನಾದ ನಮ್ಮ ತಂದೆ ಕಶ್ಯಪನನ್ನು ಪ್ರಸನ್ನನನ್ನಾಗಿ ಮಾಡಿ, ಅವನ ಹೇಳಿಕೆಯಂತೆ ನಡೆಯುವುದೇ ನನಗೂ, ನಿಮಗೂ ಶ್ರೇಯಸ್ಕರವೆಂದು ತೋರಿದೆ. ಮುಖ್ಯವಾಗಿ ನಮ್ಮೆಲ್ಲರ ಶ್ರೇಯಸ್ಸನ್ನು ನೋಡಬೇಕಾದುದು ನನ್ನ ಕರ್ತವ್ಯವು. ಅದು ನನ್ನಮೇಲೆ ಬಿದ್ದ ಭಾರವಾದುದರಿಂದ ನಾನು ಸದಾ ತಪಿಸುತ್ತಿರುವೆನು. ನಿಮ್ಮಲ್ಲಿ ಯಾರೊಬ್ಬರ ಗುಣವಾಗಲಿ, ದೋಷವಾಗಲಿ ಅವೆಲ್ಲವೂ ಕೊನೆಗೆ ನಿಮ್ಮೆಲ್ಲರಿಗೂ ಹಿರಿಯನಾದ ನನಗೆ ಸೇರಿದುದೇ ಆಗುವುದು" ಎಂದನು.

ಇದು ಮೂವತ್ತೇಳನೆಯ ಅಧ್ಯಾಯವು.

{ ಏಲಾಪುತ್ರನೆಂಬ ನಾಗನ ಭಾಷಣವು. ದೇವಬ್ರಹ್ಮ ಸಂವಾದದಲ್ಲಿ ಆಸ್ತೀಕನ ಉತ್ಪತ್ತಿಕಥನವು. }

ಸರ್ಪಗಳೆಲ್ಲ ಹೀಗೆ ಹಾಗೆಂದು ತಮುತಮುಗೆ ತೋರಿದಂತೆ ನಾನಾವಿಧವಾಗಿ ಹೇಳಿದ ಮಾತುಗಳನ್ನೂ, ವಾಸುಕಿಯ ಅಭಿಪ್ರಾಯವನ್ನೂ ಕೇಳಿದ ಮೇಲೆ, ಏಲಾಪತ್ರನೆಂಬ ನಾಗನು ಆ ಸಭೆಯವರನ್ನು ಕುರಿತು "ಓ ಮಹನೀಯರೇ! ಓ ನಾಗರಾಜಾ! ನಾನು ಮೊದಲೇ ನನ್ನ ಬುದ್ಧಿಗೆ ತೋರಿದುದನ್ನು ಸೂಚಿಸಿರುವೆನು. ಎಲೈ ನಾಗಶ್ರೇಷ್ಠರೆ! ನಿಮುಗೆ ಅದು ಸರಿಯಲ್ಲವೆಂದು ತೋರಿದರೆ, ಪ್ರಭೂ! ನಿನಗೂ ಅದು ಹಾಗೆಯೇ ಅಸಮ್ಮತವಾದರೆ, ನಿಮ್ಮ ಇಷ್ಟದಂತೆ ನಡೆಸಬಹುದು. ನನಗೇನೋ ಈಗಲೂ ಅದೇ ಆಲೋಚನೆಯು ನೆನಪಿಗೆ ಬರುತ್ತಿದೆ. ಅದನ್ನು ನಾನು ಯಥಾವಸ್ಥಿತ

ವಾಗಿ ವಿವರಿಸಿ ಹೇಳುವೆನು ಕೇಳಿರಿ. ನಮಗೆ ಯಾವನಿಂದ ಈ ಮಹಾ ಭಯವುಂಟಾಗಿದೆಯೋ ಆ ಜನಮೇಜಯರಾಜನು ಈಗ ನಾವೆಲ್ಲರೂ ಯೋಚಿಸಿದಂತವನಲ್ಲ! ಈ ಉಪಾಯಗಳೊಂದೂ ಅವನಲ್ಲಿ ಸಾಗಲಾರವು. ಇವಕ್ಕೆಲ್ಲ ಹೆದರಿ ಅವನು ಯಾಗವನ್ನು ನಿಲ್ಲಿಸುವ ಹಾಗೂ ಇಲ್ಲ. ಓ ನಾಗರಾಜಾ! ಈ ಲೋಕದಲ್ಲಿ ದೈವದಿಂದ ಹತನಾದವನು ತಿರುಗಿ ದೈವ ವನ್ನೇ ಆಶ್ರಯಿಸಬೇಕಲ್ಲದೆ ಬೇರೆ ಮಾರ್ಗವಿಲ್ಲ ಎಲೈ ನಾಗಶ್ರೇಷ್ಠರೇ! ಓ ಪ್ರಭೂ! ವಾಸುಕೀ! ಮತ್ತೊಂದು ವಿಷಯವನ್ನು ಹೇಳುವೆನು ಕೇಳಿರಿ. ನಮಗೇನೋ ಭಯಂಕರವಾದ ಈ ಭಯವು ಪ್ರಾಪ್ತವಾಗಿದೆ. ಇದು ದೈವ ದಿಂದಲೇ ಉಂಟಾದುದು. ದೈವವೇ ಅದನ್ನು ತಪ್ಪಿಸಬೇಕು. ಹಿಂದೆ ತಾಯಿಯು ನಮಗೆ ಶಾಪವನ್ನು ಕೊಟ್ಟೊಡನೆ ನಾನು ಭಯದಿಂದ ತಾಯಿ ಯ ತೊಡೆಯನ್ನೇರಿ ಕುಳಿತೆನು. ಆಗ ದೇವತೆಗಳು ನಮ್ಮ ತಾಯಿಯ ಕ್ರೂರಶಾಪವನ್ನು ಕೇಳಿ "ಸರ್ಪಜಾತಿಯೇ ಕ್ರೂರವಾದುದು. ಅದರಲ್ಲಿ ಯೂ ನಾಗಸ್ತ್ರೀಯರು ಬಹುಕ್ರೂರರು" ಎಂದು ಹೇಳಿದುದನ್ನು ನಾನೂ ಕೇಳಿದೆನು. ಆಮೇಲೆ ಆ ದೇವತೆಗಳು ಮಾತೃಶಾಪದಿಂದ ತಪಿಸುತ್ತಿ ರುವ ಸರ್ಪಗಳಲ್ಲಿ ದಯೆಯಿಂದ, ಅವುಗಳ ಕ್ಷೇಮಕ್ಕಾಗಿ ತಾವೇ ಬ್ರಹ್ಮನ ಬಳಿಗೆ ಹೋಗಿ ಹೀಗೆಂದು ಪ್ರಾರ್ಥಿಸಿದರು. "ಓ ಪಿತಾಮಹಾ! ಕ್ರೂ ರಸ್ವಭಾವವುಳ್ಳ ಆ ಕದ್ರುವೊಬ್ಬಳು ಹೊರತು ಬೇರೆ ಯಾವಳು ತಾನೇ ತನ್ನ ಮಕ್ಕಳಿಗೆ ನಿನ್ನ ಕಣ್ಣುಮುಂದೆ ಅಂತಹ ಕ್ರೂರಶಾಪವನ್ನು ಕೊಡು ವಳು? ಅವಳ ಮಾತು ಹಾಗಿರಲಿ. ನೀನೂ ಅದನ್ನು 'ಸರಿ ಸರಿ' ಎಂದು ಅನುಮೋದಿಸಿದೆಯಲ್ಲವೆ? ಅವಳನ್ನು ನೀನು ತಡೆಯದಿದ್ದುದಕ್ಕೆ ಕಾರ ಣವೇನೋ ಅದನ್ನಾದರೂ ನಮಗೆ ತಿಳಿಸು" ಎಂದನು. ಆಗ ಬ್ರಹ್ಮನು "ಎಲೈ ದೇವತೆಗಳಿರಾ! ಸರ್ಪಜಾತಿಗಳು ಬಹಳವಾಗಿ ಹೆಚ್ಚಿಹೋದುವು. ಅವು ಸ್ವಭಾವದಲ್ಲಿಯೂ, ಆಕಾರದಲ್ಲಿಯೂ ಭಯಂಕರಗಳು. ಕ್ರೂರವಾದ ವಿಷವನ್ನು ಕಕ್ಕುತ್ತಿರುವುವು. ಅವುಗಳಿಂದ ಪ್ರಜೆಗಳಿಗೆ ಅಪಾಯವುಂಟಾ ಗಬಾರದೆಂದು ಲೋಕಹಿತವನ್ನು ಕೋರಿಯೇ ನಾನು ಸುಮ್ಮನಿದ್ದೆನು. ವಿಷವನ್ನು ಕಕ್ಕುತ್ತ ಇತರ ಪ್ರಾಣಿಗಳನ್ನು ಕಚ್ಚಿ ಕೊಲ್ಲುವ ಪಾಪಸ್ವಭಾ ವವುಳ್ಳ ಸರ್ಪಗಳಿಗೆ ನಾಶವುಂಟಾಗದೆ ತೀರದು. ಧರ್ಮನಿರತರಾದವರಿಗೆ

ಅದರಿಂದೇನೂ ಅಪಾಯವಾಗದು. ಆದರೆ ಆ ಸರ್ಪಗಳಿಗೆ ಅನುಕೂಲಕಾಲವು ಬಂದಾಗ, ಈ ಮಹಾಭಯದಿಂದ ಮುಕ್ತಿಹೊಂದುವುದಕ್ಕೂ ಮಾರ್ಗವುಂಟು. ಅದನ್ನೂ ನಿಮಗೆ ಈಗಲೇ ಹೇಳುವೆನು. "ಯಾಯಾವರ" ರೆಂಬ ಋಷಿಗಳ ಕುಲವೊಂದುಂಟು. (ನಿಂತಲ್ಲಿ ನಿಲ್ಲದೆ ಯಾವಾಗಲೂ ಸಂಚರಿಸುತ್ತಿರುವ ಋಷಿಗಳಿಗೆ ಯಾಯಾವರರೆಂದು ಹೆಸರು) ಆ ಋಷಿಕುಲದಲ್ಲಿ ಮಹಾತಪಸ್ವಿಯೂ, ಜಿತೇಂದ್ರಿಯನೂ, ಬಹಳ ಬುದ್ಧಿವಂತನೂ ಆದ ಜರತ್ಕಾರುವೆಂಬ ಮಹರ್ಷಿಯೊಬ್ಬನು ಹುಟ್ಟುವನು. ಆ ಜರತ್ಕಾರುವಿಗೆ ತಪೋಧನನಾದ ಆಸ್ತೀಕನೆಂಬ ಪುತ್ರನೊಬ್ಬನಾಗುವನು. ಅವನು ಸರ್ಪಗಳಿಗೆ ನಾಶಕಾಲವುಂಟಾದಾಗ ಆ ಸರ್ಪಯಾಗವನ್ನು ನಿಲ್ಲಿಸುವನು. ಆ ಕಾಲದಲ್ಲಿ ಅನೇಕಕ್ರೂರಸರ್ಪಗಳೆಲ್ಲವೂ ನಷ್ಟವಾಗಿ, ಧರ್ಮಿಷ್ಠಗಳಾದ ಸರ್ಪಗಳು ಮಾತ್ರ ಅಪಾಯದಿಂದ ತಪ್ಪಿ ಬರುವುವು" ಎಂದನು. ಆಗ ದೇವತೆಗಳು "ಓ ಪಿತಾಮಹಾ! ಮಹಾತ್ಮನಾದ ಆಸ್ತೀಕನನ್ನು ಪಡೆಯತಕ್ಕ ಜರತ್ಕಾರುವಿನ ಪತ್ನಿಯಾವಳು? ಅವಳ ಹೆಸರೇನು?" ಎಂದರು. ಅದಕ್ಕೆ ಬ್ರಹ್ಮನು "ವಾಸುಕಿಯ ಸಹೋದರಿಯಾದ ಕನ್ಯೆಯೊಬ್ಬಳು ಆಗಲೇ ಹುಟ್ಟಿರುವಳು. ನಾಗರಾಜನಾದ ವಾಸುಕಿಯು ಆ ಕನ್ಯೆಯನ್ನು ಜರತ್ಕಾರುವಿಗೆ ಕೊಟ್ಟು ವಿವಾಹಮಾಡುವನು. ಆ ಕನ್ಯೆಗೂ ಜರತ್ಕಾರುವೆಂದೇ ಹೆಸರು. ಜರತ್ಕಾರುವು ತನ್ನ ಹೆಸರುಳ್ಳ ಅದೇ ಪತ್ನಿಯಲ್ಲಿ ವೇದವೇದಾಂಗಪಾರಂಗತನಾದ ಪುತ್ರನನ್ನು ಪಡೆಯುವನು" ಎಂದನು. ಆಗ ದೇವತೆಗಳು 'ಸರಿ! ಸರಿ' ಎಂದು ಬ್ರಹ್ಮದೇವನಿಗೆ ನಮಸ್ಕರಿಸಿ ಹೊರಟುಹೋದರು. ಬ್ರಹ್ಮನೂ ತನ್ನ ಸ್ಥಾನಕ್ಕೆ ಹಿಂತಿರುಗಿದನು. ಆದುದರಿಂದ ಓ ವಾಸುಕೀ! ಜರತ್ಕಾರುವೆಂಬ ನಿನ್ನ ಸಹೋದರಿಯುಂಟಲ್ಲವೇ? ಅವಳನ್ನು ನೀನು, ಮುಂದೆ ಜರತ್ಕಾರುವೆಂಬ ಮಹರ್ಷಿಯು ನಿನ್ನಲ್ಲಿ ಭಿಕ್ಷೆಬೇಡಲು ಬಂದಾಗ, ಅವನಿಗೆ ಭಿಕ್ಷಾರೂಪವಾಗಿಯೇ ಕೊಟ್ಟು ಸರ್ಪಗಳ ಭಯವನ್ನು ತಪ್ಪಿಸು. ಇದರಿಂದಲೇ ಸರ್ಪಗಳಿಗೆ ಶಾಪವಿಮೋಚನವೆಂದು ನಾನು ಕೇಳಿರುವೆನು" ಎಂದನು.

ಇದು ಮೂವತ್ತೆಂಟನೆಯ ಅಧ್ಯಾಯವು.

ಏಲಾಪತ್ರನ ಉಪದೇಶದಂತೆ ವಾಸುಕಿಯು ತನ್ನ ಸಹೋದರಿಯನ್ನು ಬಹಳ ಎಚ್ಚರಿಕೆಯಿಂದ ಕಾಪಾಡುತ್ತ, ಅವಳನ್ನು ಜರತ್ಕಾರುವಿಗೆ ಕೊಡಲು ಸಂಕಲ್ಪಿಸಿದುದು.

ಶೌನಕಾ! ಆಮೇಲೆ ನಾಗರೆಲ್ಲರೂ ಏಲಾಪತ್ರನ ಮಾತಿಗೆ ಸಂತೋಷಿಸಿ "ಭಲೆ! ಭಲೆ!" ಎಂದು ಆತನನ್ನು ಕೊಂಡಾಡಿದರು. ಅದು ಮೊದಲು ವಾಸುಕಿಯು ತನ್ನ ತಂಗಿಯನ್ನು ಬಹಳ ಎಚ್ಚರಿಕೆಯಿಂದ ಕಾಪಾಡುತ್ತ ಬಂದನು. ಆಮೇಲೆ ಕೆಲವು ಕಾಲಕ್ಕೆ ದೇವಾಸುರರೆಲ್ಲ ಸೇರಿ ಸಮುದ್ರವನ್ನು ಕಡೆಯುವುದಕ್ಕಾರಂಭಿಸಿದಾಗ, ಸರ್ಪರಾಜನೂ, ಬಲಾಧಿಕನೂ ಆದ ವಾಸುಕಿಯು ಕಡೆಗೋಲಿನ ಹಗ್ಗವಾಗಿದ್ದನು. ಆ ಸಮುದ್ರಮಥನಕಾರ್ಯವೆಲ್ಲ ಮುಗಿದಮೇಲೆ, ದೇವತೆಗಳು ತಮಗೆ ಮಹೋಪಕಾರ ಮಾಡಿದ ವಾಸುಕಿಯನ್ನು ಕರೆದುಕೊಂಡು ಬ್ರಹ್ಮದೇವನಲ್ಲಿಗೆ ಹೋಗಿ "ಪ್ರಭೂ! ಈ ವಾಸುಕಿಯು ಮಾತೃಶಾಪಕ್ಕೆ ಭಯಪಟ್ಟು ಸದಾ ಕೊರಗಿ ಕೊರಗಿ ಕೃಶನಾಗುತ್ತಿರುವನು. ತನ್ನ ಜ್ಞಾತಿಗಳಾದ ಸರ್ಪಗಳಿಗೆಲ್ಲ ಕ್ಷೇಮವನ್ನು ಕೋರಿ ಅದಕ್ಕಾಗಿ ಕಷ್ಟಪಡುತ್ತಿರುವನು. ಆದುದರಿಂದ ಇವನ ಮನಸ್ಸಿನ ಶಲ್ಯವನ್ನು ನೀಗಿಸುವುದಕ್ಕೆ ನೀನಲ್ಲದೆ ಬೇರೆ ಸಮರ್ಥರಿಲ್ಲ. ಈ ನಾಗರಾಜನು ದೇವತೆಗಳಾದ ನಮಗೆಲ್ಲ ಹಿತವನ್ನುಂಟುಮಾಡಿದವನು. ನೀನು ಇವನ ಮನೋವ್ಯಾಕುಲತೆಯನ್ನು ನೀಗಿಸಬೇಕು" ಎಂದರು. ಅದಕ್ಕೆ ಬ್ರಹ್ಮನು "ಓ ದೇವತೆಗಳಿರಾ! ಇದಕ್ಕೆ ಮೊದಲೇ ಏಲಾಪತ್ರನು ನಿಮಗೆ ತಿಳಿಸಿದ ಮಾರ್ಗಗಳೆಲ್ಲ ನಾನು ಮನಃಪೂರ್ವಕವಾಗಿ ಹೇಳಿದುದೇಹೊರತು ಕೇವಲ ಆಪ್ಯಾಯಸಾರ್ಥವಾಗಿ ಹೇಳಿದುದಲ್ಲ. ಅದಕ್ಕೆ ಕಾಲವು ಬರುವುದು. ಆಗ ವಾಸುಕಿಯು ನಾನು ಹೇಳಿದಂತೆ ನಡೆಸಲಿ! (ಅವನು ತನ್ನ ಸಹೋದರಿಯನ್ನು ಜರತ್ಕಾರುಮುನಿಗೆ ಕೊಟ್ಟು ವಿವಾಹಮಾಡಲಿ) ಅದರಮೇಲೆ ಧರ್ಮರತರಾದ ನಾಗರಿಗೆ ಅಪಾಯವು ತಪ್ಪಿ ಅವರಲ್ಲಿ ಪಾಪಾತ್ಮರುಮಾತ್ರ ನಾಶಹೊಂದುವರು. ಜರತ್ಕಾರುವೆಂಬ ಆ ಬ್ರಾಹ್ಮಣನು ಆಗಲೇ ಹುಟ್ಟಿ ಉಗ್ರತಪಸ್ಸಿನಲ್ಲಿರುವನು. ಅವನು ವಾಸುಕಿಯಲ್ಲಿಗೆ ಶೀಘ್ರದಲ್ಲಿಯೇ ಬರುವನು. ಏಲಾಪತ್ರನು ನಿಮಗೆ ಹೇಳಿದ ಮಾತುಗಳೆಲ್ಲ ವಾಸ್ತವವೇ" ಎಂದನು. ತಾಯಿಯ ಶಾಪದಿಂದ

ವ್ಯಾಕುಲನಾಗಿದ್ದ ವಾಸುಕಿಗೆ ಬ್ರಹ್ಮನ ಮಾತುಗಳಿಂದ ಬಹಳ ತೃಪ್ತಿಯುಂಟಾಯಿತು. ತನ್ನ ಸಹೋದರಿಯನ್ನು ಜರತ್ಕಾರುಮುನಿಗಾಗಿ ಬಹಳ ಜಾಗರೂಕತೆಯಿಂದ ರಕ್ಷಿಸಿಕೊಂಡಿದ್ದನು. ಮತ್ತು ಆಗಲೇ ಸರ್ಪಗಳನ್ನೆಲ್ಲ ಕರೆಸಿಕೊಂಡು "ಎಲೈ ನಾಗರೇ! ಎಂತವರಿಗೂ ವಶನಾಗದ ಜರತ್ಕಾರುವು ಕನ್ಯಾರ್ಥಿಯಾಗಿ ಬರುವ ಸಂಗತಿಯು ನಿಮಗೆ ತಿಳಿದೊಡನೆ ನನಗೆ ಬಂದು ತಿಳಿಸಬೇಕು" ಎಂದು ಹೇಳಿ, ಆ ಮಹರ್ಷಿಯು ಆಗಮನವನ್ನು ನಿರೀಕ್ಷಿಸುತ್ತಿರುವಂತೆ, ಎಲ್ಲಾ ನಾಗರಿಗೂ ಕಟ್ಟಾಜ್ಞೆ ಮಾಡಿದನು.

ಇದು ಮೂವತ್ತೊಂಭತ್ತನೆಯ ಅಧ್ಯಾಯವು.

---

ಜರತ್ಕಾರುವೆಂಬ ಹೆಸರು ಬಂದ ಕಾರಣವು. ಆಸ್ತೀಕನ ಜನ್ಮವೃತ್ತಾಂತವು. ಪರೀಕ್ಷಿದ್ರಾಜನು ಬೇಟೆಗೆ ಹೋದುದು. ಶಮೀಕನೆಂಬ ಮಹರ್ಷಿಯ ಕೊರಲಿಗೆ ಸತ್ತ ಹಾವನ್ನು ಮಾಲೆಹಾಕಿದುದು.

ಆಗ ಶೌನಕನು "ಸೂತಪುತ್ರಾ! ಜರತ್ಕಾರುವೆಂದು ಕೇಳಿದೆಯಲ್ಲವೇ? ಜರತ್ಕಾರುವೆಂಬ ಹೆಸರು ಆ ಮಹರ್ಷಿಗೆ ಬರಲು ಕಾರಣವೇನು? ಆ ವೃತ್ತಾಂತವನ್ನು ನನಗೆ ತಿಳಿಸಬೇಕು. ನಾನು ಅದನ್ನು ಕೇಳಲು ಕುತೂಹಲಗೊಂಡಿರುವೆನು" ಎಂದನು. ಅದಕ್ಕಾ ಸೌತಿಯು "ಓ ಬ್ರಾಹ್ಮಣೋತ್ತಮಾ! ಕೇಳು! ಜರೆ (ಜರತ್) ಎಂದರೆ ಕ್ಷಯಿಸುವುದು. ಕಾರುವೆಂದರೆ ದಾರುಣವಾದುದು. ಕಾಮಾದ್ಯುಪದ್ರವಗಳಿಗೆ ಮೂಲವಾಗಿರುವುದರಿಂದ, ದಾರುಣವೆನಿಸಿದ ಶರೀರವನ್ನು ಉಗ್ರತಪಸ್ಸಿನಿಂದ ಕ್ರಮಕ್ರಮವಾಗಿ ಕ್ಷಯಿಸುವಹಾಗೆ ಮಾಡಿದ ಮಹಾ ಜ್ಞಾನವಂತನಾದುದರಿಂದ ಅವನಿಗೆ ಜರತ್ಕಾರುವೆಂಬ ಹೆಸರಾಯಿತು. ವಾಸುಕಿಯ ಸಹೋದರಿಗೂ ತಪಸ್ಸಿನಿಂದ ಅದೇ ಜರತ್ಕಾರುವೆಂಬ ಹೆಸರಾಯಿತು" ಎಂದನು. ಇದನ್ನು ಕೇಳಿ ಶೌನಕನು ತನ್ನಲ್ಲಿ ತಾನು "ತಪಸ್ಸಿನಿಂದ ಶರೀರವನ್ನು ಕುಂದಿಸಿ, ತಮ್ಮ ಯೌವನವನ್ನೆಲ್ಲ ಕಳೆದು ಮುದುಕರಾದ ಆ ವಧೂವರರಿಗೂ, ಅಂತಹ ಬ್ರಹ್ಮಚರ್ಯವನ್ನು ಕೆಡಿಸತಕ್ಕ ಅನ್ಯೋನ್ಯ ವಿವಾಹಪ್ರಸಕ್ತಿಯು

ಒಂದುವಲ್ಲವೇ ಆಶ್ಚರ್ಯವು! ರೂಪದಲ್ಲಿಯೂ, ವಯಸ್ಸಿನಲ್ಲಿಯೂ ಸಮಾನರಾದ ಆ ವಧೂವರರಿಗೆ ವಿವಾಹವೂ ಅನುರೂಪವೇ'' ಎಂದು ದೊಡ್ಡದಾಗಿ ನಕ್ಕನು. ಆಮೇಲೆ ತಿರುಗಿ ಸೌತಿಯನ್ನು ಕುರಿತು ''ಸೂತಪುತ್ರಾ! ಅದೆಲ್ಲವೂ ಸರಿ! ಆಸ್ತೀಕನು ಹುಟ್ಟಿದ ವೃತ್ತಾಂತವನ್ನು ಕೇಳಬೇಕೆಂದಿರುವೆನು'' ಎಂದನು. ಆಗ ಸೌತಿಯು ಪುರಾಣೋಕ್ತರೀತಿಯಾಗಿ ಆ ಕಥೆಯನ್ನಾರಂಭಿಸಿ ಹೀಗೆಂದು ಹೇಳುವನು.

ಶೌನಕಾ! ಕೇಳು! ವಾಸುಕಿಯು ಸರ್ಪಗಳಿಗೆಲ್ಲ ಆಜ್ಞೆಮಾಡಿ, ತನ್ನ ಸಹೋದರಿಯನ್ನು ಜರತ್ಕಾರುಮುನಿಗಾಗಿ ಎಚ್ಚರಿಕೆಯಿಂದ ಕಾಪಾಡುತ್ತಿದ್ದನಲ್ಲವೆ? ಕೇವಲ ತಪೋನಿರತವಾಗಿ, ಉಗ್ರವ್ರತವನ್ನು ಹಿಡಿದವನಾಗಿ ಆ ಜರತ್ಕಾರುಮುನಿಯಾದರೋ, ಬಹುಕಾಲದವರೆಗೆ ತಪಸ್ಸಿನಲ್ಲಿಯೇ ಆಸಕ್ತನಾಗಿ ವಿವಾಹವನ್ನೇ ಒಲ್ಲದಿದ್ದನು. ಊರ್ಧ್ವರೇತಸ್ಸೆನಿಸಿ, ವೇದಾಧ್ಯಯನಶೀಲನಾದ ಆ ಮಹಾತ್ಮನು, ಭೂಮಿಯನ್ನೆಲ್ಲ ಸುತ್ತುತ್ತಿದ್ದನಲ್ಲದೆ, ತನಗೆ ಪತ್ನಿಯು ಬೇಕೆಂದು ಮನಸ್ಸಿನಲ್ಲಿಯೂ ಎಣಿಸಲಿಲ್ಲ. ಈ ಸಂಗತಿಯು ಹೀಗಿರಲಿ!

ಆಮೇಲೆ ಒಂದಾನೊಂದು ಕಾಲದಲ್ಲಿ ಕುರುವಂಶದಲ್ಲಿ ಹುಟ್ಟಿದ ಪರೀಕ್ಷಿತ್ತೆಂಬ ರಾಜನೊಬ್ಬನಿದ್ದನು. ಅವನು ಮಹಾಬಾಹುವೆನಿಸಿಕೊಂಡು, ಧನುರ್ಯುದ್ಧದಲ್ಲಿ ನಿಪುಣನಾಗಿ, ಅವನ ಮುತ್ತಾತನಾದ ಪಾಂಡುವಿನಂತೆಯೇ ಬೇಟೆಯಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗಿದ್ದನು. ಮತ್ತು ಅಭಿಮನ್ಯುಪುತ್ರನಾದ ಅವನು ಪಾಂಡುವಿನಂತೆ ಲೋಕದಲ್ಲಿ ಪ್ರಖ್ಯಾತನಾಗಿಯೂ, ಇದ್ದನು. ಆ ರಾಜನು ಆಗಾಗ ಬೇಟೆಗಾಗಿ ಹೊರಟು, ಜಿಂಕೆ, ಹುಲಿ, ಚಿರತೆ, ಕಾಡೆಮ್ಮೆ ಮುಂತಾದ ವನಮೃಗಗಳನ್ನೆಲ್ಲ ಕೊಲ್ಲುತ್ತಿದ್ದನು. ಹೀಗಿರುವಾಗ ಒಮ್ಮೆ ಅವನು, ತನ್ನ ಬಾಣದಿಂದ ಕಾಡಿನಲ್ಲಿ ಒಂದು ಜಿಂಕೆಗೆ ಗುರಿಯಿಟ್ಟು ಹೊಡೆದನು. ದಟ್ಟನಾದ ಆ ಅಡವಿಯಲ್ಲಿ ಅದು ಎಲ್ಲಿಯೋ ತಪ್ಪಿಸಿಕೊಂಡು ಹೋಯಿತು. ಹಿಂದೆ ದಕ್ಷಯಾಗಕಾಲದಲ್ಲಿ ರುದ್ರನು ಯಜ್ಞಮೃಗವನ್ನು ಬೆನ್ನಟ್ಟಿ ಹೋದಂತೆ, ಅದನ್ನು ಹುಡುಕುವುದಕ್ಕಾಗಿ ಕೈಯ್ಯಲ್ಲಿ ಧನುಸ್ಸನ್ನು ಹಿಡಿದು ಅಲ್ಲಲ್ಲಿ ಸುತ್ತಿದನು. ವಾಸ್ತವದಲ್ಲಿ ಅವನಿಂದ



ಪುಟ ೧೯೭. ಕರುವಿನ ಬಾಯಿಸೊರೆಯಿಂದ ಜೀವಧಾರಣಮಾಡುತ್ತ ಮೌನದಲ್ಲಿದ್ದ ಶಮೀಕನ ಕೊರಲಿಗೆ ಪರೀಕ್ಷಿತ್ತು ಸತ್ತ ಹಾವನ್ನು ಮಾಲೆಹಾಕಿದುದು.

ಹೊಡೆಯಲ್ಪಟ್ಟ ಮೃಗವು ಆ ಕಾಡಿನಲ್ಲಿ ತಪ್ಪಿಸಿಕೊಂಡುಹೋಗಲಿಲ್ಲ. ಆ ಪರೀಕ್ಷಿತ್ತಿನ ಮರಣಸೂಚನೆಗಾಗಿಯೇ ಹಾಗೆ ದೈವಕಲ್ಪಿತವಾದ ಒಂದು ಸಂವಿಧಾನವು ನಡೆಯಿತು. ಆ ರಾಜನು ಬಹುದೂರದವರೆಗೆ ಸುತ್ತಿಸುತ್ತಿ, ಕೊನೆಗೆ ಬಹಳ ಆಯಾಸಪಟ್ಟು, ದಾಹದಿಂದ ಕಂದಿ, ಆ ವನಮಧ್ಯದಲ್ಲಿದ್ದ ಒಬ್ಬ ಋಷಿಯನ್ನು ಕಂಡನು. ಆ ಋಷಿಯಾದರೋ ಕರುಗಳು ತಾಯಿಯ ಹಾಲನ್ನು ಕುಡಿದಮೇಲೆ ಅವು ತೃಪ್ತಿಪಟ್ಟು ಬಾಯಿಂದ ಕಕ್ಕಿಬಿಟ್ಟ ಹಾಲಿನ ನೊರೆಯನ್ನು ಕುಡಿಯುತ್ತ, ಅದರಿಂದಲೇ ದೇಹಧಾರಣೆ ಮಾಡಿಕೊಂಡು ದನದ ಕೊಟ್ಟಿಗೆಗಳಲ್ಲಿ ತಪಸ್ಸುಮಾಡುತ್ತಿದ್ದನು. ಹೀಗಿರುವಾಗ ಆ ಪರೀಕ್ಷಿದ್ರಾಜನು ಆಯಾಸದಿಂದಲೂ, ದಾಹದಿಂದಲೂ ಪೀಡಿತನಾಗಿ ಬಹಳ ಬೇಸರದಿಂದ ಆ ಋಷಿಯಿದ್ದ ಕಡೆಗೆ ಬಂದು “ಎಲೈ! ನಾನು ಪರೀಕ್ಷಿತ್ತೆಂಬ ಕುರುವಂಶದ ರಾಜನು. ಅಭಿಮನ್ಯುಕುಮಾರನು. ನನ್ನಿಂದ ಹೊಡೆಯಲ್ಪಟ್ಟ ಒಂದು ಜಿಂಕೆಯು ಇದೇ ಕಾಡಿನಲ್ಲ ಎಲ್ಲಿಯೋ ತಪ್ಪಿಸಿಕೊಂಡುಹೋಗಿದೆ. ನೀನೇನಾದರೂ ಅದನ್ನು ಕಂಡೆಯೇನು?” ಎಂದನು. ಕೇವಲ ಮೌನವ್ರತವಲ್ಲಿದ್ದ ಆ ಋಷಿಯು ಅದಕ್ಕೆ ಪ್ರತ್ಯುತ್ತರವನ್ನೇನೂ ಹೇಳದೆ ಸುಮ್ಮನಿರಲು, ಆಗಲೇ ರಾಜನಿಗೆ ಕೋಪವುಂಟಾಯಿತು. ಸಮೀಪದಲ್ಲಿ ಬಿದ್ದಿದ್ದ ಒಂದು ಸತ್ತ ಹಾವನ್ನು ತನ್ನ ಬಿಲ್ಲಿನ ಕೊನೆಯಿಂದ ಎತ್ತಿ, ಆ ಋಷಿಯ ಕಂಠಕ್ಕೆ ಮಾಲೆಯಂತೆ ತಗುಲಿಸಿದನು. ಇಷ್ಟಾದರೂ ಆ ಮಹರ್ಷಿಯು ಕೋಪಿಸದೆ ಆ ರಾಜನಿಗೆ ಒಳ್ಳೆಯದನ್ನಾಗಲಿ, ಕೆಟ್ಟುದನ್ನಾಗಲಿ ಯಾವುದನ್ನೂ ಹೇಳದೆ ತಾಳ್ಮೆಯನ್ನು ವಹಿಸಿದ್ದನು. ಅದನ್ನು ನೋಡಿದಮೇಲೆ ರಾಜನಿಗೆ ತಾನು ಮಾಡಿದುದು ತಪ್ಪೆಂದು ತೋರಿತು. ಅವನ ಹೆಮ್ಮೆಯೂ, ಕೋಪವೂ ಅಡಗಿಹೋಯಿತು. ಮನಸ್ಸಿನಲ್ಲಿ ಬಹಳ ಪಶ್ಚಾತ್ತಾಪದಿಂದ ದುಃಖಿಸುತ್ತ ತನ್ನ ನಗರಕ್ಕೆ ಹಿಂತಿರುಗಿದನು. ಕೇವಲ ಕ್ಷಮಾಶೀಲನಾದ ಆ ಋಷಿಯಾದರೋ ತನಗುಂಟಾದ ಭಂಗವನ್ನು ಮನಸ್ಸಿಗೂ ತಂದುಕೊಳ್ಳದೆ, ಆ ರಾಜನು ಒಳ್ಳೆಯ ಧರ್ಮದಿಂದ ನಡೆಯುತಕ್ಕ ಉತ್ತಮವಂಶದವನೆಂದು ತಿಳಿದು, ಅವನನ್ನು ಶಪಿಸದೆ ಸುಮ್ಮನಿದ್ದನು. ಪರೀಕ್ಷಿತ್ತಾದರೋ ಆ ಮಹರ್ಷಿಯ ಮಹಿಮೆಯನ್ನು ತಿಳಿಯದೆ ಬುದ್ಧಿಗೆಟ್ಟು, ಹೀಗೆ ಮಾಡಬಾರದ ಕಾರ್ಯವನ್ನು ಮಾಡಿಹೋದನು. ಆ ಮಹ

ರ್ಷಿಗೆ ಶಮೀಕನೆಂದು ಹೆಸರು. ಅವನಿಗೆ ಶೃಂಗಿಯೆಂಬ ನಡುಪ್ರಾಯದ ಮಗನೊಬ್ಬನಿದ್ದನು. ಆ ಕುಮಾರನು ಮಹಾ ತಪಸ್ವಿ! ತೀವ್ರತೇಜಸ್ಸುಳ್ಳವನು. ಅವನು ಬಹಳ ಸುಲಭಕೋಪವುಳ್ಳವನು. ಅವನಿಗೆ ಕೋಪವು ಬಂದಮೇಲೆ ಸಮಾಧಾನಕ್ಕೆ ತರುವುದೇ ಬಹಳ ಕಷ್ಟವು. ವ್ರತನಿಷ್ಠನಾದ ಆ ಶೃಂಗಿಯು, ಸಮಸ್ತ ಭೂತಗಳಿಗೂ, ಹಿತಕರನೂ, ಸರ್ವೋತ್ತಮ ಪದವಿಯಲ್ಲಿರತಕ್ಕವನೂ ಆದ *ಬ್ರಹ್ಮನಲ್ಲಿಗೆ ಆಗಾಗ ಸಾಕ್ಷಾತ್ತಾಗಿ ಹೋಗಿ ಅವನನ್ನು ಉಪಾಸಿಸಿ ಬರುತಿದ್ದನು. ಇತ್ತಲಾಗಿ ಪರೀಕ್ಷಿದ್ರಾಜನು ಹಿಂತಿರುಗಿ ಹೊರಟುಹೋದ ಕಾಲಕ್ಕೆ ಸರಿಯಾಗಿ, ಆ ಶೃಂಗಿಯೂ ಕೂಡ ಬ್ರಹ್ಮಲೋಕದಿಂದ ಹಿಂತಿರುಗಿ ತನ್ನ ಆಶ್ರಮಕ್ಕೆ ಬಂದನು. ಅವನು ಬಂದೊಡನೆಯೇ ಆಶ್ರಮದಲ್ಲಿ ಆಟವಾಡುತಿದ್ದ ಅವನ ಮಿತ್ರನಾದ ಕೃಶನೆಂಬ ಋಷಿಕುಮಾರನು, ಮೊದಲೇ ಕೋಪಸ್ವಭಾವವುಳ್ಳ ಮತ್ತು ವಿಷದಂತೆ ಕ್ರೂರನಾದ ಆ ಶೃಂಗಿಯನ್ನು ಕಂಡೊಡನೆ ಗಟ್ಟಿಯಾಗಿ ನಕ್ಕು ಬಿಟ್ಟನು. ಹೀಗೆ ನಕ್ಕು "ಓ ಶೃಂಗೀ! ನೀನು ಮಹಾ ತಪಸ್ವಿಯೆಂದೂ, ಮಹಾ ತೇಜಸ್ವಿಯೆಂದೂ ಹೇಳಿಕೊಳ್ಳುತ್ತಿರುವೆಯಲ್ಲವೆ? ಅದೋ! ಅಲ್ಲಿ ಹೋಗಿ ನಿನ್ನ ತಂದೆಯ ಅವಸ್ಥೆಯನ್ನು ನೋಡು. ಅವನು ಹೆಗಲಮೇಲೆ ಹೆಣವನ್ನು ಹೊತ್ತುಕೊಂಡಿರುವನು. ಇನ್ನಾದರೂ ನಿನ್ನ ಗರ್ವವನ್ನು ಬಿಡು. ಇನ್ನುಮೇಲೆ ನೀನು ತಪಸ್ಸಿದ್ಧರೂ, ಬ್ರಹ್ಮವಿತ್ತುಗಳೂ ಆದ ನಮ್ಮಂತಹ ಋಷಿಕುಮಾರರ ಮುಂದೆ ಬಾಯೆತ್ತುವುದಕ್ಕೇ ಯೋಗ್ಯನಲ್ಲ. ನಾವು ಮಾತಾಡುವಾಗ ನೀನು ಇನ್ನುಮೇಲೆ ನಾಲಗೆಯನ್ನು ಮುಚ್ಚಿಕೊಂಡು ಸುಮ್ಮನಿರಬೇಕು. ಹೆಣವನ್ನು ಹೊರುವ ತಂದೆಯನ್ನು ಕಣ್ಣಾರೆ ನೋಡುವ ನಿನ್ನಂತಹ ಪುತ್ರನಿಗೆ, ಇನ್ನೂ ಗಂಡುಸೆಂಬ ಅಹಂಕಾರವೇಕೆ? ಇನ್ನುಮೇಲೆ ನಿನ್ನ ಬಾಯಿಂದ ಅಹಂಕಾರದ ಮಾತುಗಳು ಬರಲು ಯೋಗ್ಯವಲ್ಲ. ಅಯ್ಯೋ! ಶೃಂಗೀ! ನಿನ್ನ ತಂದೆಯು ಎಂತಹ ಅಯೋಗ್ಯವಾದ ಕಾರ್ಯವನ್ನು ಮಾಡಿಕೊಂಡಿರುವನೋ ನೋಡಿಬಾ! ನಿಮ್ಮ ಸ್ಥಿತಿಗಾಗಿ ನಾನು ಬಹಳ ವ್ಯಸನಪಡಬೇಕಾಗಿದೆ" ಎಂದು ಆ

* ಇಲ್ಲಿ ಬ್ರಹ್ಮನೆಂದರೆ ಗುರುವೆಂದೂ ಅರ್ಥಾಂತರವನ್ನು ಹೇಳುವರು.

ಶೃಂಗಿಗೆ ಮಿತಿಮೀರಿದ ಕೋಪವುಂಟಾಗುವಹಾಗೆ ಅವನನ್ನು ವಿಧವಿಧವಾಗಿ ಹೇಳನಮಾಡಿ ರೇಗಿಸಿದನು.

ಇದು ನಾಲ್ವತ್ತನೆಯ ಅಧ್ಯಾಯವು.

ಪರೀಕ್ಷಿತ್ತಿಗೆ ಶೃಂಗಿಯ ಶಾಪವು.

ಈ ಹಾಸ್ಯವಾಕ್ಯವನ್ನು ಕೇಳಿದೊಡನೆ ಶೃಂಗಿಯ ಕೋಪವನ್ನು ಕೇಳಬೇಕೆ? ಮಿತಿಮೀರಿದ ಕೋಪವ್ಯಸನಗಳಿಂದ ಕುದಿಯುತ್ತ, ತನ್ನ ಮಿತ್ರನಾದ ಕೃಶನನ್ನು ನೋಡಿ, ಮೃದುವಾದ ಮಾತಿನಿಂದಲೇ ಹೀಗೆಂದು ಪ್ರಶ್ನೆಮಾಡುವನು. "ಮಿತ್ರಾ! ಇದೇನು ಹೀಗೆ ಹೇಳುವೆ? ನನ್ನ ತಂದೆಯಾದರೋ ಎಲ್ಲಾ ಪ್ರಾಣಿಗಳಿಗೂ ಸದಾ ಹಿತವನ್ನೇ ಕೋರತಕ್ಕವನು. ಬೇರೊಂದರ ಚಿಂತೆಯೇ ಇಲ್ಲದೆ ಯಾವಾಗಲೂ ದೇವದೇವೋತ್ತಮನಾದ ವಿಷ್ಣುವನ್ನೇ ಧ್ಯಾನಿಸುತ್ತ, ತಪಸ್ಸಿನಿಂದ ಅವನನ್ನು ಮೆಚ್ಚಿಸಿದವನು. ಕಾಡಿನಲ್ಲಿ ಆಯಾಕಾಲಕ್ಕೆ ದೊರೆತ ಆಹಾರವನ್ನು ಭುಜಿಸಿ, ಯಾವಾಗಲೂ ಮೌನವ್ರತವನ್ನೇ ಹಿಡಿದಿರತಕ್ಕವನು. ಹೀಗಿದ್ದುಕೊಂಡು ಬೇರೊಬ್ಬರ ಗೊಡವೆಗೆ ಹೋಗದಿರುವ ಮಹಾತೇಜಸ್ವಿಯಾದ ನನ್ನ ತಂದೆಯು ಮೃತಶರೀರವನ್ನು ಹೊರುವುದೆಂದರೇನು? ಅದರ ವಿವರವನ್ನು ನನಗೆ ಚೆನ್ನಾಗಿ ತಿಳಿಸು" ಎಂದನು.

ಅದಕ್ಕಾ ಕೃಶನು "ಮಿತ್ರಾ! ಕೇಳು! ಪರೀಕ್ಷಿತ್ತೆಂಬ ರಾಜನಂತೆ! ಅವನು ಬೇಟೆಗಾಗಿ ಬಂದು, ನಿನ್ನ ತಂದೆಯ ಕೊರಲಿಗೆ ಒಂದು ಸತ್ತ ಹಾವನ್ನು ತಗುಲುಹಾಕಿ ಹೋಗಿರುವನು" ಎಂದನು. ಆಗ ಶೃಂಗಿಯು "ಅಯ್ಯೋ! ಆ ದುರಾತ್ಮನಿಗೆ ನನ್ನ ತಂದೆಯು ಮಾಡಿದ ಅಪರಾಧವೇನು? ಅದೇನಾದರೂ ಇದ್ದರೆ ನಿಜಸ್ಥಿತಿಯನ್ನು ತಿಳಿಸು. ಹಾಗಿಲ್ಲದಿದ್ದರೆ ಕೃಶಾ! ಈಗ ನನ್ನ ತಪಸ್ಸಿನ ಬಲವನ್ನಾದರೂ ನೋಡು" ಎಂದನು. ಅದಕ್ಕಾ ಕೃಶನು "ಶೃಂಗೀ! ಅಂತದೇನೂ ಇಲ್ಲ! ಅಭಿಮನ್ಯುಕುಮಾರನಾದ ಆ ಪರಿಕ್ಷಿತ್ತು ಯಾವುದೋ ಒಂದು ಮೃಗಕ್ಕೆ ಗುರಿಯಿಟ್ಟು ಹೊಡೆದನಂತೆ!

ಅದು ತಪ್ಪಿಸಿಕೊಂಡುಹೋದುದರಿಂದ ಅದನ್ನು ಹುಡುಕುತ್ತ ನಮ್ಮ ವನದಕಡೆಗೆ ಬಂದನು. ಅವನಿಗೆ ಮೃಗವು ಕಣ್ಣಿಗೆ ಬೀಳಲಿಲ್ಲ. ನಿನ್ನ ತಂದೆಯು ಇಲ್ಲಿ ತಪಸ್ಸುಮಾಡುತ್ತ ಕುಳಿತಿದ್ದುದನ್ನು ಕಂಡನು. ಮೌನವ್ರತದಲ್ಲಿದ್ದ ನಿನ್ನ ತಂದೆಯನ್ನು ಆ ಮೃಗವು ಎಲ್ಲಿಹೋಯಿತೆಂದು ಕೇಳಿದನು. ನಿನ್ನ ತಂದೆಯು ಮಾತಾಡಲಿಲ್ಲ. ಆ ರಾಜನಿಗಾದರೋ ಕಾಡನ್ನೆಲ್ಲ ಸುತ್ತಿಸುತ್ತಿ ಸಾಕಾಗಿದ್ದಿತು. ಹಸಿವು ಬಾಯಾರಿಕೆಗಳಿಂದಲೂ, ಆಯಾಸದಿಂದಲೂ ಮೊದಲೇ ಬಹಳವಾಗಿ ಬೇಸರಗೊಂಡಿದ್ದ ಆ ರಾಜನಿಗೆ, ನಿನ್ನ ತಂದೆಯು ಪ್ರತ್ಯುತ್ತರವನ್ನೇನೂ ಹೇಳದೆ ಮೋಟುಮರದಂತೆ ಸುಮ್ಮನೆ ಕುಳಿತಿರುವುದನ್ನು ಕಂಡು ಕೋಪವುಂಟಾಯಿತು. ಬಾರಿಬಾರಿಗೂ ಅವನು ನಿನ್ನ ತಂದೆಯನ್ನು ಪ್ರಶ್ನೆಮಾತ್ರಲೇ ಇದ್ದನು. ಎಷ್ಟು ಕೇಳಿದರೂ ನಿನ್ನ ತಂ ತಂದೆಯು ಮೌನವ್ರತವನ್ನು ಬಿಡಲಾರದೆ ಸುಮ್ಮನಿರಲು, ಆ ರಾಜನಿಗೆ ಕೋಪವುಂಟಾಗಿ, ತನ್ನ ಧನುಸ್ಸಿನ ತುದಿಯಿಂದ ಸಮೀಪದಲ್ಲಿ ಬಿದ್ದಿದ್ದ ಒಂದು ಸತ್ತ ಹಾವನ್ನು ಎತ್ತಿ ನಿನ್ನ ತಂದೆಯ ಕೊರಲಿಗೆ ತಗುಲಿಸಿ ಹೋದನು. ಶೃಂಗೀ! ನಿನ್ನ ತಂದೆಯು ಅಷ್ಟಾದರೂ ಬಾಯೆತ್ತದೆ ಸಹಿಸಿಕೊಂಡು ಹಾಗೆಯೇ ಕುಳಿತಿದ್ದನ. ಈಗಲೂ ಅದೇ ಸ್ಥಿತಿಯಲ್ಲಿ ಕುಳಿತಿರುವನು. ಆ ರಾಜನಾದರೋ ಆಗಲೇ ತನ್ನ ಹಸ್ತಿನಾನಗರಕ್ಕೆ ಹೊರಟುಹೋದನು" ಎಂದನು.

ಶೌನಕಮುನೀಂದ್ರಾ! ಈ ವಿವರಗಳನ್ನೆಲ್ಲ ಕೇಳಿ ಶೃಂಗಿಗೆ ಸಹಿಸಲಾರದ ಕೋಪಾವೇಶವುಂಟಾಯಿತು. ಅವನ ಕಣ್ಣುಗಳು ಕೆಂಪೇರಿದುವು. ಕೋಪದಿಂದ ಜ್ವಲಿಸುವಂತೆ ತೋರುತ್ತ, ಒಡನೆಯೇ ಶುದ್ಧಾಚಮನವನ್ನು ಮಾಡಿ ಬಂದು ಹೀಗೆಂದು ರಾಜನನ್ನು ಶಪಿಸಿದನು.

"ಯಾವ ರಾಜಾಧಮನು, ಕೇವಲ ವೃದ್ಧನಾಗಿ ದೃಢವಾದ ಮೌನವ್ರತವನ್ನು ಹಿಡಿದು ತಪಸ್ಸಿನಲ್ಲಿ ಕಷ್ಟಪಡುತಿದ್ದ ನನ್ನ ತಂದೆಯ ಕೊರಲಿಗೆ ಸತ್ತಹಾವನ್ನು ಮಾಲೆಹಾಕಿ ಹೋದನೋ, ಆ ಪಾಪಿಯನ್ನು ಇನ್ನು ಏಳು ರಾತ್ರಿಗಳೊಳಗಾಗಿ ನನ್ನ ಶಾಪಬಲದಿಂದ ಪ್ರೇರಿತನಾದ ತೀಕ್ಷ್ಣವಿಷವುಳ್ಳ ತಕ್ಷಕನೆಂಬ ಪ್ರಬಲ ಸರ್ಪವು ಕಚ್ಚಿಕೊಲ್ಲಲಿ! ಬ್ರಾಹ್ಮಣರಿಗೆ

ಇಂತಹ ಅವಮಾನವನ್ನುಂಟುಮಾಡಿ, ಕೌರವಕುಲಕ್ಕೇ ಅಪಕೀರ್ತಿಯನ್ನು ತಂದ ಆ ಮಹಾಪಾಪಿಯು, ಸರ್ಪದಷ್ಟನಾಗಿಯೇ ಯಮಪುರಿಗೆ ಹೋಗಲಿ" ಎಂದನು

ಹೀಗೆ ಶೃಂಗಿಯು ಆ ವೃತ್ತಾಂತವನ್ನು ತಾನು ಕೇಳಿದ ಸ್ಥಳದಲ್ಲಿಯೇ ಶಾಪವನ್ನು ಕೊಟ್ಟು, ಆಮೇಲೆ ತಂದೆಯನ್ನು ನೋಡುವುದಕ್ಕೆ ಬಂದನು. ಅಲ್ಲಿ ತನ್ನ ತಂದೆಯು ವನದ ಕೊಟ್ಟಿಗೆಯಲ್ಲಿ ಕೇವಲಮೌನದಿಂದ ತಪಸ್ಸು ಮಾಡುತ್ತಾ ಕುಳಿತಿರುವುದನ್ನೂ, ಅವನ ಹೆಗಲಮೇಲೆ ನೇತುಹಾಕಿದ್ದ ಸತ್ತ ಹಾವನ್ನೂ ನೋಡಿದಾಗ, ಆ ಶೃಂಗಿಯು ಕ್ರೋಧಾವೇಶಕ್ಕೆ ಮೇರೆಯಿಲ್ಲದಂತಾಯಿತು. ವ್ಯಸನದಿಂದ ಅವನ ಕಣ್ಣುಗಳಲ್ಲಿ ದುಃಖಾಶ್ರುಗಳು ತುಳುಕಿಬಂದುವು. ಆಗ ಅವನು ತಂದೆಯನ್ನು ಕುರಿತು "ಜನಕಾ! ದುರಾತ್ಮನಾದ ಪರೀಕ್ಷಿತ್ತು ನಿನ್ನ ವಿಷಯದಲ್ಲಿ ಮಾಡಿದ ಈ ಅವಮಾನವನ್ನು ಕೇಳಿದೊಡನೆ ನಾನು ಕೋಪವನ್ನು ತಡೆಯಲಾರದೆ, ಅವನ ಮಹಾಪರಾಧಕ್ಕೆ ತಕ್ಕಂತೆ ಅವನಿಗೆ ಕ್ರೂರಶಾಪವನ್ನು ಕೊಟ್ಟಿರುವೆನು. ಇಲ್ಲಿಂದ ಏಳನೆಯ ದಿನದಲ್ಲಿ ಆ ಪಾಪಿಯು ತಕ್ಷಕನೆಂಬ ಮಹಾಸರ್ಪದಿಂದ ಕಚ್ಚಲ್ಪಟ್ಟು ಯಮಪುರಿಗೆ ಹೋಗುವನು. ಅವನಿಗೆ ತಕ್ಕ ಪ್ರತೀಕಾರವನ್ನು ಆಗಲೇ ನಾನು ಮಾಡಿಬಂದಿರುವೆನು" ಎಂದನು.

ಶೌನಕಮುನೀಂದ್ರಾ! ಹೀಗೆ ತಾನು ಮಾಡಿದ ಕಾರ್ಯವನ್ನು ತಂದೆಯು ಮೆಚ್ಚುವನೆಂದು ತಿಳಿದು, ಶೃಂಗಿಯು ಅದನ್ನು ಅವನ ಮುಂದೆ ಹೇಳಿಕೊಂಡೊಡನೆ, ತಂದೆಯು ಬಹಳ ವ್ಯಸನಪಟ್ಟು, ಕೋಪಾವಿಷ್ಟನಾದ ತನ್ನ ಮಗನನ್ನು ನೋಡಿ "ಕುಮಾರಾ! ಇದರಿಂದ ನೀನು ನನಗೆ ಪ್ರಿಯವನ್ನುಂಟುಮಾಡಿದೆಯೆಂದು ತಿಳಿಯಬೇಡ! ತಪಸ್ವಿಗಳಾದ ನಮಗೆ ಇದು ಧರ್ಮವೇ ಅಲ್ಲ! ನಾವು ಆ ರಾಜನ ಪ್ರಜೆಗಳು! ಆ ರಾಜನ ದೇಶದಲ್ಲಿ ವಾಸಮಾಡತಕ್ಕವರು. ಅವನು ನಮ್ಮನ್ನೆಲ್ಲ ನ್ಯಾಯದಿಂದಲೇ ಪರಿಪಾಲಿಸುತ್ತಿರುವನು. ಅವನಿಗೆ ನೀನು ಕೇಡನ್ನು ಬಯಸಿದುದು ನನಗೆ ಸರ್ವಥಾ ಸಮ್ಮತವಲ್ಲ. ಪುತ್ರಾ! ನಮ್ಮನ್ನಾಳತಕ್ಕ ರಾಜನು ಹೇಗೆ ನಡೆದುಕೊಂಡರೂ, ಅವನ್ನು ಸಹಿಸಿಕೊಳ್ಳಬೇಕಾದುದೇ ನಮ್ಮಂತವರಿಗೆ ಧರ್ಮವು.

ಧರ್ಮವನ್ನು ಕೆಡಿಸಿದರೆ ಅದು ನಮ್ಮನ್ನು ಕೆಡಿಸಿಬಿಡುವುದು. ಇದರಲ್ಲಿ ಸಂದೇಹವಿಲ್ಲ. ಕುಮಾರಾ! ನಮ್ಮನ್ನು ರಕ್ಷಿಸತಕ್ಕ ರಾಜನೊಬ್ಬನಿಲ್ಲದಿದ್ದರೆ ಅದರಿಂದ ನಮಗೆ ಎಷ್ಟೋ ಅನರ್ಥಗಳುಂಟು. ರಾಜನಿಲ್ಲದ ರಾಜ್ಯದಲ್ಲಿ ನಾವು ನಮ್ಮ ನಿತ್ಯಕರ್ಮಗಳನ್ನು ನೆಮ್ಮದಿಯಿಂದ ನಡೆಸಿಕೊಂಡಿರುವುದಕ್ಕೂ ಸಾಧ್ಯವಾಗದು ಧರ್ಮರತರಾದ ರಾಜರಿಂದ ರಕ್ಷಿತರಾಗಿಯೇ ನಾವೂ ಧರ್ಮವನ್ನು ನಡೆಸಬಲ್ಲವರಾಗುವೆವು. ನಮ್ಮ ಧರ್ಮಗಳಲ್ಲಿ ರಾಜರಿಗೂ ಭಾಗವುಂಟು. ರಾಜನು ಹೇಗೆ ನಡೆದರೂ ನಾವು ಮನ್ನಿಸಬೇಕಾದುದು ಧರ್ಮವು. ಅವರಲ್ಲಿಯೂ ಈಗ ನಮ್ಮನ್ನಾಳುತ್ತಿರುವ ಪರೀಕ್ಷಿದ್ರಾಜನು, ಅವನ ಮುತ್ತಾತನಾದ ಪಾಂಡುವಿನಂತೆಯೇ ಧರ್ಮದಿಂದ ನಮ್ಮನ್ನು ಪಾಲಿಸುತ್ತಿರುವನು. ಪ್ರಜಾರಕ್ಷಣವೇ ರಾಜಧರ್ಮವು. ಅರಾಜಕವಾದ ದೇಶದಲ್ಲಿ ಪ್ರಜೆಗಳು ಅಪಾರಕಷ್ಟಗಳಿಗೆ ಗುರಿಯಾಗುವರು. ಮೇರೆತಪ್ಪಿಹೋಗುವ ಜನರನ್ನು ರಾಜನು ದಂಡೋಪಾಯದಿಂದ ನಿಗ್ರಹಿಸಿ ನ್ಯಾಯವನ್ನು ನೆಲೆಗೊಳಿಸುವನು. ಜನರಿಗೆ ರಾಜಭಯವಿದ್ದಾಗಲೇ ದೇಶದಲ್ಲಿ ಶಾಂತಿಯು ನೆಲೆಗೊಂಡಿರುವುದು. ಮನಸ್ಸಿಗೆ ಶಾಂತಿಯಿಲ್ಲದವನು ಯಾವ ಧರ್ಮವನ್ನೂ ನಡೆಸಲಾರನು. ಯಾವ ಕಾರ್ಯವನ್ನೂ ಮಾಡಲಾರನು. ಆದುದರಿಂದ ಲೋಕದಲ್ಲಿ ಧರ್ಮವನ್ನು ನೆಲೆಗೊಳಿಸತಕ್ಕವನು ರಾಜನೇ! ಆ ಧರ್ಮದಿಂದಲೇ ಸ್ವರ್ಗವು ಸಾಧಿಸಲ್ಪಡುವುದು ಯಜ್ಞಾದಿಕಾರ್ಯಗಳೆಲ್ಲವೂ ರಾಜನಿಂದಲೇ ನೆಲೆಗೊಳಿಸಲ್ಪಡುವುವು. ಆ ಯಜ್ಞಗಳಿಂದ ದೇವತೆಗಳಿಗೂ ನೆಲೆಯು ಏರ್ಪಡುವುದು. ಅಂತಹ ದೇವತೆಗಳಿಂದ ವೃಷ್ಟಿಯುಂಟಾಗುವುದು. ಆ ವೃಷ್ಟಿಯಿಂದ ಭೂಮಿಯಲ್ಲಿ ಬೆಳೆಯಾಗುವುದು. ಆ ಬೆಳೆಯಿಂದ ಮನುಷ್ಯರಿಗೆ ಜೀವನವು ಲಭಿಸುವುದು. ಬೆಳೆಗಳಿಂದ ಯಾವಾಗಲೂ ಪ್ರಜೆಗಳನ್ನು ಕಾಪಾಡತಕ್ಕವನು ರಾಜನೇ! ಧರ್ಮದಿಂದ ಪ್ರಜೆಗಳನ್ನು ಪಾಲಿಸತಕ್ಕ ರಾಜನು ಹತ್ತುಮಂದಿ ಶ್ರೋತ್ರಿಯರಾದ ಬ್ರಾಹ್ಮಣರಿಗೆ ಸಮಾನನೆಂದು ಹಿಂದೆ ಮನುವಾಕ್ಯವುಂಟು. ಕುಮಾರಾ! ಆ ಪರೀಕ್ಷಿದ್ರಾಜನು ಬುದ್ಧಿಪೂರ್ವಕವಾಗಿ ಈ ಕಾರ್ಯವನ್ನು ಮಾಡಿದವನಲ್ಲವೆಂದು ನನಗೆ ತೋರುತ್ತಿದೆ. ಅವನು ಜಿಂಕೆಯನ್ನು ಹುಡುಕುತ್ತ ಬಹಳ ಆಯಾಸಪಟ್ಟು ಇಲ್ಲಿಗೆ ಬಂದಾಗ, ಹಸಿವುಬಾಯಾರಿಕೆ

ಗಳಿಂದ ವೈಮರೆತಿದ್ದನು. ಅಲ್ಲದೆ ನಾನು ಮೌನವ್ರತದಲ್ಲಿರುವ ಸಂಗತಿಯೂ ಅವನಿಗೆ ತಿಳಿಯದು. ಅದರಿಂದ ಅವನು ಹಾಗೆ ಮಾಡಿರಬೇಕು. ನೀನು ಮುಂದಾಲೋಚನೆಯಿಲ್ಲದೆ ಕೇವಲ ಹುಡುಗುತನದಿಂದ ಈ ಅಕಾರ್ಯವನ್ನು ಮಾಡಿದೆಯಲ್ಲಾ ? ಪುತ್ರಾ ! ಹೇಗೆ ನೋಡಿದರೂ ಆ ರಾಜನು ನಮ್ಮ ಶಾಪಕ್ಕೆ ಅರ್ಹನಲ್ಲವೆಂದೇ ನನಗೆ ತೋರುವುದು" ಎಂದನು.

ಇದು ನಾಲ್ವತ್ತೊಂದನೆಯ ಅಧ್ಯಾಯವು.



{ ಶಮೀಕನು ಗೌರಮುಖನೆಂಬ ಶಿಷ್ಯನ ಮೂಲಕವಾಗಿ ಪರೀಕ್ಷಿತ್ತಿಗೆ ತನ್ನ ಮಗನು ಕೊಟ್ಟ ಶಾಪವೃತ್ತಾಂತವನ್ನು ಹೇಳಿಕಳುಹಿಸಿದುದು. }

ಆಮೇಲೆ ಶೃಂಗಿಯು "ಜನಕಾ ! ಒಂದುವೇಳೆ ನಾನು ಇದನ್ನು ಮುಂದಾಲೋಚನೆಯಿಲ್ಲದೆ ಮಾಡಿದವನಾಗಿದ್ದರೂ, ಇದು ಪಾಪಕಾರ್ಯವೇ ಆಗಿದ್ದರೂ, ಇದು ನಿನಗೆ ಪ್ರಿಯವಾಗಿದ್ದರೂ ಅಥವಾ ಅಪ್ರಿಯವಾಗಿದ್ದರೂ, ನನ್ನ ಬಾಯಿಂದ ಹೊರಟ ಮಾತು ಸುಳ್ಳಾಗದು. ವ್ಯರ್ಥವೂ ಆಗಲಾರದು. ಜನಕಾ ! ವಾಸ್ತವವನ್ನು ಹೇಳುವೆನು. ನಾನು ಪರಿಹಾಸ್ಯಕ್ಕಾದರೂ ಅಸತ್ಯವನ್ನಾಡುವವನಲ್ಲ. ಹೀಗಿರುವಾಗ ಮನಃಪೂರ್ವಕವಾಗಿ ಶಾಪವನ್ನು ಕೊಟ್ಟಮೇಲೆ ಅದು ತಪ್ಪಿಹೋಗುವುದೆಂದರೇನು ?" ಎಂದನು. ಅದಕ್ಕಾ ಶಮೀಕನು "ಕುಮಾರಾ ! ನೀನು ಉಗ್ರಶಕ್ತಿಯುಳ್ಳವನೆಂದೂ, ಸತ್ಯವನ್ನೇ ನುಡಿಯತಕ್ಕವನೆಂದೂ ನಾನು ಚೆನ್ನಾಗಿ ಬಲ್ಲೆನು. ಈಗಲೂ ನಿನ್ನ ಮಾತು ಅಸತ್ಯವಾಗಲಾರದು. ಪುತ್ರನು ಒಳ್ಳೆಯ ವಯಸ್ಕನಾಗಿದ್ದರೂ ಅವನು ಗುಣವಂತನಾಗಿ ಒಳ್ಳೇ ಕೀರ್ತಿಯನ್ನು ಪಡೆಯುವುಕ್ಕೆ ತಕ್ಕಂತೆ ತಂದೆಯು ಅವನಿಗೆ ಹಿತವಾದಗಳನ್ನು ಯಾವಾಗಲೂ ಹೇಳುತ್ತಿರಬೇಕಾದುದವಶ್ಯವು. ನೀನಾದರೋ ಇನ್ನೂ ಬಾಲನಾಗಿಯೇ ಇರುವೆ. ತಪಸ್ಸಿನಿಂದ ನಿನ್ನ ಬುದ್ಧಿಯು ಪರಿಪಾಕವನ್ನೂ ಹೊಂ

ದುತ್ತಿರುವುದು. ನಿನ್ನಂತವನಿಗೆ ನಾನು ಬುದ್ಧಿವಾದಗಳನ್ನು ಹೇಳಬೇಕೆಂಬುದರಲ್ಲಿ ಸಂದೇಹವೇನಿದೆ?

ಶಕ್ತಿಯುಳ್ಳ ಮಹಾತ್ಮರಿಗೆ ಮೇಲೆಮೇಲೆ ಕೋಪವು ಹೆಚ್ಚುತ್ತಬಂದರೆ, ಅದರಿಂದ ಲೋಕಕ್ಕೇ ಹಾನಿಯುಂಟು. ಅಂತವರ ಕೋಪಕ್ಕೆ ತಾಳ್ಮೆಯೇ ಪರಿಹಾರವು. ಧರ್ಮವನ್ನು ತಿಳಿದವರಲ್ಲಿ ಮೇಲೆನಿಸಿಕೊಂಡ ಓ ಕುಮಾರಾ! ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಾಗಿಯೂ, ಇನ್ನೂ ಬಾಲನಾಗಿಯೂ, ಕೋಪಾತುರಪುಳ್ಳವನಾಗಿಯೂ ಇರುವುದರಿಂದ' ನಿನಗೆ ಹಿತವನ್ನು ಹೇಳುವುದು ಅವಶ್ಯವೆಂದೇ ನನಗೆ ತೋರಿತು. ನೀನು ಕೋಪವನ್ನು ಬಿಡಬೇಕು. ಶಾಂತಿಯನ್ನು ವಹಿಸಬೇಕು. ಕಾಡಿನಲ್ಲಿ ಸಿಕ್ಕುವ ಆಹಾರಗಳಿಂದಲೇ ದೇಹಧಾರಣವನ್ನು ಮಾಡುತ್ತ ಸಂಚರಿಸುತ್ತಿರಬೇಕು. ಹೀಗೆ ನಡೆಯುವುದರಿಂದ ನಿನಗೆ ಧರ್ಮವು ತಪ್ಪಲಾರದು. ವ್ರತನಿಷ್ಠರಾಗಿ ಎಷ್ಟೋ ಕಷ್ಟಪಟ್ಟು ಸಂಪಾದಿಸಿದ ದ್ರವ್ಯವನ್ನೆಲ್ಲ ಕೋಪವೆಂಬುದು ಕ್ಷಣಮಾತ್ರದಲ್ಲಿ ನಾಶಮಾಡಿ ಬಿಡುವುದು. ಆ ಪುಣ್ಯವನ್ನು ಕೆಡಿಸಿಕೊಂಡವರಿಗೆ ಸದ್ಗತಿಯೂ ಕೆಟ್ಟುಹೋಗುವುದು. ಶಾಂತಿಯುಳ್ಳ ಯತಿಗಳಿಗೆ ಮಾತ್ರವೇ ಅವರ ಇಂದ್ರಿಯಜಯದಿಂದ ಕಾರ್ಯಸಿದ್ಧಿಯಾಗುವುದು. ಇಹಪರಲೋಕಗಳೆರಡೂ ಶಾಂತಿಯುಳ್ಳವನಿಗೆ ಸಾಧ್ಯವು. ಆದುದರಿಂದ ನೀನು ಎಂತಹ ಸ್ಥಿತಿಯಲ್ಲಿಯೂ ಆ ತಾಳ್ಮೆಯನ್ನು ಬಿಡದೆ ಇಂದ್ರಿಯಗಳನ್ನಡಗಿಸಿ ನಡೆಯುತ್ತಿರಬೇಕು. ಶಾಂತಿಯಿಂದ ಬ್ರಹ್ಮನಿಗೆ ಸಮೀಪವಾದ ಲೋಕಗಳನ್ನೆಲ್ಲ ಪಡೆಯಬಹುದು. ನಾನುಕೂಡ ಈಗ ತಾಳ್ಮೆಯಿಂದಲೇ ಈ ಅನರ್ಥಕ್ಕೆ ಹೇಗೆ ಪರಿಹಾರವಾಗುವುದೋ ಅದನ್ನು ಮಾಡುವೆನು ಈಗಲೇ ನಾನು ಆ ರಾಜನಬಳಿಗೆ ನನ್ನ ಶಿಷ್ಯನೊಬ್ಬನನ್ನು ದೂತನನ್ನಾಗಿ ಮಾಡಿ, ಅವನಿಗೆ ಈ ಮಾತುಗಳನ್ನು ಹೇಳಿಕಳುಹಿಸುವೆನು. "ರಾಜೇಂದ್ರಾ! ನನ್ನ ಮಗನು ಇನ್ನೂ ಬುದ್ಧಿಪರಿಪಾಕವಿಲ್ಲದ ಬಾಲಕನು. ನಿನ್ನಿಂದ ನನಗುಂಟಾದ ತಿರಸ್ಕಾರವನ್ನು ನೋಡಿ ಸಹಿಸಲಾರದೆ ಅವನು ನಿನ್ನನ್ನು ಶಪಿಸಿಬಿಟ್ಟನು" ಎಂದು ಅವನಿಗೆ ಸಮಾಧಾನವನ್ನು

ಹೇಳುವೆನು" ಎಂದನು. ಹೀಗೆಂದು ಹೇಳಿ ಬಹಳ ದಯಾಶೀಲನಾದ ಆ ಶಮೀಕನು, ಗೌರಮುಖನೆಂಬ ಶಿಷ್ಯನನ್ನು ಕರೆದು ತಾನು ಹೇಳಿದಂತೆಯೇ ಆ ಪರೀಕ್ಷಿನ್ಮಹಾರಾಜನಿಗೆ ಕುಶಲಪ್ರಶ್ನಪೂರ್ವಕವಾಗಿ ಆ ಸಂದೇಶವನ್ನು ಹೇಳಿಕಳುಹಿಸಿದನು. ಬಹಳ ಶಾಂತಸ್ವಭಾವವುಳ್ಳ ಆ ಶಿಷ್ಯನು ಒಡನೆಯೇ ಹಸ್ತಿನಾವತಿಗೆ ಹೊರಟುಬಂದನು. ಮೊದಲು ದ್ವಾರಪಾಲಕರ ಮೂಲಕವಾಗಿ ತಾನು ಬಂದಿರುವ ಸಂಗತಿಯನ್ನು ಪರೀಕ್ಷಿದ್ರಾಜನಿಗೆ ಹೇಳಿಕಳುಹಿಸಿ, ಆಮೇಲೆ ಅವನ ಅನುಮತಿಯಿಂದ ರಾಜಭವನಕ್ಕೆ ಪ್ರವೇಶಿಸಿದನು. ಮಾರ್ಗಾಯಾಸದಿಂದ ಬಳಲಿ ಬಂದ ಆ ಮುನಿಶಿಷ್ಯನನ್ನು ರಾಜನು ಯಥೋಚಿತವಾಗಿ ಸತ್ಕರಿಸಿದನು. ಆಮೇಲೆ ಆ ತಾಪಸನು ಎಲ್ಲಾ ಮಂತ್ರಿಗಳ ಮುಂದೆ ತಾನು ಶಮೀಕನಿಂದ ತಂದ ಸಂದೇಶವನ್ನೂ, ಶೃಂಗಿಯು ಅವನಿಗೆ ಕೊಟ್ಟ ಘೋರಶಾಪವನ್ನೂ ಕ್ರಮವಾಗಿ ತಿಳಿಸುತ್ತ "ಓ ರಾಜೇಂದ್ರಾ! ನಿನ್ನ ದೇಶದಲ್ಲಿ ಶಮೀಕನೆಂಬ ಋಷಿಯೊಬ್ಬನಿರುವನು. ಅವನು ಬಹಳ ಧಾರ್ಮಿಕನು, ಶಾಂತನು, ದಾಂತನು, ಮಹಾತಪಸ್ವಿ. ಅವನು ಮೌನವ್ರತದಲ್ಲಿದ್ದಾಗ, ನೀನು ಅವನ ಕೊರಲಿಗೆ ಸತ್ತ ಹಾವನ್ನು ತಗುಲಿಸಿಬಂದೆ. ಆ ಮಹರ್ಷಿಯೇನೋ ಬಹಳ ಕ್ಷಮಾಶೀಲನಾದುದರಿಂದ, ಕೋಪಿಸದೆ ಸುಮ್ಮನಿದ್ದುಬಿಟ್ಟನು. ಆದರೆ ಅವನ ಮಗನು ಬಂದು ಅದನ್ನು ನೋಡಿದಮೇಲೆ ಆ ಅವಮಾನವನ್ನು ಸಹಿಸಲಾರದೆ, ಕೋಪದಿಂದ ನಿನಗೆ ಏಳುರಾತ್ರಿಗಳೊಳಗಾಗಿ ತಕ್ಷಕನೆಂಬ ಸರ್ಪವೇ ಮೃತ್ಯುವಾಗಲೆಂದು ಶಪಿಸಿರುವನು. ಅವನು ತನ್ನ ತಂದೆಗೆ ತಿಳಿಯದಂತೆಯೇ ಈ ಶಾಪವನ್ನು ಕೊಟ್ಟುಬಿಟ್ಟನು. ಈ ವಿಷಯದಲ್ಲಿ ಮುಂದೆ ನೀನು ತಕ್ಕ ರಕ್ಷಣೆಯನ್ನು ಮಾಡಿಕೊಳ್ಳುವಂತೆ ನಮ್ಮ ಗುರುವಾದ ಶಮೀಕನು ನಿನಗೆ ಬಾರಿಬಾರಿಗೂ ಎಚ್ಚರಿಸುವಂತೆ ಹೇಳಿಕಳುಹಿಸಿದನು. ಆ ಶಾಪವನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವಲ್ಲ. ಕುಪಿತನಾದ ತನ್ನ ಪುತ್ರನನ್ನು ತಂದೆಯೇ ಶಾಂತಿಗೊಳಿಸಲಾರದೆ ಹೋದನು. ಕೊನೆಗೆ ಶಮೀಕನು ನಿನ್ನ ಕ್ಷೇಮವನ್ನು ಕೋರಿ ನನ್ನನ್ನು ಇಲ್ಲಿಗೆ ಕಳುಹಿಸುವನು" ಎಂದನು

ಗೌರಮುಖನು ಹೇಳಿದ ಈ ವೃತ್ತಾಂತವನ್ನು ಕೇಳಿದೊಡನೆ ಪರೀಕ್ಷಿತ್ತಿಗೆ ಹೃದಯವು ತಲ್ಲಣಿಸಿಹೋಯಿತು. ಧರ್ಮಾತ್ಮನೂ, ತಪಸ್ವಿಯೂ ಆದ ಆ ಕುರುರಾಜನು, ತನ್ನಮೇಲೆ ಬಿದ್ದ ಘೋರಶಾಪವನ್ನು ಕೇಳಿದುದಕ್ಕಿಂತಲೂ, ತಾನು ಮಹರ್ಷಿಯಲ್ಲಿ ಮಾಡಿದ ಮಹಾಪರಾಧವನ್ನು ಕುರಿತು ಬಹಳವಾಗಿ ತಪಿಸಿದನು. ಕಾಡಿನಲ್ಲಿ ವನದ ಕೊಟ್ಟಿಗೆಯಲ್ಲಿ ಕಣ್ಣುಮುಚ್ಚಿ ಕುಳಿತಿದ್ದ ಆ ಬ್ರಾಹ್ಮಣನು ಮಹಾತಪಸ್ವಿಯೆಂದೂ, ಮೌನವ್ರತದಲ್ಲಿದ್ದವನೆಂದೂ ತಿಳಿದಮೇಲೆ, ಆ ರಾಜನು ಹೃದಯದಲ್ಲಿ ಬಹಳವಾಗಿ ಪರಿತಾಪಗೊಂಡನು. ಇದರಮೇಲೆ ತಾನು ಅಂತಹ ಅವಮಾನವನ್ನು ಮಾಡಿದಾಗಲೂ, ತನ್ನಲ್ಲಿ ಕೋಪಿಸದೆ ಸುಮ್ಮನಿದ್ದ ಆ ಶಮೀಕ ಮುನಿಯ ದಯಾಸ್ವಭಾವವನ್ನು ನೆನೆಸಿಕೊಂಡು, ಮನಸ್ಸಿನಲ್ಲಿ ಬಹಳವಾಗಿ ವ್ಯಥೆಗೊಂಡನು. ದೇವಸಮಾನನಾದ ಆ ರಾಜನು ತನ್ನ ಪಾಪಕೃತ್ಯಕ್ಕಾಗಿ ಹೆದರಿದಷ್ಟು ತನ್ನ ಮರಣಕ್ಕಾದರೂ ಹೆದರಲಿಲ್ಲ. ಆಗ ರಾಜನು ಆ ಮುನಿಶಿಷ್ಯನನ್ನು ಕುರಿತು “ಓ ತಾಪಸೋತ್ತಮಾ! ನಾನೇನೋ ನಿಮ್ಮ ಗುರುವಿನಲ್ಲಿ ಮಹಾಪರಾಧಿಯಾದೆನು. ಮಹಾತ್ಮನಾದ ಶಮೀಕನು ಇನ್ನುಮೇಲಾದರೂ ನನ್ನಲ್ಲಿ ಪ್ರಸನ್ನನಾಗಬೇಕೆಂದು ಬೇಡಿಕೊಳ್ಳುವೆನು” ಎಂದು ಹೇಳಿ, ಆ ಗೌರಮುಖನನ್ನು ಕಳುಹಿಸಿಬಿಟ್ಟನು. ಗೌರಮುಖನೂ ಹಿಂತಿರುಗಿ ಆಶ್ರಮಕ್ಕೆ ಹೊರಟುಹೋದನು.

ಅತ್ತಲಾಗಿ ಗೌರಮುಖನು ಪ್ರಯಾಣಮಾಡಿದ ಕೂಡಲೆ, ಇತ್ತಲಾಗಿ ಪರೀಕ್ಷಿತ್ತು ಮನಸ್ಸಿನಲ್ಲಿ ನೆಮ್ಮದಿಯಿಲ್ಲದೆ, ಮಂತ್ರಿಗಳೆಲ್ಲರನ್ನೂ ಕರೆಸಿಕೊಂಡು ಆಲೋಚಿಸತೊಡಗಿದನು. ಆ ರಾಜನು ಸ್ವತಃ ಮಂತ್ರಾಲೋಚನೆಯಲ್ಲಿ ನಿಪುಣನು. ಅದರಮೇಲೆ ಮಂತ್ರಿಗಳೊಡನೆಯೂ ಕಲೆತು ಆಲೋಚಿಸಿ, ಮುಂದೆ ತನಗೆ ಸರ್ಪಭಯವಿಲ್ಲದಂತೆ ಅನೇಕವಿಧವಾದ ಉಪಾಯಗಳನ್ನೆಲ್ಲ ನಿಶ್ಚಯಿಸಿಕೊಂಡನು. ಅಲ್ಲಲ್ಲಿ ಸಂದುಗೊಂದುಗಳಿಲ್ಲದೆ ಒಂದೇ ಸ್ತಂಭವುಳ್ಳುದಾಗಿ, ಸುರಕ್ಷಿತವಾದ ಒಂದು ಉಪ್ಪರಿಗೆಯ ಮನೆಯನ್ನು ಕಟ್ಟಿಸಿದನು. ಅದರ ಸುತ್ತಲೂ ಕಾವಲುಗಳನ್ನಿರಿಸಿದನು. ಸಮರ್ಥರಾದ ಅನೇಕವೈದ್ಯರನ್ನೂ ಔಷಧಗಳನ್ನೂ ತರಿಸಿಟ್ಟನು. ಮಂ

ಪ್ರಸಿದ್ಧಿಯುಳ್ಳ ಅನೇಕಬ್ರಾಹ್ಮಣರನ್ನು ಸದಾ ತನ್ನ ಸಮಾಪದಲ್ಲಿ ಸುತ್ತ ಲೂ ಇರುವಂತೆ ನಿಯಮಿಸಿದನು. ಹೀಗೆ ನಾಲ್ಕು ಪಕ್ಕಗಳನ್ನೂ ಸುರಕ್ಷಿತ ವಾಗಿ ಮಾಡಿಕೊಂಡು, ತಾನಿದ್ದಲ್ಲಿಗೇ ಮಂತ್ರಿಗಳನ್ನು ಕರೆಸಿಕೊಂಡು ಎಲ್ಲಾ ರಾಜಕಾರ್ಯಗಳನ್ನೂ ನಡೆಸಲಾರಂಭಿಸಿದನು. ಯಾರಿಗೂ ಆ ರಾಜ ನಲ್ಲಿಗೆ ಹೋಗಲು ಅವಕಾಶವಿರಲಿಲ್ಲ. ಅಷ್ಟೇಕೆ? ಅಲ್ಲಿಂದ ಹೊರಗೆ ಬಂದ ಗಾಳಿಯುಕೂಡ ತಿರುಗಿ ಒಳಕ್ಕೆ ಪ್ರವೇಶಿಸಲು ಅವಕಾಶವಿಲ್ಲದಂತೆ ನಿರ್ಬಂಧಗಳಿದ್ದುವು. ಹೀಗೆಯೇ ಏಳು ದಿನಗಳು ಕಳೆದುಹೋದರೆ ಆಮೇಲೆ ಶಾಪಭಯವಿಲ್ಲವೆಂಬ ಭರವಸವಿದ್ದಿತು. ಹಾಗೆಯೇ ಆರು ದಿನಗಳು ಕಳೆ ದುವು. ಏಳನೆಯ ದಿನವೂ ಪ್ರಾಪ್ತವಾಯಿತು. ಇಷ್ಟರಲ್ಲಿ ಮಂತ್ರಚಿಕಿ ತ್ಸೆಯಲ್ಲಿ ನಿಪುಣನಾದ ಕಾಶ್ಯಪನೆಂಬ ಬ್ರಾಹ್ಮಣನೊಬ್ಬನು, ಪರೀಕ್ಷಿದ್ರಾಜ ನಿಗೆ ತಕ್ಷಕನಿಂದ ಮರಣವುಂಟಾಗುವ ಸಂಭವವುಂಟೆಂದೂ, ಅದಕ್ಕಾಗಿ ಅನೇಕ ಮಂತ್ರವಾದಿಗಳನ್ನು ಅವನು ಕರೆಸಿಟ್ಟುಕೊಂಡಿರುವನೆಂದೂ ಕೇಳಿ, ತಾನೂ ಆ ರಾಜನಿಗೆ ಚಿಕಿತ್ಸೆಮಾಡುವ ಉದ್ದೇಶದಿಂದ ಹೊರಟುಬರುತಿ ದ್ದನು. ಅವನು ಬರುವಾಗ ತನ್ನಲ್ಲಿ ತಾನು "ಸರ್ಪರಾಜನಾದ ತಕ್ಷಕ ನಿಂದ ಆ ರಾಜನಿಗೆ ಮರಣವಂತೆ! ಇರಲಿ! ಆ ತಕ್ಷಕನು ಕಚ್ಚಿದೊಡನೆ ನಾನು ನನ್ನ ಮಂತ್ರಬಲದಿಂದ ಆ ವಿಷವನ್ನಿಳಿಸಿ, ಆ ರಾಜನಿಂದ ನಾನು ವಿಶೇಷವಾಗಿ ಧನವನ್ನು ಬಹುಮಾನವಾಗಿ ಪಡೆಯುವೆನು. ಇದರಿಂದ ನನಗೆ ಅಪಾರಧನವು ಮಾತ್ರವಲ್ಲದೆ, ಧರ್ಮವೂ ದೊರೆಯುವುದು" ಎಂದು ಮನಸ್ಸಿನಲ್ಲಿ ಗುಣಿಸಿಕೊಳ್ಳುತ್ತ, ಆತುರದಿಂದ ಬರುತ್ತಿರುವಾಗ, ದಾರಿಯಲ್ಲಿ ಪರೀಕ್ಷಿತ್ತನ್ನು ಕಚ್ಚುವುದಕ್ಕಾಗಿ ಕಾಲವನ್ನು ನಿರೀಕ್ಷಿಸುತಿದ್ದ ತಕ್ಷಕನು ಆ ಬ್ರಾಹ್ಮಣನನ್ನು ಕಂಡನು ಒಡನೆಯೇ ತಕ್ಷಕನು ಬಹಳ ವೃದ್ಧನಾದ ಬ್ರಾಹ್ಮಣನ ರೂಪದಿಂದ ಆ ಕಾಶ್ಯಪನಿಗೆ ಕಾಣಿಸಿಕೊಂಡು "ವಿಪ್ರೋತ್ತ ಮಾ! ನಿಮ್ಮ ಪ್ರಯಾಣವೆಲ್ಲಿಗೆ? ಇಷ್ಟು ಆತುರದಿಂದ ಹೋಗುವ ಕಾರ್ಯ ವೇನು?" ಎಂದನು. ಅದಕ್ಕಾ ಕಾಶ್ಯಪನು "ಓ ವೃದ್ಧಬ್ರಾಹ್ಮಣಾ! ನಿನಗೆ ತಿಳಿಯದೇನು? ಈ ದಿನವೇ ತಕ್ಷಕನೆಂಬ ಸರ್ಪವು ಪರೀಕ್ಷಿದ್ರಾಜ ನನ್ನು ತನ್ನ ವಿಷಾಗ್ನಿಯಿಂದ ದಹಿಸಿ ಕೊಲ್ಲುವನಂತೆ! ಆ ರಾಜನಾದರೋ ಪರಮ ಧರ್ಮಾತ್ಮನು. ಪಾಂಡವಕುಲ ವರ್ಧಕನು. ಅಮಿತ ತೇಜಸ್ಸು

ಳ್ಳುವನು. ಅವನನ್ನು ಈ ಅನರ್ಥದಿಂದ ತಪ್ಪಿಸುವುದಕ್ಕಾಗಿ ನಾನು ಹೋಗುವೆನು. ತಕ್ಷಕನು ಕಚ್ಚಿದೊಡನೆ ನಾನು ನನ್ನ ಮಂತ್ರಬಲದಿಂದ ಆ ವಿಷವನ್ನಿಳಿಸಿ, ಅವನಿಗೆ ಅನರ್ಥವನ್ನು ತಪ್ಪಿಸುವುದಕ್ಕಾಗಿ ಹೋಗುವೆನು. ನಾನು ವಿಷವೈದ್ಯವನ್ನು ಚೆನ್ನಾಗಿ ಬಲ್ಲ ಬ್ರಾಹ್ಮಣನು. ಆ ಕಾರ್ಯದಲ್ಲಿ ನನಗೆ ಲೋಕದಲ್ಲೆಲ್ಲ ಪ್ರಖ್ಯಾತಿಯುಂಟು. ನಮ್ಮ ಗುರುವಿನ ಕಟಾಕ್ಷದಿಂದ ನನಗೆ ವಿಷವನ್ನು ನಿವಾರಿಸತಕ್ಕ ಮಂತ್ರಶಕ್ತಿಯು ಚೆನ್ನಾಗಿ ಫಲಿಸಿದೆ" ಎಂದನು.

ಆಗ ತಕ್ಷಕನು "ಓ ಬ್ರಾಹ್ಮಣಾ! ನಾನೇ ಆ ತಕ್ಷಕನು. ಆ ರಾಜನನ್ನು ಕೊಲ್ಲುವುದಕ್ಕಾಗಿಯೇ ಹೋಗುತ್ತಿರುವೆನು. ನಾನು ಕಚ್ಚಿದ ಮನುಷ್ಯನನ್ನು ನೀನು ಬದುಕಿಸುವುದು ಸುಳ್ಳು! ಅದು ನಿನ್ನಿಂದ ಸಾಧ್ಯವಲ್ಲ! ನನ್ನ ವಿಷಕ್ಕೆ ನೀನು ಚಿಕಿತ್ಸೆ ಮಾಡಲಾರೆ! ಹಿಂತಿರುಗಿ ಹೋಗು" ಎನಲು, ಅದಕ್ಕಾ ಕಾಶ್ಯಪನು "ಓ ತಕ್ಷಕಾ! ನನ್ನ ಶಕ್ತಿಯಲ್ಲಿ ನನಗೆ ಭರವಸೆಯುಂಟು. ನೀನು ಹೋಗಿ ಆ ರಾಜನನ್ನು ಕಚ್ಚು! ಆಮೇಲೆ ನಾನು ಚಿಕಿತ್ಸೆಮಾಡಿ, ಅವನಿಗೇನೂ ಬಾಧೆಯಿಲ್ಲದಂತೆ ಮಾಡುವೆನು. ಇದು ನನ್ನ ದೃಢವಾದ ನಂಬಿಕೆ!" ಎಂದನು.

ಇದು ನಾಲ್ವತ್ತೆರಡನೆಯ ಅಧ್ಯಾಯವು.

---

ತಕ್ಷಕನು ಆ ಕಾಶ್ಯಪನ ಮಂತ್ರಶಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಒಂದು ಆಲದ ಮರವನ್ನು ಕಡಿದು ಬೂದಿಮಾಡಿದುದು. ಕಾಶ್ಯಪನು ತನ್ನ ಮಂತ್ರಶಕ್ತಿಯಿಂದ ಆ ಬೂದಿಯನ್ನು ತಿರುಗಿ ಮರವಾಗುವಂತೆ ಮಾಡಲು, ತಕ್ಷಕನು ಆ ಬ್ರಾಹ್ಮಣನಿಗೆ ಕೋರಿದಷ್ಟು ಧನವನ್ನು ಕೊಟ್ಟು ಹಿಂತಿರುಗಿಸಿ, ತಾನು ಹೋಗಿ ಪರೀಕ್ಷಿತ್ತನ್ನು ಕಚ್ಚಿದುದು.

ಆಗ ತಕ್ಷಕನು "ಬ್ರಾಹ್ಮಣಾ! ನಾನು ಕಡಿದುದನ್ನು ಬದುಕಿಸುವ ಶಕ್ತಿಯು ನಿನಗಿರುವುದಾದರೆ ಇದೋ! ಈ ಆಲದ ಮರವನ್ನು ಕಚ್ಚು

ವೆನು. ಇದನ್ನು ಬದುಕಿಸು ನೋಡುವೆನು. ಆ ನಿನ್ನ ಮಂತ್ರಶಕ್ತಿಯು ಎಷ್ಟಿದೆಯೋ ಅದನ್ನೆಲ್ಲ ತೋರಿಸು! ನಿನ್ನಿಂದಾದಷ್ಟು ಪ್ರಯತ್ನಪಡು. ಬ್ರಾಹ್ಮಣಾ! ನೀನು ಕಣ್ಣೆದಿರಿಗೆ ನೋಡುತ್ತಿರುವಾಗಲೇ ಈ ಮರವನ್ನು ನಾನು ಉರಿಸಿಬಿಡುವೆನು ನೋಡು" ಎಂದನು. ಈ ಹೆಮ್ಮೆಯ ಮಾತನ್ನು ಕೇಳಿ ಕಾಶ್ಯಪನಿಗೂ ರೇಗಿತು. ಆಗ ಅವನು "ತಕ್ಷಕಾ! ನಿನಗೆ ಅಷ್ಟು ಅಹಂಕಾರವಿದ್ದಪಕ್ಷದಲ್ಲಿ ಸರಿ! ಆ ಮರವನ್ನು ಕಚ್ಚು. ನಾನು ಅದನ್ನು ತಿರುಗಿ ಚಿಗುರಿಸುವೆನು. ನನ್ನ ಮಂತ್ರವನ್ನಾದರೂ ನೋಡು" ಎಂದನು. ಒಡನೆಯೇ ತಕ್ಷಕನು ಆ ಮರದ ಬಳಿಗೆ ಹೋಗಿ ಹಲ್ಲಿನಿಂದ ಕುಕ್ಕಲು, ಆ ಮರಕ್ಕೆ ವಿಷವೇರಿ, ಅದರಿಂದ ಅಗ್ನಿಯೊಂದು ಹುಟ್ಟಿತು. ನಾಲ್ಕು ಕಡೆಗೂ ಜ್ವಾಲೆಗಳು ಕೆದರಿ, ಆ ಮರವು ಕ್ಷಣಮಾತ್ರದಲ್ಲಿ ಉರಿದು ಭಸ್ಮರಾಶಿಯಾಗಿ ಬಿದ್ದಿತು. ಆಮೇಲೆ ತಕ್ಷಕನು "ಬ್ರಾಹ್ಮಣೋತ್ತಮಾ! ನಿನ್ನಿಂದಾದಷ್ಟು ಪ್ರಯತ್ನಮಾಡಿ ಈ ಮರವನ್ನು ಬದುಕಿಸು" ಎನಲು, ಆಗ ಕಶ್ಯಪನು ಆ ಮರದ ಬೂದಿಯನ್ನೆಲ್ಲ ಒಂದುಕಡೆ ರಾಶಿಯನ್ನಾಗಿ ಮಾಡಿಟ್ಟು ತಕ್ಷಕನನ್ನು ಕುರಿತು "ನಾಗೇಂದ್ರಾ! ನನ್ನ ವಿದ್ಯಾಬಲವನ್ನು ಈ ಮರದಲ್ಲಿಯೇ ನೀನು ಕಾಣಬಹುದು. ನಿನ್ನ ಕಣ್ಣೆದಿರಾಗಿಯೇ ನಾನು ಈ ಭಸ್ಮರಾಶಿಯನ್ನು ಚಿಗುರಿಸಿ ಮೊದಲಿನಂತೆ ಮರವಾಗಿ ಮಾಡುವೆನು" ಎಂದು ಹೇಳಿ ಮಂತ್ರಿಸಲಾರಂಭಿಸಿದನು. ಕೂಡಲೇ ಬೂದಿಯನಡುವೆ ಮೊದಲು ಒಂದು ಮೊಳಕೆಯೆದ್ದಿತು. ಆಮೇಲೆ ದೊಡ್ಡದೊಡ್ಡ ಎಲೆಗಳಿಂದ ತುಂಬಿದ ಅನೇಕಶಾಖೆಗಳು ಕಾಣಿಸಿದುವು. ಕೊನೆಗೆ ಮೊದಲಿದ್ದ ಸ್ಥಿತಿಯಲ್ಲಿಯೇ ಅದು ದೊಡ್ಡ ಮರವಾಗಿ ನಿಂತಿತು. ಹೀಗೆ ಕಾಶ್ಯಪನು ತಿರುಗಿ ಆ ಮರವನ್ನು ಬದುಕಿಸಿದುದನ್ನು ನೋಡಿ ತಕ್ಷಕನಿಗೆ ಆಶ್ಚರ್ಯವಾಯಿತು. ಆಗ ಅವನು ಬ್ರಾಹ್ಮಣನನ್ನು ನೋಡಿ "ಓ ಬ್ರಾಹ್ಮಣೋತ್ತಮಾ! ನೀನು ಹೇಳಿದುದು ನಿಜವೇ! ನನ್ನಂತಹ ಮಹಾಸರ್ಪಗಳ ವಿಷವನ್ನಾದರೂ ನೀನು ನೀಗಸಬಲ್ಲೆಯೆಂಬುದರಲ್ಲಿ ಸಂದೇಹವಿಲ್ಲ. ನಿನ್ನ ಮಂತ್ರಶಕ್ತಿಯು ಅದ್ಭುತವಾದುದು. ಬ್ರಾಹ್ಮಣಾ! ಆದರೆ ನೀನು ಆ ರಾಜನಲ್ಲಿಗೆ ಹೋಗುವ ಉದ್ದೇಶವೇನೋ ಅದನ್ನು ತಿಳಿಸು. ಅವನಿಂದ ನೀನು ಕೋರುವ ಪ್ರಯೋಜನವನ್ನು ಇಲ್ಲಿ ನಾನೇ

ಕೊಡುವೆನು. ಅದು ಎಷ್ಟೇ ದುರ್ಲಭವಾಗಿದ್ದುದಾದರೂ ನಾನು ಕೊಡ ಬಲ್ಲೆನು. ಅದಕ್ಕಾಗಿ ನೀನು ಅಲ್ಲಿಗೆ ಹೋಗಬೇಕಾಗಿಲ್ಲ. ಅಲ್ಲದೆ ಮ ತ್ತೊಂದು ವಿಷಯವನ್ನು ನೀನು ಆಲೋಚಿಸಿ ನೋಡು. ಆ ಪರೀಕ್ಷಿದ್ರಾ ಜನಾದರೋ ಬ್ರಾಹ್ಮಣಶಾಪಕ್ಕೀಡಾದವನು. ಆ ಶಾಪದಿಂದ ಅವನಿಗೆ ಅಷ್ಟರಲ್ಲಿಯೇ ಆಯುಸ್ಸು ತೀರಬೇಕಾಗಿದೆ. ಅಂತವನ ವಿಷಯದಲ್ಲಿ ನೀ ನು ಎಷ್ಟೇ ಹಟವಮಾಡಿ ಪ್ರಯತ್ನಪಟ್ಟರೂ ಅವನನ್ನು ನೀನು ಬದುಕಿಸಿ ಕೊಳ್ಳಲಾರೆ. ಅಲ್ಲಿ ನಿನ್ನ ಇಷ್ಟಸಿದ್ಧಿಯಾಗುವುದೂ ಸಂದೇಹವೇ. ನಿನ್ನ ಮಂತ್ರಶಕ್ತಿಯು ಅಲ್ಲಿ ವಿಫಲವಾಗಿ ಹೋದರೆ, ನಿನಗೆ ಇದುವರೆಗೆ ಬಂದಿರುವ ಕೀರ್ತಿಯೂ ಕೂಡ ಕಿರಣವಿಲ್ಲದ ಸೂರ್ಯನಂತೆ ಮಾಸಿ ಹೋಗುವುದು. ಹೀಗೆ ಉಭಯಭ್ರಷ್ಟನಾಗಿ ನೀನು ಹಿಂತಿರುಗಬೇಕಾಗು ವುದು. ನನ್ನಿಂದಾದರೋ ಇಲ್ಲಿ ನಿನಗೆ ಧನವಾದರೂ ನಿಶ್ಚಯವಾಗಿ ಸಿಕ್ಕು ವುದು. ಯೋಚಿಸಿ ನೋಡು" ಎಂದನು. ಅದಕ್ಕಾ ಬ್ರಾಹ್ಮಣನು "ಓ ಸರ್ಪರಾಜಾ! ನಾನು ಅಲ್ಲಿಗೆ ಹೋಗುವುದು ಕೇವಲ ಧನದಾಸೆಯಿಂದಲೇ! ಅದನ್ನು ನೀನು ಇಲ್ಲಿಯೇ ಕೊಡುವುದಾದರೆ ನಾನು ಹೀಗೆಯೇ ಹಿಂತಿರು ಗುವೆನು" ಎಂದನು.

ಅದಕ್ಕಾ ತಕ್ಷಕನು "ಬ್ರಾಹ್ಮಣೋತ್ತಮಾ! ನೀನು ಆ ರಾಜನಿಂದ ನಿರೀಕ್ಷಿಸುವ ಧನಕ್ಕಿಂತಲೂ ಹೆಚ್ಚಾಗಿಯೇ ನಾನು ಕೊಡುವೆನು. ಹಿಂತಿ ರುಗು" ಎಂದನು. ಆಗ ಮಹಾಧೀಮಂತನಾದ ಕಾಶ್ಯಪನು, ತನ್ನಲ್ಲಿ ತಾನೇ ಸ್ವಲ್ಪಹೊತ್ತು ಆಲೋಚಿಸಿ, ಪರೀಕ್ಷಿತ್ತಿಗೆ ಅಂದಿಗೆ ಆಯುಃಕಾಲವು ತೀರಿದುದನ್ನೂ ನೆನೆಸಿಕೊಂಡು, ತನಗೆ ಬೇಕಾದಷ್ಟು ಧನವನ್ನು ತಕ್ಷಕ ನಿಂದಲೇ ಪಡೆದು ಹಿಂತಿರುಗಿಬಿಟ್ಟನು. ಆಮೇಲೆ ತಕ್ಷಕನು ಅತ್ಯುತ್ಸಾಹ ದಿಂದ ಹಸ್ತಿನಾವತಿಗೆ ಬಂದು ಸೇರಿದನು.

ಅಲ್ಲಿ ರಾಜನು, ಸರ್ಪಗಳು ಬಾರದಂತೆ ತಡೆಗಟ್ಟತಕ್ಕ ಅನೇಕವಿಷ ವೈದ್ಯರನ್ನೂ, ಮಂತ್ರವಾದಿಗಳನ್ನೂ, ತನ್ನ ಬಳಿಯಲ್ಲಿಟ್ಟುಕೊಂಡು ಅವರೆಲ್ಲ ರಿಂದ ಬಹಳ ಪ್ರಯತ್ನಪೂರ್ವಕವಾಗಿ ರಕ್ಷಿಸಲ್ಪಡುತ್ತಿರುವನೆಂಬ ಸಂಗತಿ ಯು ಆ ತಕ್ಷಕನ ಕಿವಿಗೆ ಬಿದ್ದಿತು. ಆಗ ಅವನು ತನ್ನಲ್ಲಿ ತಾನು "ರಾಜ

ನನ್ನು ಏನಾದರೂ ಒಂದು ಕಪಟಪ್ರಯೋಗದಿಂದ ಈಗ ನಾನು ಮೋಸ ಗೊಳಿಸಬೇಕು. ಇದಕ್ಕುಪಾಯವೇನು ?" ಎಂದಾಲೋಚಿಸಿ, ಕೊನೆಗೆ ತನ್ನ ಪರಿವಾರಗಳಾದ ಕೆಲವು ಸರ್ಪಗಳನ್ನು ಕರೆದು ಹೀಗೆಂದು ಹೇಳು ವನು. "ಓ ಸರ್ಪಗಳಿರಾ ! ಈಗ ಒಂದು ಕಾರ್ಯವು ನಿಮ್ಮಿಂದಾಗ ಬೇಕು. ನೀವೆಲ್ಲರೂ ಋಷಿವೇಷಗಳನ್ನು ಧರಿಸಿ, ಪತ್ರಪುಷ್ಪಗಳನ್ನೂ, ಜಲವನ್ನೂ ಕೈಯಲ್ಲಿ ತೆಗೆದುಕೊಂಡು ಪರೀಕ್ಷಿದ್ರಾಜನಬಳಿಗೆ ಹೋಗಿ, ಅವುಗಳನ್ನು ಆಶೀರ್ವಾದರೂಪವಾಗಿ ಅವನ ಕೈಗೆ ಕೊಡಬೇಕು. ನೀವು ಈ ಕಾರ್ಯಕ್ಕೆ ಹೆದರಬಾರದು" ಎಂದನು. ತಕ್ಷಕನ ಆಜ್ಞೆಯಂತೆ ಆ ಸರ್ಪಗಳು ತಾಪಸವೇಷವನ್ನು ತಾಳಿ, ಫಲಪುಷ್ಪಗಳನ್ನೂ, ದರ್ಭೆಗಳ ನ್ನೂ, ತೀರ್ಥಗಳನ್ನೂ ಹಿಡಿದುಕೊಂಡು ಪರೀಕ್ಷಿದ್ರಾಜನಲ್ಲಿಗೆ ಬಂದುವು. ರಾಜನು ಅವನ್ನೆಲ್ಲ ಆದರಿಸಿ ಸ್ವೀಕರಿಸಿ, ಅವರನ್ನೆಲ್ಲ ಸತ್ಕರಿಸಿ "ಇನ್ನು ಹೋಗಿಬರಬಹುದೆಂದು ಹೇಳಿ ಕಳುಹಿಸಿಬಿಟ್ಟನು. ಮುನಿವೇಷದಿಂದ ಬಂದ ಆ ಸರ್ಪಗಳೆಲ್ಲವೂ ಹೊರಟುಹೋದಮೇಲೆ ಇತ್ತಲಾಗಿ ರಾಜನು ತನ್ನ ಮಂತ್ರಿಗಳನ್ನೂ, ಮಿತ್ರರನ್ನೂ ನೋಡಿ "ಓ ಅಮಾತ್ಯರೇ ! ಆ ತಾಪಸರು ತಂದುಕೊಟ್ಟ ಫಲಗಳನ್ನು ನೀವೆಲ್ಲರೂ ಭಕ್ಷಿಸಿರಿ. ಇದು ಬಹಳ ರುಚಿಯಾಗಿರುವುದು. ನಾನೂ ಭುಜಿಸುವೆನು" ಎಂದು ಹೇಳಿ, ಆ ಮಂತ್ರಿಗಳೊಡನೆ ತಾನೂ ಭುಜಿಸುವುದಕ್ಕೆ ಕುಳಿತನು. ಶೌನಕ ಮುನೀಂದ್ರಾ ! ದೈವಗತಿಯನ್ನು ಯಾರು ತಾನೇ ಮೀರಬಲ್ಲರು ? ಆ ಋಷಿಗಳು ತಂದುಕೊಟ್ಟ ಫಲಗಳಲ್ಲಿ ಯಾವುದರೊಳಗೆ ತಕ್ಷಕನು ಸೂಕ್ಷ್ಮ ಕ್ರಿಮಿರೂಪದಿಂದ ಸೇರಿಕೊಂಡಿದ್ದನೋ, ಆ ಫಲವೇ ಆ ಪರೀಕ್ಷಿದ್ರಾಜನ ಕೈಗೆ ಸಿಕ್ಕಿತು. ಬ್ರಾಹ್ಮಣಶಾಪವೆಂಬ ವಿಧಿಯಿಂದ ಪ್ರೇರಿತನಾದ ರಾಜ ನು ಆ ಫಲವನ್ನು ಭುಜಿಸುವುದಕ್ಕೆ ತೊಡಗಿದನು. ಅವನು ಭುಜಿಸುತ್ತಿರು ವಾಗ ಆ ಹಣ್ಣಿನಿಂದ ಬಹಳ ಕುರುಚಾಗಿಯೂ, ತಾಮ್ರದಂತೆ ಕೆಂಪುಬಣ್ಣ ವುಳ್ಳುದಾಗಿಯೂ, ಕಪ್ಪಾದ ಕಣ್ಣುಗಳುಳ್ಳುದಾಗಿಯೂ ಇರುವ ಅಣು ಪ್ರಮಾಣವುಳ್ಳ ಒಂದು ಕ್ರಿಮಿಯು ಹೊರಟು, ಆ ರಾಜನ ಕಣ್ಣಿಗೆ ಕಾಣಿ ಸಿತು. ರಾಜನು ಆ ಹುಳುವನ್ನು ಕೈಯಲ್ಲಿ ಹಿಡಿದುಕೊಂಡು ತನ್ನ ಮಂತ್ರಿ ಗಳಿಗೆ ತೋರಿಸುತ್ತ "ಓ ಅಮಾತ್ಯರೇ ! ಈಗಾಗಲೇ ಸೂರ್ಯಾಸ್ತಮಯ

ವಾಯಿತು. ಏಳು ದಿನಗಳು ಕಳೆದಂತೆಯೇ! ಇನ್ನು ನನಗೆ ಸರ್ಪವಿಷ ದಿಂದ ಸಾಯುವ ಭಯವಿಲ್ಲವೆಂದು ತೋರುತ್ತಿದೆ. ಆದರೆ, ಆ ಮಹರ್ಷಿ ಯ ವಾಕ್ಯವು ಸುಳ್ಳಾದುದಕ್ಕಾಗಿ ನಾನು ದುಃಖಿಸುವೆನು. ಈಗಲೂ ಆ ಮರ್ಷಿಯ ಮಾತು ಅಸತ್ಯವಾಗದಿದ್ದರೆ, ಈ ಸಣ್ಣ ಹುಳವೇ ತಕ್ಷಕನ ಹೆಸರಿನಿಂದ ನನ್ನನ್ನು ಕಚ್ಚಿದರೂ ಸಮ್ಮತವೇ! ಆಗ ಮಹರ್ಷಿಯ ಮಾ ತು ಅಸತ್ಯವಾಯಿತೆಂಬ ದೋಷವು ತಪ್ಪುವುದು" ಎಂದನು. ಕಾಲಪ್ರೇರಿ ತರಾದ ಮಂತ್ರಿಗಳೂ "ಹೌದು ನಿಜ"ವೆಂದು ರಾಜನ ಮಾತನ್ನೇ ಅನು ಮೋದಿಸಿದರು. ಆ ರಾಜೋತ್ತಮನಿಗೆ ಮರಣಕಾಲವು ಸಮಿಾಪಿಸಿದುದ ರಿಂದ, ಬುದ್ಧಿಗೆಟ್ಟು, ಆ ಹುಳುವನ್ನು ಭುಜದಮೇಲೇರಿಸಿಕೊಂಡು ಘಕ್ಕನೆ ನಕ್ಕನು. ಅವನು ನಗುತ್ತಿರುವಾಗಲೇ ಎಲ್ಲರೂ ನೋಡುತ್ತಿದ್ದಹಾಗೆ ಆ ಹುಳವು ಅದೃಶ್ಯವಾಗಿ, ದೊಡ್ಡದೊಂದು ಸರ್ಪವು ಆ ರಾಜನ ದೇಹವ ನ್ನೆಲ್ಲ ಸುತ್ತಿ ಬಿಗಿದುಕೊಂಡಿದ್ದಿತು. ತಕ್ಷಕನೇ ಆ ಫಲದಲ್ಲಿ ಕ್ರಿಮಿರೂಪ ವಾಗಿ ಅಡಗಿದ್ದು, ರಾಜನ ಕೈಗೆ ಸೇರಿದೊಡನೆ ತನ್ನ ನಿಜಾಕಾರದಿಂದ ಅವ ನನ್ನು ಸುತ್ತಿಕೊಂಡು, ಒಮ್ಮೆ ಭಯಂಕರಧ್ವನಿಯನ್ನು ಮಾಡಿ ರಾಜ ನನ್ನು ಕಚ್ಚಿಬಿಟ್ಟನು.

ಇದು ನಾಲ್ವತ್ತುಮೂರನೆಯ ಅಧ್ಯಾಯವು.

---

ಪರೀಕ್ಷಿತ್ತಿನ ಮರಣಾನಂತರದಲ್ಲಿ ಅವನ ಮಗನಾದ ಜನಮೇಜಯನು ರಾಜ್ಯದಲ್ಲಿ ಅಭಿಷಿಕ್ತನಾದುದು. ಅವನಿಗೆ ವಪುಷ್ಟಮೆಯೆಂಬ ಕನ್ಯೆಯನ್ನು ತಂದು ವಿವಾಹ ಮಾಡಿದುದು.

ಓ ಮುನೀಂದ್ರಾ! ಹೀಗೆ ಪರೀಕ್ಷಿದ್ರಾಜನ ಮೈಗೆ ದೊಡ್ಡ ಸರ್ಪವು ಸುತ್ತಿಕೊಂಡು ಕಚ್ಚಿದುದನ್ನು ನೋಡಿ, ಅವನನ್ನು ಸುತ್ತಿಮುತ್ತಿದ್ದವರೆಲ್ಲ ರೂ ಭಯದಿಂದ ತತ್ತಳಿಸುತ್ತ ದಿಕ್ಕುದಿಕ್ಕಿಗೆ ಪಲಾಯನ ಮಾಡಿದರು. ಸ್ವಲ್ಪ ಹೊತ್ತಿಗೆಲ್ಲ, ಆ ಹಾವು ರಾಜನ ಶರೀರವನ್ನು ಬಿಟ್ಟು ಆಕಾಶಮಾರ್ಗ ವಾಗಿ ಹಾರಿದುದನ್ನು ಕಂಡರು. ಕಮಲದಂತೆ ಕೆಂಪುಬಣ್ಣದಿಂದ ಮೇಲೆ

ಹಾರುತಿದ್ದಾಗ ಆ ಸರ್ಪವು ಆಕಾಶಕ್ಕೆ ಸೀಮಂತರೇಖೆಯನ್ನು ಬಿಡಿಸಿದಂತೆ ಕಾಣಿಸುತ್ತಿತ್ತು. ಆ ಹಾವು ಬಿಟ್ಟುಹೋದಮೇಲೆ ಎಲ್ಲರೂ ರಾಜನಿದ್ದ ಲ್ಲಿಗೆ ಬಂದು, ರಾಜನು ಮೃತನಾಗಿರುವುದನ್ನು ನೋಡಿ ಕಂದಿದ ಮುಖ ದಿಂದ ಎಲ್ಲರೂ ಗಟ್ಟಿಯಾಗಿ ರೋದಿಸತೊಡಗಿದರು. ಶೌನಕಾ! ತಕ್ಷ ಕನ ವಿಷದಿಂದ ಪರೀಕ್ಷಿದ್ರಾಜನು ಸತ್ತುದು ಹಾಗಿರಲಿ! ಆ ವಿಷಾಗ್ನಿ ಯಿಂದ ಆ ರಾಜನಿದ್ದ ಮನೆಯೆಲ್ಲವೂ ಬೆಂಕಿಹಿಡಿದು ಉರಿಯತೊಡ ಗಿತು. ಎಲ್ಲರೂ ಭಯಪಟ್ಟು ದಿಕ್ಕುದಿಕ್ಕಿಗೆ ಪಲಾಯನಮಾಡಿದರು. ಸ್ವಲ್ಪ ಹೊತ್ತಿನಲ್ಲಿಯೇ ಆ ರಾಜಗೃಹಕ್ಕೆ ಕೂಡ ಸಿಡಿಲು ಬಡಿದಂತಾಗಿ ಅದೂ ಬಿದ್ದುಹೋಯಿತು. ಆಮೇಲೆ ಪರೀಕ್ಷಿದ್ರಾಜನಿಗೆ ಪರಲೋಕ ಕ್ರಿಯೆಗಳೆಲ್ಲವೂ ನಡೆದುವು. ಒಡನೆಯೇ ಮಂತ್ರಿಪುರೋಹಿತರೂ, ಪಟ್ಟ ಣದ ಪ್ರಜೆಗಳೆಲ್ಲರೂ ಒಂದುಗೂಡಿ, ಇನ್ನೂ ಸಣ್ಣ ಮಗುವಾಗಿದ್ದ ರಾಜ ಕುಮಾರನಿಗೆ ಪಟ್ಟವನ್ನು ಕಟ್ಟಿದರು. ಅವನನ್ನೇ ಜನರು ಜನಮೇಜ ಯನೆಂದು ಹೇಳುವರು. ಅವನು ಬಾಲ್ಯದಲ್ಲಿಯೇ ಮಹಾಧೀಮಂತನಾಗಿ, ಉದಾರ ಬುದ್ಧಿಯುಳ್ಳವನಾಗಿದ್ದನು. ಅವನಲ್ಲಿ ಉತ್ತಮರಾಜಗುಣ ಗಳೆಲ್ಲವೂ ಕಾಣಿಸಿದುವು. ಪಾಂಡವರಿಗೆಲ್ಲ ಹಿರಿಯನೂ, ತನಗೆ ಮುತ್ತಾತ ನೂ ಆದ ಧರ್ಮರಾಜನಂತೆಯೇ ಅವನು ತನ್ನ ಮಂತ್ರಿಪುರೋಹಿತರೊಡ ನೆ ಕಲೆತು ಧರ್ಮದಿಂದ ರಾಜ್ಯವಾಳುತ್ತಿದ್ದನು. ಅವನಿಗೆ ಯೌವನವುಂ ಟಾಗಿ ಒಳ್ಳೆಯ ಪರಾಕ್ರಮಶಾಲಿಯಾಗಿರುವುದನ್ನು ನೋಡಿ ಅವನ ಮಂತ್ರಿ ಗಳೆಲ್ಲ ಅವನಿಗೆ ವಿವಾಹಮಾಡಬೇಕೆಂದು ಯೋಚಿಸಿ, ಕಾಶೀದೇಶದ ರಾಜ ನಾದ ಸ್ವರ್ಣವರ್ಮನೆಂಬವನ ಬಳಿಗೆ ಹೋಗಿ, ಅವನ ಮಗಳಾದ ವಪುಷ್ಟ ಮೆಯೆಂಬವಳನ್ನು ಜನಮೇಜಯನಿಗೆ ಕೊಡಬೇಕೆಂದು ಕೇಳಿದರು. ಆ ರಾಜನೂ ಕೂಡ ಕುರುವೀರನಾದ ಜನಮೇಜಯನಿಗೆ ತನ್ನ ಮಗಳನ್ನು ಸಂತೋಷಪೂರ್ವಕವಾಗಿ ಕೊಟ್ಟು ಕನ್ಯಾದಾನಮಾಡಿದನು. ಹೀಗೆ ವಿವಾ ಹಿತನಾದಮೇಲೆ ಜನಮೇಜಯನು, ಬೇರೊಬ್ಬ ಸ್ತ್ರೀಯನ್ನು ಮನಸ್ಸಿನಲ್ಲಿ ಯಾದರೂ ಎಣಿಸದೆ, ಏಕಪತ್ನೀವ್ರತನಾಗಿ ಆ ವಪುಷ್ಟಮೆಯಲ್ಲಿ ಬಹಳ ಅನುರಾಗದಿಂದಿದ್ದನು. ಪೂರ್ವದಲ್ಲಿ ಪುರೂರವನು ಊರ್ವಶಿಯಲ್ಲಿ ಹೇ ಗೋ ಹಾಗೆ, ಜನಮೇಜಯನು ಆ ವಪುಷ್ಟಮೆಯೊಡನೆ ಸಂತೋಷದಿಂದ

ಉಪವನಗಳಲ್ಲಿಯೂ, ತಾವರೆಯ ಕೊಳಗಳಲ್ಲಿಯೂ ವಿನೋದಿಸುತಿದ್ದನು. ಅತ್ಯಂತ ಪತಿವ್ರತೆಯೂ, ರೂಪವತಿಯೂ ಆದ ಆ ವಪುಷ್ಟಮೆಯೂ ಕೂಡ, ಜನಮೇಜಯನು ತನಗೆ ಪತಿಯಾದುದು ತನ್ನ ಮಹಾಭಾಗ್ಯವೆಂದೆಣಿಸಿ, ಸರ್ವವಿಧದಿಂದಲೂ ಅವನನ್ನು ಸಂತೋಷಗೊಳಿಸುತಿದ್ದಳು.

ಇದು ನಾಲ್ವತ್ತುನಾಲ್ಕನೆಯ ಅಧ್ಯಾಯವು.

---

ಜರತ್ಕಾರುವು ತನ್ನ ಪಿತೃಗಳನ್ನು ಸಂಧಿಸಿ, ಅವರೊಡನೆ ಸಂಭಾಷಣೆ ಮಾಡಿದುದು.

ಇದೇ ಸಮಯದಲ್ಲಿಯೇ ಜರತ್ಕಾರುವು ಭೂಸಂಚಾರಮಾಡುತಿದ್ದನು. ಅವನು ಎಲ್ಲಿ ರಾತ್ರಿಯಾದರೆ ಅಲ್ಲಿ ತಂಗುವನು. ಮಹಾ ತೇಜಸ್ವಿಯು. ಜಿತೇಂದ್ರಿಯರಲ್ಲದವರಿಗೆ ಸಾಧ್ಯವಲ್ಲದ ದೃಢವ್ರತವನ್ನು ಹಿಡಿದು ತೀರ್ಥಯಾತ್ರೆಗಳನ್ನು ಮಾಡುತಿದ್ದನು. ಪುಣ್ಯತೀರ್ಥಗಳನ್ನು ಕಂಡಲ್ಲಿ ಸ್ನಾನಮಾಡುವನು. ಕೆಲವು ವೇಳೆ ಕೇವಲ ವಾಯುಭಕ್ಷಕನಾಗಿರುವನು. ಕೆಲವು ವೇಳೆ ಆಹಾರವಿಲ್ಲದೆಯೇ ಇದ್ದುಬಿಡುವನು. ಹೀಗೆಯೇ ದಿನದಿನಕ್ಕೆ ತನ್ನ ದೇಹವನ್ನು ಶೋಷಿಸುತ್ತಾ ಭೂಸಂಚಾರಮಾಡುತ್ತಿರುವಾಗ, ಒಂದು ಅಗಾಧವಾದ ಹಳ್ಳದಲ್ಲಿ ಪಿತೃದೇವತೆಗಳು ಕೆಲವರು ಒಂದು ಜೊಂಡು ಹುಲ್ಲಿಗೆ ತಗುಲಿಕೊಂಡು, ತಲೆಕೆಳಗಾಗಿ ನೇತಾಡುತ್ತಿರುವುದನ್ನು ಕಂಡನು. ಆ ಜೊಂಡುಗಳಲ್ಲಿ ಕಡ್ಡಿಗಳೆಲ್ಲ ಉದಿರಿ, ಒಣಗಿದ ಒಂದೇ ಕಡ್ಡಿಯುಮಾತ್ರ ಅಂಟಿಕೊಂಡಿದ್ದಿತು. ಆ ಒಂದು ಕಡ್ಡಿಯನ್ನು ಕೂಡ ಸಮೀಪದ ಬಿಲದಲ್ಲಿದ್ದ ಒಂದಾನೊಂದು ಇಲಿಯು ಆಗಾಗ ಬಂದು ಕಡಿಯುತಿದ್ದಿತು. ಇಂತಹ ಅಪಾಯಸ್ಥಿತಿಯಲ್ಲಿ ಸಿಕ್ಕಿ ನೇತಾಡುತ್ತ, ಆಹಾರವಿಲ್ಲದೆ ಕೃಶರಾಗಿ ಬಹಳ ಕಷ್ಟದಿಂದ “ತಮ್ಮನ್ನು ರಕ್ಷಿಸತಕ್ಕವರಿಲ್ಲವೆ” ಎಂದು ಕಣ್ಣು ಕಣ್ಣುಬಿಡುತಿದ್ದ ಆ ಪಿತೃಗಳ ಸಮೀಪಕ್ಕೆ ಬಂದು ಜರತ್ಕಾರುವು ಆವರ ಸ್ಥಿತಿಯನ್ನು ನೋಡಿ ತಾನು ದುಃಖಿಸುತ್ತ “ಎಲೈ! ನೀವು ಯಾರು? ಈ ಹುಲ್ಲನ್ನು ಹಿಡಿದುಕೊಂಡು ಈ ಅಗಾಧವಾದ ಹಳ್ಳದಲ್ಲಿ ನೇತಾಡುತ್ತಿರುವಿರಿ. ಆ ಒಣಹುಲ್ಲಿನ ಬುಡವನ್ನು ಕೂಡ ಇಲಿಯು ಕಡಿಯುತ್ತಿರುವುದು. ನೀ

ವು ಹಿಡಿದಿರುವ ಹುಲ್ಲು ಕೇವಲ ದುರ್ಬಲವಾಗಿ ಶೀಘ್ರದಲ್ಲಿಯೇ ಅದೂ ಕಿತ್ತುಹೋಗುವ ಸ್ಥಿತಿಯಲ್ಲಿಯೇ ಇದೆ. ನೀವೆಲ್ಲರೂ ಈ ಹಳ್ಳದಲ್ಲಿ ತಲೆ ಕೆಳಗಾಗಿ ಬಿದ್ದು ಸಾಯುವುದು ನಿಶ್ಚಯವು. ನಿಮ್ಮ ಈ ದುಸ್ಥಿತಿಯನ್ನು ನೋಡಿ ನನಗೆ ಬಹಳ ವ್ಯಸನವಾಗುತ್ತಿದೆ. ಈಗ ನನ್ನಿಂದ ನಿಮಗೆ ಆಗಬಹುದಾದ ಪ್ರಿಯಕಾರ್ಯವೇನಾದರೂ ಇದ್ದರೆ ತಿಳಿಸಿರಿ. ನನ್ನ ತಪಸ್ಸಿನಲ್ಲಿ ಕಾಲುಪಾಲನ್ನೋ, ಮೂರರಲ್ಲಿ ಒಂದು ಭಾಗವನ್ನೋ, ಕೊನೆಗೆ ಅರ್ಧಭಾಗವನ್ನೋ ಕೊಟ್ಟಾದರೂ ನಿಮ್ಮನ್ನು ಈ ಆಪತ್ತಿನಿಂದ ತಪ್ಪಿಸುವುದು ಸಾಧ್ಯವಾಗುವಹಾಗಿದ್ದರೆ ಅದಕ್ಕೂ ಸಿದ್ಧನಾಗಿರುವೆನು. ನಿಮ್ಮ ಇಷ್ಟವೇನೋ ಅದನ್ನು ಹೇಳಿ ತಿಳಿಸಿರಿ. ಕೊನೆಗೆ ನಿಮ್ಮನ್ನು ಈ ಕಷ್ಟದಿಂದುದ್ಧರಿಸುವುದಕ್ಕೆ ನನ್ನ ತಪಸ್ಸಿನ ಪೂರ್ಣಫಲವನ್ನು ಬೇಕಾದರೂ ಕೊಟ್ಟುಬಿಡಲು ಸಿದ್ಧನಾಗಿರುವೆನು'' ಎಂದನು. ಅದಕ್ಕಾ ಪಿತೃದೇವತೆಗಳು ''ಓ ವಿಪ್ರೋತ್ತಮಾ! ನಮ್ಮ ಕಷ್ಟವನ್ನು ಬಿಡಿಸಲು ನಿನ್ನಿಂದ ಹೇಗೂ ಸಾಧ್ಯವಿಲ್ಲ. ನೀನೋ ಬ್ರಹ್ಮಚಾರಿ! ನಿನ್ನ ತಪಸ್ಸಿನಿಂದ ಈ ನಮ್ಮ ವಿಪತ್ತು ಹೋಗುವಹಾಗಿಲ್ಲ. ಅಪ್ಪಾ! ನಾವೂ ಎಷ್ಟೋ ತಪಸ್ಸನ್ನು ಮಾಡಿದವರು. ನಮ್ಮಲ್ಲಿಯೂ ತಪಃಫಲವುಂಟು. ಎಷ್ಟಿದ್ದರೇನು? ನಮಗೆ ಸಂತತಿಯಿಲ್ಲದುದರಿಂದ, ಅವೊಂದೂ ಪ್ರಯೋಜನಕ್ಕೆ ಬಾರದೆ, ನಾವು ಅಶುಚಿಗಳಾಗಿ ನರಕದಲ್ಲಿ ಬೀಳುತ್ತಿರುವೆವು. ಸಂತಾನಪ್ರಾಪ್ತಿಯೇ ಉತ್ತಮಧರ್ಮವೆಂದು ಬ್ರಹ್ಮನೇ ಹೇಳಿರುವನು. ಓ ಕುಮಾರಾ! ಇಲ್ಲಿ ತಲೆಕೆಳಗಾಗಿ ನೇತಾಡುತ್ತಿರುವ ನಮಗೆ ಬುದ್ಧಿಯೇ ಸರಿಯಾಗಿಲ್ಲದೆ ತಬ್ಬಿಬ್ಬಾಗುತ್ತಿದೆ. ನಿನ್ನ ಮಾತನ್ನು ಕೇಳಿದರೆ, ಲೋಕದಲ್ಲಿ ನೀನು ಬಹಳ ಪ್ರಸಿದ್ಧಪುರುಷನೆಂದೂ, ಒಳ್ಳೆಯ ತಪಶ್ಶಕ್ತಿಯುಳ್ಳವನೆಂದೂ ತೋರುವುದು. ಆದರೂ ನಿನ್ನನ್ನು ನಾವು ಗುರುತುಹಿಡಿಯಲಾರದೆ ಇರುವೆವು. ಇಂತಹ ದುಃಖದಲ್ಲಿ ಸಿಕ್ಕಿರುವ ನಮ್ಮನ್ನು ನೋಡಿ ಕನಿಕರಪಡುತ್ತಿರುವ ನೀನೇ ಮಹಾನುಭಾವನು. ನೀನು ಒಳ್ಳೆಯ ವೃದ್ಧನೆಂದೂ ಕಾಣುವುದು. ಓ ಬ್ರಾಹ್ಮಣಾ! ನಾವು ಯಾರೆಂಬುದನ್ನು ತಿಳಿಸುವೆವು ಕೇಳು. ನಾವು ಬಹಳ ತೀಕ್ಷ್ಣವ್ರತದಲ್ಲಿದ್ದ ಯಾಯಾವರರೆಂಬ ಋಷಿಗಳು. ನಮಗೆ ಸಂತತಿಯಿಲ್ಲದೆಹೋದುದರಿಂದ, ಪುಣ್ಯಲೋಕಗಳಿಂದ ಬಹಿಷ್ಕೃತರಾಗಿ

ಹೀಗೆ ಅಧೋಗತಿಗೆ ಬೀಳುವುದರಲ್ಲಿರುವೆವು. ನಮಗೆ ಮುಂದಿನ ಸಂತತಿಯೆಂಬ ತಂತುವು ನಿಂತುಹೋದುದರಿಂದ, ನಮ್ಮ ತೀವ್ರತಪಸ್ಸುಗಳೆಲ್ಲವೂ ನಷ್ಟವಾದುವು. ಅಲ್ಪಭಾಗ್ಯರಾದ ನಮಗೆ ನಮ್ಮಂತೆಯೇ ಮಂದಭಾಗ್ಯನಾದ ಮಗನೊಬ್ಬನು ನಮ್ಮ ಸಂತತಿಗೆ ತಂತುವಾಗಿರುವನು. ಅವನು ಬದುಕಿದ್ದರೂ ನಮ್ಮ ಭಾಗಕ್ಕೆ ಇಲ್ಲದಂತೆಯೇ ಆಗಿರುವನು. ಅವನು ಕೇವಲ ತಪಸ್ಸನ್ನು ಮಾತ್ರವೇ ಹಿಡಿದಿರುವನು. ಅವನಿಗೆ ಜರತ್ಕಾರುವೆಂದು ಹೆಸರು. ಅವನು ವೇದವೇದಾಂಗಗಳಲ್ಲಿ ಪಾರಂಗತನು. ಮಹಾತ್ಮನು. ಮನಸ್ಸನ್ನು ನಿಗ್ರಹಿಸಿದವನು. ಸ್ಥಿರವಾದ ನಿಯಮವುಳ್ಳವನು. ತಪಸ್ಸಿನಲ್ಲಿಯೇ ಆಸಕ್ತನಾದ ಅವನು, ಸಂತಾನಾಪೇಕ್ಷೆಯಿಲ್ಲದೆ ನಮ್ಮನ್ನು ಈ ಸಂಕಟಕ್ಕೆ ಸಿಕ್ಕಿಸಿ ಹೊರಟುಹೋದನು. ಅವನಿಗೆ ಹೆಂಡತಿಯಿಲ್ಲ! ಮಕ್ಕಳಿಲ್ಲ! ಬಂಧುಗಳೂ ಇಲ್ಲ! ಅವನ ದಶೆಯಿಂದಲೇ ನಾವು ಹೀಗೆ ಅನಾಥರಂತೆ ಹಳ್ಳದಲ್ಲಿ ನೇತಾಡುತ್ತ, ಪ್ರಜ್ಞೆಯಿಲ್ಲದೆ ಕಳವಳಿಸುಸುತ್ತಿರುವೆವು. ಅಪ್ಪಾ! ನಮ್ಮ ಪಾಲಿಗೆ ಅವನೊಬ್ಬನೇ ಗತಿಯಾಗಿರುವುದರಿಂದ, ನೀನು ನಿನ್ನ ಸಂಚಾರಕಾಲದಲ್ಲಿ ಎಲ್ಲಿಯಾದರೂ ಅವನನ್ನು ಕಂಡರೆ, ಈ ನಮ್ಮ ಅವಸ್ಥೆಯನ್ನು ಅವನಿಗೆ ತಿಳಿಸು. ನಿನ್ನ ಪಿತೃಗಳು ದೀನದಶೆಯಿಂದ ತಲೆಕೆಳಗಾಗಿ ಹಳ್ಳದಲ್ಲಿ ನೇತಾಡುತ್ತಿರುವರೆಂದು ಅವನಿಗೆ ಬುದ್ಧಿವಾದಗಳನ್ನು ಹೇಳಿ ನಮ್ಮಲ್ಲಿಗೆ ಕಳುಹಿಸಿಕೊಡು!

ಓ ಬ್ರಾಹ್ಮಣಾ! ನಮ್ಮ ಕುಲಕ್ಕೆಲ್ಲ ಅದೊಂದು ತಂತುವೇ ಮಿಕ್ಕಿರುವುದೆಂಬುದನ್ನು, ಇದೋ! ನಮಗೆ ಆಧಾರಭೂತವಾಗಿರುವ ಈ ಜೊಂಡುಹುಲ್ಲಿನ ಒಂದು ಕಡ್ಡಿಯೇ ಸೂಚಿಸುವುದು. ಇದೊಂದೇ ನಮ್ಮ ಕುಲದ ಗಂಟು. ಇದರಿಂದ ನಮ್ಮ ಕುಲವೃದ್ಧಿಯಾಗಬೇಕು. ಬ್ರಾಹ್ಮಣೋತ್ತಮಾ! ಅದರ ಬೇರುಗಳನ್ನು ನೋಡುವೆಯಲ್ಲವೆ? ಆ ಬೇರುಗಳನ್ನು ಕೂಡ ಇಲಿಯು ಕೊರೆಯುತ್ತಿರುವುದನ್ನು ನೋಡು. ನಮ್ಮ ಕುಲದ ತಂತುಗಳು ಕಾಲನಿಂದ ಭಕ್ಷಿಸಲ್ಪಡುತ್ತಿದೆಯೆಂಬುದನ್ನು ಇದು ಸೂಚಿಸುವುದು. ಇದರ ಒಂದು ಬೇರು ಆಗಲೇ ಅರ್ಧಮಟ್ಟಿಗೆ ಭಕ್ಷಿಸಲ್ಪಟ್ಟಿತು. ಅದನ್ನೇ ನಾವು ಹಿಡಿದು ನೇತಾಡುತ್ತಿರುವೆವು. ತಪಸ್ಸೊಂದನ್ನೇ ಹಿಡಿದಿರತಕ್ಕ

ನಮ್ಮ ಮಗನಾದ ಜರತ್ಕಾರುವೇ ಇದೆಂದು ತಿಳಿ. ಬೇರನ್ನು ಕಡಿಯುತ್ತಿರುವ ಇಲಿಯೇ ಮಹಾಬಲವುಳ್ಳ ಕಾಲನು. ಕೇವಲ ತಪಸ್ಸಿನಲ್ಲಿಯೇ ನಿತ್ಯಾಸಕ್ತನಾಗಿ, ಬುದ್ಧಿಗೆಟ್ಟು, ದೇಹವನ್ನು ದಂಡಿಸುತ್ತಿರುವ ನಮ್ಮ ಪುತ್ರನಾದ ಜರತ್ಕಾರುವನ್ನು ಆ ಕಾಲನು ಮೆಲ್ಲಮೆಲ್ಲಗೆ ಕ್ಷೀಣಿಸುವಂತೆ ಮಾಡುತ್ತಿರುವನು. ಹೀಗೆ ಬುಡವೇ ಕೆಟ್ಟುಹೋಗಿ ಅಧೋಗತಿಗೆ ಬೀಳುವ ಅಪಾಯಸ್ಥಿತಿಯಲ್ಲಿ ಸಿಕ್ಕಿ, ಬುದ್ಧಿಗೆಟ್ಟಿರುವ ನಮ್ಮನ್ನು ಆ ಜರತ್ಕಾರುವಿನ ತಪಸ್ಸೇನೂ ಉದ್ಧರಿಸಲಾರದು. ನಾವು ಅಷ್ಟು ತಪಸ್ಸನ್ನು ಮಾಡಿದ್ದರೂ ಪಾಪಕರ್ಮಿಗಳಂತೆ ಅಧೋಗತಿಗೆ ಬೀಳುತ್ತಿರುವುದನ್ನು ನೀನೇ ನೋಡುವೆ. ನಾವು ನಮ್ಮ ಸಮಸ್ತಬಂಧುಗಳೊಡನೆ ಈ ಅಧೋಗತಿಯಲ್ಲಿ ಬಿದ್ದಮೇಲೆ, ನಮ್ಮ ಮಗನೂ ಕಾಲಹತನಾಗಿ, ಇದೇ ಗತಿಯಲ್ಲಿ ಬೀಳುವುದೇ ನಿಶ್ಚಯವು. ತಪಸ್ಸು, ಯಜ್ಞ, ದಾನಧರ್ಮಗಳು ಮೊದಲಾದ ಎಂತಹ ಪವಿತ್ರಕಾರ್ಯಗಳೇ ಆದರೂ, ಸಂತತಿಗೆ ಸಮಾನವಾದುದಲ್ಲವೆಂಬುದು ಸಜ್ಜನರ ಮತವು. ಓ ತಪಸ್ವೀ! ನೀನು ಆ ಜರತ್ಕಾರುವನ್ನು ಕಂಡರೆ, ಇಲ್ಲಿನ ಸಂಗತಿಯನ್ನೆಲ್ಲ ಸ್ಪಷ್ಟವಾಗಿ ತಿಳಿಸಬೇಕು. ಈಗ ಅವನೊಬ್ಬನೇ ನಮಗೆ ದಿಕ್ಕಾಗಿರುವನು. ಅವನಿಗೆ ನೀನು ಯಾವ ವಿಧದಲ್ಲಿ ಹೇಳಿದರೆ ವಿವಾಹವನ್ನು ಮಾಡಿಕೊಂಡು ಸಂತಾನವನ್ನು ಪಡೆಯುವನೋ, ಅದೇ ರೀತಿಯಲ್ಲಿ ನೀನು ಅವನಿಗೆ ಬುದ್ಧಿವಾದವನ್ನು ಹೇಳಬೇಕು. ನೀನು ನಮ್ಮನ್ನು ನಿಮ್ಮ ಕುಲದ ಬಂಧುಗಳನ್ನಾಗಿಯೇ ಭಾವಿಸಿ, ನಮ್ಮ ಕ್ಷೇಮಕ್ಕೆ ದಾರಿಯನ್ನು ಮಾಡಬೇಕು. ಓ ಮಹಾತ್ಮಾ! ಪ್ರಿಯಬಂಧುವಿನಂತೆ ನಮ್ಮನ್ನು ನೋಡಿ ಎಷ್ಟೋ ಕನಿಕರಪಟ್ಟು ಮಾತಾಡಿಸುವೆಯಲ್ಲ! ನೀನು ಯಾರು? ನಿನಗೆ ನಮ್ಮಲ್ಲಿ ಇಷ್ಟು ಕರುಣೆಯೇಕೆ? ನಮ್ಮಮುಂದೆ ಹೀಗೇಕೆ ಕನಿಕರದಿಂದ ನಿಂತಿರುವೆ. ನಿನ್ನ ಸಂಗತಿಯನ್ನು ಕೇಳಬೇಕೆಂದಿರುವೆವು" ಎಂದರು.

ಇದು ನಾಲ್ವತ್ತೈದನೆಯ ಅಧ್ಯಾಯವು.



( ಜರತ್ಕಾರುವು ತನ್ನ ಪಿತೃಗಳೊಡನೆ ಸಂಭಾಷಿಸಿದಮೇಲೆ ಅವರ ಕೋರಿಕೆಗಾಗಿ ಭಾರ್ಯೆಯನ್ನು ಹುಡುಕಿದುದು. )

ಜರತ್ಕಾರುವಿಗೆ ಈ ಮಾತುಗಳನ್ನು ಕೇಳಿ ಸಹಿಸಲಾರದ ದುಃಖ ವುಂಟಾಯಿತು. ಕಣ್ಣುಗಳಲ್ಲಿ ನೀರು ತುಂಬಿತು. ಗದ್ಗದಸ್ವರದಿಂದ ಆ ಪಿತೃಗಳನ್ನು ನೋಡಿ "ಓ ಪಿತೃದೇವತೆಗಳಿರಾ! ನೀವು ಯಾವನನ್ನು ಕುರಿತು ದುಃಖಿಸುತ್ತಿರುವಿರೋ ಆ ಪಾಪಿಯಾದ ಜರತ್ಕಾರುವೆಂಬವನು ನಾನೇ! ನನ್ನ ಪಿತಾಮಹರೇ ನೀವು. ನಿಮ್ಮ ಪ್ರಿಯಕ್ಕಾಗಿ ಇನ್ನುಮೇಲೆ ನಾನು ಏನನ್ನು ಹೇಳಿದರೂ ಮಾಡಲು ಸಿದ್ಧನಾಗಿರುವೆನು. ನಿಮ್ಮಲ್ಲಿ ಅಪರಾಧಿಯಾದ ನಿಮ್ಮ ಪುತ್ರನೇ ನಾನು! ನನ್ನ ಅಪರಾಧಕ್ಕಾಗಿ ನೀವು ಯಾವ ದಂಡವನ್ನು ವಿಧಿಸಿದರೂ ವಿಧಿಸಬಹುದು" ಎಂದನು. ಇದನ್ನು ಕೇಳಿ ಆ ಪಿತೃಗಳಿಗೆ ಪರಮಸಂತೋಷವಾಯಿತು. ಆಗ ಅವರು "ಕುಮಾರಾ! ನೀನೇಕೆ ವಿವಾಹವನ್ನು ಮಾಡಿಕೊಳ್ಳದೆ ಹೋದೆ?" ಎಂದರು. ಅದಕ್ಕಾ ಜರತ್ಕಾರುವು "ಓ ಮಹಾತ್ಮರೆ! ಊರ್ಧ್ವರೇತಸ್ಸಾಗಿಯೇ ಇದ್ದು ಈ ದೇಹವನ್ನು ಪರಲೋಕಕ್ಕೆ ಹೊಂದಿಸಬೇಕೆಂಬ ಉದ್ದೇಶವು ನನ್ನ ಮನಸ್ಸನ್ನು ಆವರಿಸಿಕೊಂಡಿತು. ವಿವಾಹಮಾಡಿಕೊಳ್ಳಬಾರದೆಂದೇ ನಾನು ಮನಸ್ಸನ್ನು ಸ್ಥಿರಮಾಡಿಕೊಂಡಿದ್ದೆನು. ಆದರೆ, ನೀವು ಹೀಗೆ ಬಾವುಲಿಹಕ್ಕಿಗಳಂತೆ ತಲೆಕೆಳಗಾಗಿ ನೇತಾಡುತ್ತಿರುವುದನ್ನು ನೋಡಿ, ಈಗ ನಾನು ಬ್ರಹ್ಮಚರ್ಯದಿಂದ ನನ್ನ ಮನಸ್ಸನ್ನು ತಿರುಗಿಸಿಕೊಳ್ಳಬೇಕಾಗಿದೆ. ನಿಮ್ಮ ಕೋರಿಕೆಯಂತೆಯೇ ನಾನು ವಿವಾಹಮಾಡಿಕೊಳ್ಳುವೆನು. ಆದರೆ ನನ್ನದೊಂದು ನಿಯಮವುಂಟು. ನಾನು ಕೈಹಿಡಿಯುವ ಕನ್ಯೆಯು ನನ್ನ ಹೆಸರಿನವಳಾಗಿಯೇ ಇರಬೇಕು. ಮತ್ತು ಆ ಕನ್ಯೆಯನ್ನು ನನಗಾಗಿಯೇ ಸಿದ್ಧವಾಗಿ ಇಟ್ಟುಕೊಂಡಿದ್ದು ತಂದೆತಾಯಿಗಳು ಭಿಕ್ಷೆಯಂತೆ ನನ್ನಲ್ಲಿ ತಂದೊಪ್ಪಿಸಬೇಕು. ಅಂತಹ ಕನ್ಯೆಯು ಯಾವ ಕ್ಷಣದಲ್ಲಿ ದೊರೆತರೆ, ಆ ಕ್ಷಣವೇ ನಾನು ಅವಳನ್ನು ವಿವಾಹವಾಗುವೆನು. ವಿವಾಹವಾದರೂ, ಅವಳನ್ನುಮಾತ್ರ ನಾನು ನನ್ನ ಬಳಿ ಇಟ್ಟುಕೊಂಡು ಕಾಪಾಡುವವನಲ್ಲ. ಈ ನಿಯಮದ ಮೇರೆಗೆ ಕನ್ಯೆಯು ಸಿಕ್ಕಿದರೆಮಾತ್ರ ನಾನು ವರಿಸುವೆನು. ಇದು ನಿಜವು. ಆ ಕನ್ಯೆಯಲ್ಲಿ ನಿಮ್ಮನ್ನುದ್ಧರಿಸತಕ್ಕ ಸಂತಾ

ನವುಂಟಾಗಿ ಅದರಿಂದ ನಮ್ಮ ಪಿತೃಗಳಿಗೆಲ್ಲ ಶಾಶ್ವತವಾದ ಗತಿಯುಂಟಾಗಲಿ!" ಎಂದನು.

ಹೀಗೆಂದು ಹೇಳಿ ಆ ಜರತ್ಕಾರುವು ತಿರುಗಿ ಸಂಚಾರಕ್ಕಾಗಿ ಹೊರಟುಬಿಟ್ಟನು. ಶೌನಕಾ! ಅವನಿಗೆ ವಯಸ್ಸು ಕಳೆಯುತ್ತ ಬಂದುದರಿಂದ, ಯಾರೂ ಅವನಿಗೆ ಹೆಣ್ಣನ್ನು ಕೊಡಲು ಬರಲಿಲ್ಲ. ತನ್ನ ಪಿತೃಗಳ ಸ್ಥಿತಿಯನ್ನು ನೋಡಿ ಅವನಿಗುಂಟಾದ ವ್ಯಸನವೋ ಅವನನ್ನು ಎಡೆಬಿಡದೆ ವ್ಯಾಕುಲಗೊಳಿಸುತಿದ್ದಿತು. ತನ್ನ ಪಿತೃಗಳನ್ನುದ್ಧರಿಸುವ ಮಾರ್ಗವನ್ನು ಕಾಣದೆ ಮಹಾವ್ಯಸನದಿಂದ ಒಂದು ಅಡವಿಗೆ ಹೋದನು. ಆ ಕಾಡಿನ ನಡುವೆ ನಿಂತು "ತನ್ನ ಪಿತೃಗಳಿಗೆ ಹೇಗೆ ಕ್ಷೇಮವುಂಟಾಗುವುದೋ ಕಾಣೆನಲ್ಲಾ" ಎಂದು ಚಿಂತಿಸುತ್ತ "ನಾನು ಕನ್ಯೆಯನ್ನು ಕೋರುವೆನು" ಎಂಬೀ ಮೂರು ಮಾತುಗಳನ್ನು ಆಗಾಗ ಸ್ವಲ್ಪ ಹೊತ್ತು ನಿಲ್ಲಿಸಿನಿಲ್ಲಿಸಿ ಉಚ್ಚಸ್ವರದಿಂದ ಕೂಗಿ ಹೇಳಿದನು. ಆಮೇಲೆ ತಿರುಗಿ ಅವನು ಉಚ್ಚಧ್ವನಿಯಿಂದ "ಈ ವನದಲ್ಲಿರುವ ಸ್ಥಾವರಜಂಗಮಗಳೂ, ಕಣ್ಣಿಗೆ ಕಾಣದೆ ಅದೃಶ್ಯವಾಗಿರುವ ದೇವತೆಗಳೂ ನಾನು ಹೇಳುವುದನ್ನು ಕೇಳಬೇಕು. ದುಃಖಿತರಾದ ನನ್ನ ಪಿತೃಗಳು ತಪೋನಿರತನಾಗಿದ್ದ ನನ್ನನ್ನು ಸಂತಾನಾರ್ಥವಾಗಿ ವಿವಾಹಮಾಡಿಕೊಳ್ಳಬೇಕೆಂದು ಆಜ್ಞೆಮಾಡಿರುವರು. ವಿವಾಹಕ್ಕಾಗಿ ಕನ್ಯಾಭಿಕ್ಷೆಯನ್ನು ಕೋರಿ ನಾನು ಭೂಮಿಯನ್ನೆಲ್ಲ ಸುತ್ತಿಬಂದೆನು. ನಾನಾದರೋ ಕೇವಲದರಿದ್ರನು. ಕಷ್ಟಪಡುವುದಕ್ಕಾಗಿಯೇ ನನ್ನ ಜನ್ಮವು. ಪಿತೃಗಳ ಆಜ್ಞೆಗೆ ಬದ್ಧನಾಗಿ ನಾನು ಎಲ್ಲೆಲ್ಲಿಯೂ ಸುತ್ತಿಸುತ್ತಿ ಬಳಲಿ ಬಂದುದಾಯಿತು. ಈಗಲಾದರೂ ಯಾರಾದರೂ ನನಗೆ ತಕ್ಕ ಕನ್ಯೆಯನ್ನು ಕೊಡುವವರಾಗಿದ್ದರೆ ಕೊಡಲಿ. ಆ ಕನ್ಯೆಯು ನನ್ನ ಹೆಸರಿನವಳಾಗಿಯೇ ಇರಬೇಕು. ನನಗೆ ಕೊಡುವುದಕ್ಕಾಗಿಯೇ ತಂದೆತಾಯಿಗಳು ಅವಳನ್ನು ಸಿದ್ಧವಾಗಿಟ್ಟುಕೊಂಡಿದ್ದು, ಭಿಕ್ಷೆಯಂತೆ ಅವಳನ್ನು ನನಗೆ ಕೊಡಬೇಕು. ಮತ್ತು ನನ್ನಿಂದ ಅವಳು ರಕ್ಷಣೆಯನ್ನು ಕೋರದವಳಾಗಿರಬೇಕು. ಅಂತಹ ಕನ್ಯೆಯಿದ್ದರೆ ನನಗೆ ತಂದುಕೊಡಿರಿ" ಎಂದನು.

ಈ ಜರತ್ಕಾರುವಿನ ಹಿಂದೆಯೇ ಹೊಂಚುಹಾಕುತಿದ್ದು, ಅವನ ಬಾಯಿಂದ ವಿವಾಹಾಪೇಕ್ಷೆಯ ಸೂಚನೆಯು ಹೊರಟೊಡನೆ ತನಗೆ ಬಂದು ತಿಳಿಸಬೇಕೆಂದು ಸರ್ಪರಾಜನಾದ ವಾಸುಕಿಯು ಅನೇಕನಾಗರಿಗೆ ಆಜ್ಞಾಪಿಸಿ ಕಳುಹಿಸಿದ್ದನಲ್ಲವೇ? ಅದರಂತೆ ಆ ಕಾಡಿನಲ್ಲಿದ್ದ ಕೆಲವು ನಾಗರು, ವಾಸುಕಿಯಬಳಿಗೆ ಬಂದು ಈ ಸಂಗತಿಯನ್ನು ತಿಳಿಸಿದರು. ಒಡನೆಯೇ ವಾಸುಕಿಯು ತನ್ನ ತಂಗಿಯಾದ ಜರತ್ಕಾರುವಿಗೆ ವಿವಾಹಯೋಗ್ಯವಾದ ಅಲಂಕಾರಗಳನ್ನು ಮಾಡಿಸಿ, ಅವಳನ್ನು ಸಂಗಡ ಕರೆದುಕೊಂಡು ಜರತ್ಕಾರುವಿನ ಬಳಿಗೆ ಬಂದನು. ಅಲ್ಲಿ ಜರತ್ಕಾರುವನ್ನು ಕಂಡು “ಓ ಬ್ರಾಹ್ಮಣಾ! ಇದೋ! ನಿನಗಾಗಿ ಈ ಕನ್ಯಾಭಿಕ್ಷೆಯನ್ನು ತಂದಿರುವೆನು” ಎಂದು ಹೇಳಿ ಕೊಟ್ಟನು. ಆದರೇನು? ಆ ಜರತ್ಕಾರುವಿಗೆ ಆಗಲೂ ಮೋಕ್ಷಮಾರ್ಗದಲ್ಲಿಯೇ ಮನಸ್ಸು ತಗುಲಿದ್ದಿತೇಹೊರತು ವಿವಾಹದಲ್ಲಿ ಸ್ವಲ್ಪವಾದರೂ ಆಸೆಯಿರಲಿಲ್ಲ ಆ ಕನ್ಯೆಯು ತನ್ನ ನಿಯಮಕ್ಕೆ ತಕ್ಕ ಹಾಗಿಲ್ಲವೆಂದೇ ತಿಳಿದುಕೊಂಡನು. ಮುಂದೆ ಅವಳನ್ನು ಕಾಪಾಡಬೇಕಾದ ಕಷ್ಟವು ತನ್ನಮೇಲೆ ಬೀಳುವುದೆಂದೂ ಹೆದರಿ, ಅವಳನ್ನು ಒಡನೆಯೇ ಪರಿಗ್ರಹಿಸಲು ಸಮ್ಮತಿಸದೆ, ಅವಳ ಹೆಸರೇನೆಂದು ವಾಸುಕಿಯನ್ನು ಪ್ರಶ್ನೆಮಾಡಿದನು. ಆ ಹೆಸರನ್ನು ತಿಳಿದುಕೊಂಡಮೇಲೆ “ಇವಳನ್ನು ನಾನು ವರಿಸಿದರೂ ನಾನು ಬೇರೆ ಅವಳನ್ನು ಕಾಪಾಡತಕ್ಕವನಲ್ಲ” ಎಂದೂ ತಿಳಿಸಿದನು.

ಇದು ನಾಲ್ವತ್ತಾರನೆಯ ಅಧ್ಯಾಯವು.

---

ಜರತ್ಕಾರುವಿಗೆ ವಿವಾಹವಾಗಿ, ಅವಳಲ್ಲಿ ಗರ್ಭವುಂಟಾದುದು. ತನ್ನ ಭಾರ್ಯೆಯು ತನ್ನ ಮನಸ್ಸಿನಂತೆ ನಡೆಸದೆ ಹೋದುದರಿಂದ ಅವನು ಕೋಪಗೊಂಡು ತಪಸ್ಸಿಗೆ ಹೋದುದು.

ಆಗ ವಾಸುಕಿಯು ಜರತ್ಕಾರುವನ್ನು ಕುರಿತು “ಓ ಮಹರ್ಷೀ! ಈ ಕನ್ಯೆಯು ನಿನಗೆ ಸಮಾನವಾದ ಹೆಸರುಳ್ಳವಳೇ! ಇವಳು ನನ್ನ ತಂಗಿ.

ಒಳ್ಳೇ ತಪಸ್ವಿನಿ. ನೀನು ವಿವಾಹವಾದರೂ ಅವಳ ಪೋಷಣೆಯ ಭಾರವನ್ನು ನಾನೇ ವಹಿಸುವೆನು. ನೀನು ಇವಳನ್ನು ಪ್ರತಿಗ್ರಹಿಸು. ಇವಳನ್ನು ನನ್ನ ಶಕ್ತಿಯಿದ್ದಮಟ್ಟಿಗೆ ನಾನೇ ಕಾಪಾಡುತ್ತಿರುವೆನು. ಇವಳನ್ನು ನಾನು ನಿನಗಾಗಿಯೇ ಕಾಪಾಡಿಟ್ಟಿರುವೆನು" ಎಂದನು. ಅದಕ್ಕಾ ಜರತ್ಕಾರುವು "ಸರ್ಪರಾಜಾ! ಹಾಗಿದ್ದರೆ ನಾನು ವಿವಾಹವಾಡಿಕೊಳ್ಳುವೆನು. ಆದರೆ, ಅವಳನ್ನು ನಾನುಮಾತ್ರ ರಕ್ಷಿಸಲಾರೆನು. ಇದು ಖಂಡಿತವು. ಅಷ್ಟೇ ಅಲ್ಲ! ಅವಳು ನನ್ನ ಮನಸ್ಸಿಗೆ ಅನುಸಾರವಾಗಿ ನಡೆಯದಿದ್ದರೂ, ಒಡನೆಯೇ ನಾನು ಅವಳನ್ನು ಬಿಟ್ಟು ಹೊರಟುಹೋಗುವೆನು" ಎಂದನು. ಅದಕ್ಕೆಲ್ಲ ವಾಸುಕಿಯು ಸಮ್ಮತಿಸಿ ವಾಗ್ದಾನಮಾಡಿಕೊಟ್ಟಮೇಲೆ ಜರತ್ಕಾರುವು ವಾಸುಕಿಯ ಗೃಹಕ್ಕೆ ಹೋದನು.

ಧರ್ಮಾತ್ಮನೂ, ಮಹಾವ್ರತವುಳ್ಳವನೂ, ತಪೋವೃದ್ಧನೂ, ಮಂತ್ರಜ್ಞರಲ್ಲಿ ಶ್ರೇಷ್ಠನೂ ಆದ ಜರತ್ಕಾರುವು ವೇದಶಾಸ್ತ್ರೋಕ್ತವಾದ ಮಂತ್ರಗಳೊಡನೆ ಅವಳ ಕೈಯನ್ನು ಹಿಡಿದನು. ಆಮೇಲೆ ಅವನು ವಾಸುಕಿಗೆ ಸಮ್ಮತವಾದ ಒಂದು ಮನೆಯನ್ನು ನೋಡಿ, ಅನೇಕ ಮಹರ್ಷಿಗಳಿಂದ ಸ್ತುತಿಸಲ್ಪಡುತ್ತ, ತನ್ನ ಭಾರ್ಯೆಯೊಡನೆ ಅಲ್ಲಿಗೆ ಹೊರಟನು. ವಿಧ್ಯುಕ್ತವಾಗಿ ಗೃಹಪ್ರವೇಶವು ನಡೆಯಿತು. ಉತ್ತಮವಾದ ಮೇಲುಹೊದ್ದಿಕೆಗಳಿಂದ ಕೂಡಿದ ಶಯನಾಸನಗಳೆಲ್ಲವೂ ಅಲ್ಲಿ ಸಿದ್ಧವಾಗಿದ್ದುವು. ಅಲ್ಲಿ ಭಾರ್ಯಾಸಮೇತನಾಗಿ ಜರತ್ಕಾರುವು ಸುಖದಿಂದ ಇರುತಿದ್ದನು. ಹೀಗಿರುತ್ತ ಅವನು ತನ್ನ ಪತ್ನಿಯೊಡನೆ ಕೆಲವು ನಿರ್ಣಯಗಳನ್ನುಮಾಡಿಕೊಂಡನು. "ಎಲೆ ಪ್ರಿಯೆ! ನನಗೆ ಇಷ್ಟವಿಲ್ಲದ ಕಾರ್ಯವೊಂದನ್ನೂ ನೀನು ಮಾಡಕೂಡದು. ಅದನ್ನು ಬಾಯಿಂದಲೂ ಆಡಬಾರದು. ಹಾಗೇನಾದರೂ ನೀನು ಮಾಡಿದರೆ ಆಕ್ಷಣವೇ ನಿನ್ನನ್ನು ಬಿಟ್ಟು ಹೊರಟುಹೋಗುವೆನು. ಆಮೇಲೆ ನಿನ್ನ ಮನೆಯಲ್ಲಿ ವಾಸಮಾಡುವುದೂ ಇಲ್ಲ. ಈ ನನ್ನ ಮಾತಿಗೆ ನೀನು ಬದ್ಧಳಾಗಿರಬೇಕು" ಎಂದನು. ಆಗ ಆ ವಾಸುಕಿಯ ತಂಗಿಯು ಇವನ ನಿರ್ಬಂಧಗಳನ್ನು ಕೇಳಿ ಮನಸ್ಸಿನಲ್ಲಿ ಬಹಳ ಕಷ್ಟಪಡುತ್ತ, ಕೊನೆಗೆ ವಿಧಿಯಿಲ್ಲದೆ ಹಾಗೆಯೇ ಆಗಲೆಂದು ಒಪ್ಪಿದಳು. ಅದರಂತೆಯೇ ಅವಳು ಪತಿ

ಯನ್ನು ಪಚರಿಸುತಿದ್ದಳು. ಯಾವಾಗಲೂ ದೇಹವನ್ನು ದಂಡಿಸಿ ಕಷ್ಟಪಡುವುದೇ ಸ್ವಭಾವವಾಗಿ ಉಳ್ಳ ತನ್ನ ಪತಿಯಲ್ಲಿ, *ನಯ ಭಯ ಭಕ್ತಿಗಳಿಂದ ಅವನಿಗೆ ಅನುಕೂಲಳಾಗಿಯೇ ವರ್ತಿಸುತ್ತ, ಅವನ ಪ್ರೀತಿಯು ತನ್ನಲ್ಲಿ ಸ್ವಲ್ಪವೂ ತಗ್ಗದಹಾಗೆ ಬಹಳ ಜಾಗರೂಕಳಾಗಿದ್ದಳು. ಒಮ್ಮೆ ಅವಳು ಋತುಸ್ನಾನಮಾಡಿ ಬಂದು, ಧರ್ಮರೀತಿಯಿಂದ ಮಹರ್ಷಿಯನ್ನು ಸೇವಿಸಿದಳು. ಅವಳಲ್ಲಿ ಅಗ್ನಿಯಂತೆ ಶುದ್ಧವಾಗಿಯೂ, ಅದ್ಭುತ ತೇಜಸ್ಸಿನಿಂದ ಕೂಡಿದುದಾಗಿಯೂ ಇರುವ ಗರ್ಭವೊಂದು ಅಂಕುರಿಸಿ, ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಬೆಳೆಯುತ್ತ ಬಂದಿತು. ಆಮೇಲೆ ಸ್ವಲ್ಪ ದಿನಗಳಿಗೆ ಜರತ್ಕಾರುವು ಬಹಳ ಆಯಾಸಗೊಂಡು ಬಂದು, ಅವಳ ತೊಡೆಯಮೇಲೆ ತನ್ನ ತಲೆಯನ್ನಿಟ್ಟು ಮಲಗಿದ್ದನು. ಅವನಿಗೆ ಮೈಮರೆಯುವಹಾಗೆ ನಿದ್ರೆ ಬಂದಿತು. ಇಷ್ಟರಲ್ಲಿ ಸೂರ್ಯಾಸ್ತಮಯವಾಯಿತು. ಆಗ ಅವಳಿಗೆ ಮನಸ್ಸಿನಲ್ಲಿ ಒಂದು ಆಲೋಚನೆಯು ಹುಟ್ಟಿತು. ಸಂಜೆಯಹೊತ್ತಿನಲ್ಲಿ ಇನ್ನೂ ಇವನು ಮಲಗಿದ್ದರೆ, ಅವನ ಸಂಧ್ಯಾಕರ್ಮಗಳೆಲ್ಲವೂ ತಪ್ಪಿಹೋಗುವುವೆಂದು ಅವಳ ಮನಸ್ಸಿಗೆ ಭೀತಿ ಹುಟ್ಟಿತು. ಆಗ ಅವಳು ತನ್ನಲ್ಲಿ ತಾನು "ಈಗ ನಾನೇನು ಮಾಡಲಿ? ಪತಿಯನ್ನು ಎಬ್ಬಿಸಲೇ? ಇಲ್ಲವೇ ಸುಮ್ಮನಿರಲೆ? ನನ್ನ ಪತಿಯಾದರೋ ಯಾವಾಗಲೂ ಕಷ್ಟಪಡುವ ಸ್ವಭಾವವುಳ್ಳವನು. ದೇಹಶ್ರಮದಿಂದ ಬಳಲಿ ಬಂದು ಸುಖನಿದ್ರೆಮಾಡುತ್ತಿರುವಾಗ, ಅವನಿಗೆ ನಿದ್ರಾಭಂಗವನ್ನು ಮಾಡಿ ಎಬ್ಬಿಸಿದರೆ, ನಾನು ಅಪರಾಧಿನಿಯಾಗುವೆನು. ಅವನ ಕೋಪಕ್ಕೆ ಗುರಿಯಾಗುವೆನು. ಈಗ ಅವನನ್ನು ಎಬ್ಬಿಸದೆ ಸುಮ್ಮನಿದ್ದಪಕ್ಷದಲ್ಲಿ, ಅವನ ಧರ್ಮಲೋಪಕ್ಕೆ ಅವಕಾಶ

---

* ಇಲ್ಲಿ "ಉಪಾಯೈಃ ಶ್ವೇತಕಾಕೀಯೈಃ" ಎಂದು ಮೂಲವು. ಶ್ವಾ+ಏತ+ಕಾಕಗಳ ಮಾರ್ಗಗಳಿಂದ ಎಂದರೆ, ನಾಯಂತೆ ಜಾಗರೂಕತೆ ಮತ್ತು ವಿಧೇಯತೆ ಜಿಂಕೆಯಂತೆ ಭಯ, ಕಾಗೆಯಂತೆ ಸಮಯವರಿತು ಕೆಲಸಮಾಡುವುದು, ಈ ಗುಣಗಳಿಂದ ಅವಳು ಪತಿಯನ್ನು ಸೇವಿಸುತ್ತಿದ್ದಳೆಂದು ಕೆಲವರು ಅರ್ಥಮಾಡುವರು. ಬೇರೆ ಕೆಲವರು ಶ್ವೇತಕಾಕವೆಂದರೆ ಕೊಕ್ಕರೆಯೆಂದೂ, ಹೆಣ್ಣುಕೊಕ್ಕರೆಯು ಗಂಡುಪಕ್ಕಿಯನ್ನು ಮಳೆಗಾಲದಲ್ಲಿ ಗೂಡಿನಲ್ಲಿಯೇ ಇರಿಸಿ ಬಹಳ ಎಚ್ಚರಿಕೆಯಿಂದ ಕಾಪಾಡುವಂತೆ ಇವಳೂ ಪತಿಸೇವೆಯನ್ನು ಮಾಡುತ್ತಿದ್ದಳೆಂದೂ ಹೇಳುವರು.

ವಾಗುವುದು. ಹೀಗಿರುವಾಗ, ನಿದ್ರಾಭಂಗದಿಂದ ಪತಿಯುಕೋಪಕ್ಕೆ ಪಾತ್ರ ಳಾಗುವುದು ಸಾಧುವೆ? ಧರ್ಮಲೋಪಕ್ಕೆ ಅವಕಾಶಕೊಡುವುದು ಮೇಲೆ? ಇದರಲ್ಲಿ ಯಾವುದು ಪ್ರಬಲವು?'' ಎಂದು ಮನಸ್ಸಿನಲ್ಲಿಯೇ ಯೋಚಿಸಿ ದಳು. ಕೊನೆಗೆ ಪತಿಯು ಕೋಪಕ್ಕೆ ತಾನು ಪಾತ್ರಳಾದರೂ ಚಿಂತೆಯಿಲ್ಲ. ಧರ್ಮಲೋಪವಾಗಬಾರದೆಂದು ನಿಶ್ಚಯಿಸಿ, ಮಹಾತಪಸ್ವಿಯೂ, ಅಗ್ನಿ ಯಂತೆ ತೇಜಸ್ವಿಯೂ ಆದ ತನ್ನ ಪತಿಯನ್ನು ಕುರಿತು ಬಹಳ ಮೃದುಮ ಧುರವಾಕ್ಯದಿಂದ ಹೀಗೆಂದು ಹೇಳುವಳು. ''ಮಹಾಭಾಗಾ! ಏಳು! ಸೂರ್ಯನು ಅಸ್ತಂಗತನಾಗುತ್ತಿರುವನು. ಎದ್ದು ಆಚಮನವನ್ನು ಮಾಡಿ, ಸಂಧ್ಯೋಪಾಸನವನ್ನು ನಡೆಸು. ಧರ್ಮಸಾಧಕವಾದುದರಿಂದ ರಮಣೀ ಯವಾಗಿಯೂ, ಭೂತಾದಿಗಳ ಶಕ್ತಿಯನ್ನು ಹೆಚ್ಚಿಸುವುದರಿಂದ ಭಯಂ ಕರವಾಗಿಯೂ ಇರುವ ಸಂಜೆಯು ಸಮಿಾಪಿಸಿತು. ಆಗಲೇ ಪಶ್ಚಿಮ ದಿಕ್ಕಿನಲ್ಲಿ ಸಂಧ್ಯಾರಾಗವು ಕಾಣಿಸುತ್ತಿದೆ. ಏಳು'' ಎಂದಳು. ಈ ಮಾತ ನ್ನು ಕೇಳಿ ಜರತ್ಕಾರುವಿಗೆ ಎಚ್ಚರವುಂಟಾಯಿತು ಆಗಲೇ ನಿದ್ರೆಯ ಬಿಗುಡಿನಿಂದುಂಟಾದ ಕೋಪವು ಅವನ ಮನಸ್ಸನ್ನಾವರಿಸಿತು. ಅವನ ತುಟಿಗಳು ನಡುಗಲಾರಂಭಿಸಿದುವು. ಅವನು ಅತಿಕೋಪದಿಂದ ಪತ್ನಿ ಯನ್ನು ನೋಡಿ ''ಎಲೆ ನಾಗಕನ್ಯೆ! ನೀನು ನನಗೆ ಬಹಳ ಅವಮಾನವ ನ್ನುಂಟುಮಾಡಿದೆ ನನಗೆ ಇಷ್ಟವಿಲ್ಲದ ಕಾರ್ಯವನ್ನು ನಡೆಸಿದೆ. ಇನ್ನು ನಾನು ನಿನ್ನ ಬಳಿಯಲ್ಲಿ ಇರಲಾರೆನು. ಈಗಲೇ ನಿನ್ನನ್ನು ಬಿಟ್ಟು ಹೋ ಗುವೆನು. ಎಲೆ ಮೂಢೆ! ನಾನು ನಿದ್ರಿಸುತ್ತಿರುವಾಗ ನನ್ನ ಸಂಧ್ಯಾಕಾ ಲವು ಮಿಾರಿಹೋಗುವಂತೆ ಸೂರ್ಯನಾದರೂ ಹೇಗೆ ಅಸ್ತಮಿಸಬಲ್ಲನು? ಅವನು ಆ ಕಾರ್ಯದಲ್ಲಿ ಅಶಕ್ತನೆಂದೇ ನನ್ನ ಮನಸ್ಸಿನಲ್ಲಿದ್ದಿತು. ನನ್ನ ಶಕ್ತಿಯನ್ನು ತಿಳಿಯದೆ ನೀನು ಅವಮಾನಗೊಳಿಸಿದೆ. ಇಂತಹ ಅವಮಾನ ಕ್ಕೀಡಾದಮೇಲೆ, ಆ ಸ್ಥಳದಲ್ಲಿ ವಾಸಮಾಡುವುದಕ್ಕೆ ಯಾವ ಸಾಮಾನ್ಯ ಮನುಷ್ಯನಿಗೆ ತಾನೇ ಮನಸ್ಸೊಪ್ಪುವುದು? ಹೀಗಿರುವಾಗ ನನ್ನಂತೆ ಧರ್ಮ ಶೀಲನೂ, ತಪಸ್ವಿಯೂ ಆದವನಿಗೆ ಹೇಳಬೇಕಾದುದೇನು?'' ಎಂದನು. ಈ ಮಾತನ್ನು ಕೇಳಿ ಅವಳ ಹೃದಯವು ನಡುಗಿತು. ಆಗ ಅವಳು ''ಓ ಮಹಾತ್ಮಾ! ನಿಮ್ಮನ್ನು ಅವಮಾನಗೊಳಿಸಬೇಕೆಂದು ನಾನು ಎಚ್ಚರಗೊ

ಳಿಸಲಿಲ್ಲ. ನಿಮಗೆ ಧರ್ಮಲೋಪವಾಗಬಾರದೆಂಬುದಕ್ಕಾಗಿಯೇ ನಾನು ಹೀಗೆ ಮಾಡಿದೆನು" ಎಂದಳು. ಎಷ್ಟು ಹೇಳಿದರೂ ಜರತ್ಕಾರುವು ಅವಳ ಮಾತಿಗೆ ಕಿವಿಗೊಡದೆ ಅವಳನ್ನು ಬಿಟ್ಟುಹೋಗುವುದಾಗಿಯೇ ನಿಶ್ಚಯಿಸಿ, 'ಎಲೆ ನಾಗಕನ್ಯೆ! ನನ್ನ ಬಾಯಿಂದ ಹೊರಟ ಮಾತು ಅಸತ್ಯವಾಗದು. ನಾನು ಹೊರಡುವೆನು. ನಾನು ಮೊದಲೇ ನಿನ್ನೊಡನೆ ರಹಸ್ಯವಾಗಿ ಸಂಕೇತವನ್ನು ಮಾಡಿಕೊಂಡೆನಲ್ಲವೆ? ಅದರಂತೆ ನಾನು ನಡೆಸಲೇಬೇಕು. ನಾನು ಇದುವರೆಗೆ ಇಲ್ಲಿ ಸುಖವಾಗಿದ್ದೆನು. ನೀನು ಭಯಪಡಬೇಡ ನನಗಾಗಿ ದುಃಖಿಸಲೂ ಬೇಡ. ನಾನು ಹೊರಟುಹೋದಮೇಲೆ ನಿನ್ನ ಸಹೋದರನಾದ ವಾಸುಕಿಗೆ "ಆ ಮಹಾತ್ಮನು ಹೊರಟುಹೋದ"ನೆಂದು ಮಾತ್ರ ತಿಳಿಸಿಬಿಡು" ಎಂದನು. ಹೀಗೆ ಆ ಮಹರ್ಷಿಯು ಹೇಳಿದ ಮಾತನ್ನು ಕೇಳಿದೊಡನೆ ಪರಮಸುಂದರಿಯೂ, ಸುಕುಮಾರಿಯೂ ಆದ ಆಕೆಯು ಬಹಳ ಚಿಂತೆಗೂ, ವ್ಯಸನಕ್ಕೂ ಈಡಾದಳು. ಅವಳ ಕಣ್ಣಿನಲ್ಲಿ ನೀರು ತುಳುಕಿತು. ಮಾತುಗಳು ತಡವರಿಸಿದುವು. ಅವಳ ಬಾಯಿಯು ಒಣಗಿಹೋಯಿತು ಹೃದಯವು ಗಡಗಡನೆ ನಡುಗುತ್ತಿತ್ತು. ಹಾಗಿದ್ದರೂ ಅವಳು ಸ್ವಲ್ಪ ಧೈರ್ಯವನ್ನು ತಂದುಕೊಂಡು ಮಹರ್ಷಿಯ ಮುಂದೆ ಕೈ ಮುಗಿದು ನಿಂತು "ಓ ಮಹಾತ್ಮಾ! ನೀನು ಧರ್ಮಗಳೆಲ್ಲವನ್ನೂ ಬಲ್ಲವನು. ಇಂತಹ ನೀನು ಯಾವ ತಪ್ಪನ್ನೂ ತಿಳಿಯದ ನನ್ನನ್ನು ಬಿಟ್ಟುಹೋಗುವುದು ನಿನಗೆ ಧರ್ಮವಲ್ಲ. ನಾನೂ ಕೂಡ ಧರ್ಮಕ್ಕೆ ಲೋಪವಿಲ್ಲದೆ ನಿನಗೆ ಪ್ರಿಯವಾದ ರೀತಿಯಲ್ಲಿಯೇ ಎಷ್ಟೋ ಎಚ್ಚರಿಕೆಯಿಂದ ನಡೆಯುತಿದ್ದವಳು. ನನ್ನನ್ನು ಬಿಟ್ಟುಹೋಗುವುದು ನ್ಯಾಯವಲ್ಲ. ಇದಲ್ಲದೆ ನನ್ನಣ್ಣನು ಯಾವ ಪ್ರಯೋಜನಕ್ಕಾಗಿ ನನ್ನನ್ನು ತಂದು ನಿನಗೆ ಕೊಟ್ಟನೋ, ಆ ಪ್ರಯೋಜನವನ್ನು ಪಡೆಯದೆಯೇ ನಿನ್ನನ್ನು ಬಿಟ್ಟುಹೋಗುವಹಾಗೆ ಮಾಡಿದ ನನ್ನ ವಿಷಯದಲ್ಲಿ ಅವನು ಏನು ಹೇಳುವನು? ತಾಯಿಯ ಶಾಪದಿಂದ ದೊಡ್ಡ ಅನರ್ಥಕ್ಕೊಳಗಾಗಿರುವ ನಮ್ಮ ಜ್ಞಾತಿಗಳ ರಕ್ಷಣೆಗಾಗಿ ಸಂತಾನವಾಗಬೇಕಾಗಿದೆ. ಇನ್ನೂ ಆ ಸಂತಾನವಾಗಿಲ್ಲ. ನಮ್ಮಲ್ಲಿ ಸಂತಾನವು ಹುಟ್ಟಿದರಲ್ಲವೇ ನಮ್ಮ ಬಂಧುವರ್ಗಕ್ಕೆಲ್ಲ ಕ್ಷೇಮವುಂಟಾಗುವುದು. ಇದಲ್ಲದೆ ನನಗೂ ನಿನ್ನೊಡನೆ ಆದ

ಈ ಸಂಬಂಧವು ನಿಷ್ಫಲವಾಗಬಾರದಲ್ಲವೆ! ಓ ಮಹಾತ್ಮಾ! ನಮ್ಮ ಕುಲ ಕ್ಷೇಮಕ್ಕಾಗಿ ನಿನ್ನನ್ನು ತಿರುಗಿ ಬೇಡಿಕೊಳ್ಳುವೆನು. ನಿನ್ನಿಂದ ನನ್ನಲ್ಲಿ ಗರ್ಭವುಂಟಾದುದು ಇನ್ನೂ ಸ್ಪಷ್ಟವಾಗಿ ನಿಶ್ಚಯಿಸಲು ಸಾಧ್ಯವಿಲ್ಲ. ಇನ್ನುಮೇಲೆ ನಾನು ಯಾವ ತಪ್ಪನ್ನೂ ಮಾಡುವವಳಲ್ಲ. ನನ್ನಲ್ಲಿ ಗರ್ಭವುಂಟಾದುದೂ ತಿಳಿಯದೆ, ನಾನು ಅಂತಹ ತಪ್ಪನ್ನೂ ಮಾಡದೆ ಇರುವ ಸ್ಥಿತಿಯಲ್ಲಿ, ನನ್ನನ್ನು ಬಿಟ್ಟುಹೋಗುವುದು ಮಹಾತ್ಮನಾದ ನಿನಗೆ ಉಚಿತವೆ?" ಎಂದಳು. ಅದಕ್ಕಾ ಜರತ್ಕಾರುವು, ಸಕಾರಣವಾಗಿಯೂ, ಉಚಿತವಾಗಿಯೂ ಇರುವ ಮಾತುಗಳಿಂದ ಅವಳನ್ನು ಸಮಾಧಾನಪಡಿಸುತ್ತ, "ಎಲೆ ಸುಂದರೀ! ಅಗ್ನಿಸಮಾನವಾದ ತೇಜಸ್ಸುಳ್ಳ ಒಂದು ಗರ್ಭವು ನಿನ್ನಲ್ಲಿ ಬೆಳೆಯುತ್ತಿರುವುದು. ಆ ನಿನ್ನ ಮಗನು ವೇದವೇದಾಂಗಪಾರಂಗತನಾಗಿ, ಧಾರ್ಮಿಕರಲ್ಲಿ ಮೇಲೆನಿಸಿಕೊಳ್ಳುವನು. ನೀನು ಚಿಂತಿಸಬೇಡ" ಎಂದು ಹೇಳಿ, ಒಡನೆಯೇ ಆ ಜರತ್ಕಾರುವು ಉಗ್ರತಪಸ್ಸನ್ನು ಮಾಡಲು ನಿಶ್ಚಯಿಸಿ ಅಲ್ಲಿಂದ ಹೊರಟುಹೋದನು.

ಇದು ನಾಲ್ವತ್ತೇಳನೆಯ ಅಧ್ಯಾಯವು.

---

{ ವಾಸುಕಿಗೂ ಅವನ ತಂಗಿಗೂ ನಡೆದ ಸಂಭಾಷಣೆಗಳು. ಆಸ್ತೀಕನ ಜನನವು. ಆಸ್ತೀಕನೆಂಬ ಹೆಸರು ಬಂದ ಕಾರಣವು. }

ಅತ್ತಲಾಗಿ ಪತಿಯು ತನ್ನನ್ನು ಬಿಟ್ಟುಹೋದೊಡನೆ, ವಾಸುಕಿಯ ತಂಗಿಯು ತನ್ನ ಅಣ್ಣನ ಬಳಿಗೆ ಬಂದು, ನಡೆದ ಸಂಗತಿಯನ್ನೆಲ್ಲ ತಿಳಿಸಿದಳು. ಈ ಅಪ್ರಿಯವಾರ್ತೆಯನ್ನು ಕೇಳಿ ವಾಸುಕಿಯು, ತನ್ನ ತಂಗಿಗಿಂತಲೂ ಹೆಚ್ಚಾಗಿ ದುಃಖಿಸುತ್ತ "ಭದ್ರೆ! ನಿನ್ನನ್ನು ನಾನು ಆ ಮಹರ್ಷಿಗೆ ಕೊಟ್ಟ ಕಾರಣವೇನೆಂಬುದೂ, ಅದರ ಪ್ರಯೋಜನವೂ ನಿನಗೂ ತಿಳಿದುದೇ! ಸರ್ಪಗಳ ರಕ್ಷಣಕ್ಕಾಗಿ ನಾನು ಇಷ್ಟು ಪ್ರಯತ್ನಮಾಡಬೇಕಾಯಿತು. ನಿನ್ನಲ್ಲಿ ಒಂದು ಸಂತಾನವಾದರೂ ಆಗಿದ್ದರೆ, ಅವನಿಂದ ನಮಗೆ ಸರ್ಪಯಾಗದಿಂದುಂಟಾದ ಭಯವು ನೀಗುವುದೆಂದು ಹಿಂದೆ ಬ್ರಹ್ಮದೇ

ವನು ದೇವತೆಗಳೊಡನೆ ಹೇಳಿರುವನು. ಈಗ ನಾನು ನಿನಗೆ ಮಾಡಿದ ವಿವಾಹಕಾರ್ಯವು ನಿಷ್ಫಲವಾಗದಂತೆ ನಿನ್ನಲ್ಲಿ ಆ ಮಹರ್ಷಿಯಿಂದ ಗರ್ಭ ವೇನಾದರೂ ಉಂಟಾಗಿರುವುದೆ? ಇಂತಹ ವಿಚಾರಗಳನ್ನೆಲ್ಲ ನಾನು ನಿನ್ನ ನ್ನು ಕೇಳಬಾರದಾಗಿದ್ದರೂ, ಕಾರ್ಯವು ಬಹಳ ಮಹತ್ತಾದುದರಿಂದ ನ್ಯಾಯವನ್ನು ಮೀರಿ ಕೇಳಬೇಕಾಗಿದೆ. ನಮ್ಮ ಕಾರ್ಯಸಿದ್ಧಿಯಾಗಿದೆಯೋ ಇಲ್ಲವೋ ಹೇಳು! ನಿನ್ನ ಪತಿಯೋ ನೋ ಮಹಾತಪಸ್ವಿ! ಅವನನ್ನು ತಡೆ ದು ನಿಲ್ಲಿಸುವುದು ಎಂತವರಿಗೂ ಸಾಧ್ಯವಲ್ಲವೆಂಬುದನ್ನು ನಾನೂ ಬಲ್ಲೆನು. ಆದುದರಿಂದ, ಈಗ ನಾನು ಅವನನ್ನು ಹಿಂಬಾಲಿಸಿ ಹೋಗಿ ಸಮಾಧಾನ ಮಾಡುವುದೂ ನನಗೆ ಇಷ್ಟವಿಲ್ಲ. ಒಂದುವೇಳೆ ಅವನು ನನ್ನನ್ನು ಶಪಿ ಸಿದರೂ ಶಪಿಸಬಹುದು. ತಂಗೀ! ನಿನ್ನ ಗಂಡನು ನಿನ್ನಲ್ಲಿ ಅತೃಪ್ತನಾಗಿ ಹೋಗಲು ಕಾರಣವೇನು? ಅವನು ನಿನ್ನಲ್ಲಿ ಹೇಗೆ ವರ್ತಿಸುತ್ತಿದ್ದನೋ ಅದನ್ನೆಲ್ಲ ಮುಚ್ಚುಮರೆಯಿಲ್ಲದೆ ನನಗೆ ತಿಳಿಸು. ನನ್ನ ಮನಸ್ಸಿನಲ್ಲಿ ಬಹು ಕಾಲದಿಂದ ನಾಟಿರುವ ಶಲ್ಯವನ್ನು ಕಿತ್ತುಹಾಕು" ಎಂದನು ಆಗ ಆಕೆ ಯು ದುಃಖಾಕುಲನಾದ ತನ್ನಣ್ಣನನ್ನು ಸಮಾಧಾನಗೊಳಿಸುತ್ತ "ಅಣ್ಣಾ! ನಾನೂ ಆ ಮಹಾತ್ಮನನ್ನು ಸಂತಾನವಿಷಯವಾಗಿ ಪ್ರಶ್ನೆಮಾಡಿದಮೇಲೆ ಅವನು 'ಅಸ್ತಿ' (ಸಂತಾನವಿದೆ) ಎಂಬೀ ಮಾತನ್ನು ಮಾತ್ರ ಸೂಚಿಸಿ ಹೊ ರಟುಹೋದನು. ಅವನೇನೋ ಪರಿಹಾಸ್ಯಕ್ಕಾದರೂ ಸುಳ್ಳಾಡತಕ್ಕವನಲ್ಲ ವೆಂದು ನಾನು ಚೆನ್ನಾಗಿ ಬಲ್ಲೆನು. ಅವನು ಯಾವಾಗಲೂ ಸುಳ್ಳಾಡಿದಂತೆ ನನ್ನ ಮನಸ್ಸಿಗೆ ತೋರಲಿಲ್ಲ. ಹೀಗಿರುವಾಗ ಇಂತಹ ಮಹಾಸಂಕಟಗ ಳಲ್ಲಿ ಅವನು ಅಸತ್ಯವನ್ನಾಡಲಾರನೆಂದು ಹೇಳಬೇಕೆ? ಅವನು ಹೊರಡು ವಾಗ ನನ್ನನ್ನು ನೋಡಿ, "ಎಲೆ ನಾಗಕನ್ಯೆ! ನಿಮ್ಮ ಕಾರ್ಯೋದ್ದೇಶ ವನ್ನು ಕುರಿತು ಚಿಂತಿಸಬೇಡ! ಅಗ್ನಿಸೂರ್ಯರಂತೆ ತೇಜಸ್ಸುಳ್ಳ ಪುತ್ರನು ನಿನ್ನಲ್ಲಿ ಹುಟ್ಟುವನು" ಎಂದು ಹೇಳಿದನು. ಆದುದರಿಂದ ನೀನು ನಿನ್ನ ಮನಸ್ಸಿನ ಚಿಂತೆಯನ್ನು ಬಿಡು" ಎಂದಳು.

ಆಗ ವಾಸುಕಿಯು "ಹಾಗಿದ್ದರೆ ಸರಿ!" ಎಂದು ಹೇಳಿ, ಮನಸ್ಸಿನಲ್ಲಿ ಬಹಳ ಸಂತೋಷಗೊಂಡನು. ಆಮೇಲೆ ವಾಸುಕಿಯು ಆ ತನ್ನ ತಂಗಿ

ಯನ್ನು ಪ್ರಿಯವಾಕ್ಯಗಳಿಂದಲೂ, ಆಗಾಗ ಅವಳಿಗೆ ಬೇಕಾದ ಧನವನ್ನು ಕೊಡುವುದರಿಂದಲೂ, ಗೌರವಸಮ್ಮಾನಗಳಿಂದಲೂ ಸಂತೋಷಗೊಳಿಸುತ್ತ ಬಹಳ ಎಚ್ಚರಿಕೆಯಿಂದ ಕಾಪಾಡುತಿದ್ದನು. ಅವಳ ಗರ್ಭವು ಆಕಾಶದಲ್ಲಿ ಶುಕ್ಲಪಕ್ಷದ ಚಂದ್ರನಂತೆ ತೇಜೋವಿಶಿಷ್ಟವಾಗಿ ಮೇಲೆಮೇಲೆ ಬೆಳೆಯುತ್ತ ಬಂದಿತು. ಪ್ರಸವಕಾಲವೂ ಸಮಿಾಪಿಸಿತು. ಪಿತೃಮಾತೃವಂಶಗಳೆರಡಕ್ಕೂ ಭಯನಿವಾರಕನಾಗಿ, ದೇವಕುಮಾರನಂತಿರುವ ಪುತ್ರನು ಹುಟ್ಟಿದನು. ಆ ಪುತ್ರನು ವಾಸುಕಿಯ ಗೃಹದಲ್ಲಿಯೇ ಬೆಳೆಯುತ್ತ ಭೃಗುಪುತ್ರನಾದ ಚ್ಯವನಕುಮಾರನಲ್ಲಿ ವೇದವೇದಾಂಗಗಳನ್ನೆಲ್ಲ ಅಧ್ಯಯನಮಾಡಿದನು. ಅವನು ಬಾಲ್ಯದಿಂದಲೇ ಶಾಂತ್ಯಾದಿಗುಣಗಳಲ್ಲಿಯೂ, ಬುದ್ಧಿಯಲ್ಲಿಯೂ ಮೇಲೆನಿಸಿ, ಬ್ರಹ್ಮಚರ್ಯವನ್ನು ನಡೆಸಿದನು. ಅವನಿಗೆ ಆಸ್ತೀಕನೆಂಬ ಹೆಸರು ಬಂದ ಕಾರಣವನ್ನು ಹೇಳುವೆನು ಕೇಳು. ಅವನು ಗರ್ಭದಲ್ಲಿರುವಾಗಲೇ ಅವನ ತಂದೆಯು ತನ್ನ ಪತ್ನಿಯೊಡನೆ 'ಅಸ್ತಿ' ಎಂದು ಹೇಳಿಹೋದನಲ್ಲವೆ? ಅದರಿಂದಲೇ ಅವನಿಗೆ ಆಸ್ತೀಕನೆಂಬ ಹೆಸರಾಯಿತು. ಬಾಲ್ಯದಿಂದಲೇ ಮಹಾ ಧೀಮಂತನಾದ ಅವನನ್ನು ವಾಸುಕಿಯು ಬಹಳ ಅಕ್ಕರೆಯಿಂದ ಕಾಪಾಡುತ್ತ ಬಂದನು. ಆ ಕುಮಾರನು ದೇವತಾಶ್ರೇಷ್ಠನಾದ ಪರಮಶಿವನಂತೆ ಸುವರ್ಣಛಾಯೆಯುಳ್ಳ ಮೈಯಿಂದೊಪ್ಪುತ್ತ, ಸರ್ಪಕುಲಕ್ಕೆಲ್ಲ ಆನಂದವರ್ಧಕನಾಗಿ ಬೆಳೆಯುತಿದ್ದನು.

ಇದು ನಾಲ್ವತ್ತೆಂಟನೆಯ ಅಧ್ಯಾಯವು.



{ ಜನಮೇಜಯನು ಮಂತ್ರಿಗಳ ಮೂಲಕವಾಗಿ ತನ್ನ ತಂದೆ ಯಾದ ಪರೀಕ್ಷಿತ್ತಿನ ಮರಣಕ್ರಮವನ್ನು ತಿಳಿಸುದು. }

ಶೌನಕನು ಸೂತಪುತ್ರನನ್ನು ಕುರಿತು “ಸೂತಕುಮಾರಾ! ಜನಮೇಜಯನು ತನ್ನ ಮಂತ್ರಿಗಳ ಮುಖದಿಂದ ಕೇಳಿದ ತಂದೆಯ ಮರಣವೃತ್ತಾಂತವನ್ನೆಲ್ಲ ನನಗೆ ಸವಿಸ್ತರವಾಗಿ ತಿಳಿಸಬೇಕು” ಎನಲು, ಸೌತಿಯು “ವಿಪ್ರೋತ್ತಮಾ! ಕೇಳು! ಇದೇ ವಿಚಾರವನ್ನು ಕುರಿತು ಜನಮೇಜಯನು ಹೇಗೆ ಪ್ರಶ್ನೆಮಾಡಿದನೋ, ಅದಕ್ಕೆ ಮಂತ್ರಿಗಳು ಹೇಗೆ ಉತ್ತರವನ್ನು

ಹೇಳಿದರೋ ಅವನ್ನೆಲ್ಲ ವಿವರವಾಗಿ ಹೇಳುವೆನು. ಜನಮೇಜಯನು ಮಂತ್ರಿಗಳನ್ನು ಕರೆಸಿಕೊಂಡು "ಓ ಅಮಾತ್ಯರೇ! ನನ್ನ ತಂದೆಯು ಅವನ ಆಯುಷ್ಕಾಲವು ಮುಗಿದಾಗ ಹೇಗೆ ಮರಣಹೊಂದಿದನೋ ಅದನ್ನೆಲ್ಲ ಆಮೂಲಾಗ್ರವಾಗಿ ನೀವು ಬಲ್ಲಿರಿ. ಆ ವೃತ್ತಾಂತವನ್ನೆಲ್ಲ ನಿಮ್ಮಿಂದ ನಾನು ಕೇಳಿ, ಅದರಮೇಲೆ ಲೋಕಕ್ಕೆ ಹಿತವಾದ ಕಾರ್ಯವೇನಾದರೂ ಇದ್ದರೆ ಅದನ್ನು ನಡೆಸುವೆನು. ಹಾಗಿಲ್ಲದಿದ್ದರೆ ನಾನು ಅದಕ್ಕೆ ಕೈಯಿಕ್ಕಲಾರೆನು" ಎಂದನು. ಆ ಮಂತ್ರಿಗಳೆಲ್ಲರೂ ಮಹಾಪ್ರಾಜ್ಞರು. ಧರ್ಮಗಳನ್ನೆಲ್ಲ ಚೆನ್ನಾಗಿ ಬಲ್ಲವರು. ಅವರು ಜನಮೇಜಯನನ್ನು ಕುರಿತು "ರಾಜಾ! ನೀನು ಕೇಳಿದಂತೆ ಮಹಾತ್ಮನಾದ ನಿನ್ನ ತಂದೆಯ ಚರಿತ್ರವನ್ನೂ, ಅವನು ಮರಣಕ್ಕೀಡಾದ ವೃತ್ತಾಂತವನ್ನೂ ತಿಳಿಸುವೆವು. ನಿನ್ನ ತಂದೆಯು ಬಹಳ ಧರ್ಮಾತ್ಮನು. ಮತ್ತು ಮಹಾತ್ಮನು. ಪ್ರಜೆಗಳನ್ನು ನ್ಯಾಯದಿಂದ ಪಾಲಿಸುತಿದ್ದವನು. ಅವನು ನಾಲ್ಕು ವರ್ಣದವರನ್ನೂ ಅವರವರ ಧರ್ಮದಲ್ಲಿ ನೆಲೆಗೊಳಿಸಿ, ಪ್ರಜೆಗಳನ್ನು ಪಾಲಿಸುತಿದ್ದನು. ಧರ್ಮವೇ ಮೂರ್ತಿಭವಿಸಿದಂತೆ ಧರ್ಮಜ್ಞನಾಗಿದ್ದ ಅವನು, ಭೂಮಿಯನ್ನು ಧರ್ಮದಿಂದ ಪಾಲಿಸುತಿದ್ದನು. ಅವನು ಬಹಳ ಶ್ರೀಮಂತನೂ, ಎಣೆಯಿಲ್ಲದ ಪರಾಕ್ರಮಶಾಲಿಯೂ ಆಗಿದ್ದನು. ಅವನನ್ನು ದ್ವೇಷಿಸುವವರೊಬ್ಬರಾದರೂ ಇರಲಿಲ್ಲ. ಅವನೂ ಯಾರನ್ನೂ ದ್ವೇಷಿಸುತ್ತಿರಲಿಲ್ಲ. ಅವನು ಬ್ರಹ್ಮದೇವನಂತೆ ಸರ್ವಭೂತಸಮಾನನಾಗಿ ವರ್ತಿಸುತ್ತಿದ್ದುದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರೂ ತಮ್ಮತಮ್ಮ ವಿಹಿತಕರ್ಮಗಳಲ್ಲಿ ನಿರತರಾಗಿದ್ದರು. ಅವರೆಲ್ಲರೂ ಅನ್ಯೋನ್ಯ ಸೌಹಾರ್ದದಿಂದಲೇ ವರ್ತಿಸುತಿದ್ದರು. ನಿನ್ನ ತಂದೆಯು ಅವರೆಲ್ಲರನ್ನೂ ಸರಿಯಾದ ಸ್ಥಿತಿಯಲ್ಲಿ ನೆಲೆಗೊಳಿಸಿದ್ದನು. ತನ್ನ ದೇಶದಲ್ಲಿದ್ದ ವಿಧವೆಯರು, ಅನಾಥರು, ಅಂಗಹೀನರು ಬಡವರು ಮುಂತಾದವರನ್ನೆಲ್ಲ ಅವನು ಸುಖವಾಗಿರಿಸಿ ಪೋಷಿಸುತಿದ್ದನು. ಬೇರೊಬ್ಬ ಚಂದ್ರನಂತೆ ಸಮಸ್ತ ಪ್ರಾಣಿಗಳಿಗೂ ಆಹ್ಲಾದಕವಾದ ರೂಪದಿಂದ ಶೋಭಿಸುತಿದ್ದನು. ಅವನ ದೇಶದಲ್ಲಿ ಜನರೆಲ್ಲರೂ ತುಷ್ಟರಾಗಿಯೂ, ಪುಷ್ಟರಾಗಿಯೂ ಇದ್ದರು. ಅವನೂ ರಾಜಲಕ್ಷ್ಮೀವಿಶಿಷ್ಟನಾಗಿ, ಸತ್ಯವಾದಿಯಾಗಿ, ದೃಢಪರಾಕ್ರಮನಾಗಿದ್ದನು. ಅವನು ಧನುರ್ವೇದ

ವನ್ನು ಸಾಕ್ಷಾತ್ತಾಗಿ ಕೃಪಾಚಾರ್ಯನಿಂದಲೇ ಕಲಿತವನು. ಅವನು ಶ್ರೀಕೃಷ್ಣನಿಗೆ ಪ್ರೇಮಪಾತ್ರನಾಗಿಯೂ ಇದ್ದನು. ಸಮಸ್ತ ಲೋಕಕ್ಕೂ ಇಷ್ಟನಾಗಿದ್ದನು. ಮಹಾಯಶಸ್ವಿಯಾಗಿಯೂ ಇದ್ದನು. ಆ ನಿನ್ನ ತಂದೆಯು, ಕುರುಗಳೆಲ್ಲರೂ ಯುದ್ಧದಲ್ಲಿ ಕ್ಷೀಣಿಸಿದಮೇಲೆ, ಉತ್ತರೆಯ ಗರ್ಭದಲ್ಲಿ ಹುಟ್ಟಿದುದರಿಂದ **ಪರಿಕ್ಷಿತ್** ಎಂದು ಹೇಳಿಸಿಕೊಂಡನು. ಅವನು ಸುಭದ್ರೆಯ ಪುತ್ರನಾದ ಅಭಿಮನ್ಯುವಿನ ಮಗನು. ಮಹಾ ಬಲಾಢ್ಯನು. ರಾಜಧರ್ಮಗಳಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ ನಿಪುಣನು. ಸರ್ವಗುಣಸಂಪನ್ನನು. ಜಿತೇಂದ್ರಿಯನು ಮನಸ್ಸನ್ನು ನಿಗ್ರಹಿಸಿದವನು. ಧೀಮಂತನು. ಧರ್ಮಗಳನ್ನೇ ಸೇವಿಸತಕ್ಕವನು. ಅರಿಷಡ್ವರ್ಗಗಳನ್ನು ಜಯಿಸಿದವನು. ನೀತಿಶಾಸ್ತ್ರಗಳನ್ನೆಲ್ಲ ಬಲ್ಲವನು. ಅಂತಹ ನಿನ್ನ ತಂದೆಯು ಅರುವತ್ತುವರ್ಷಗಳವರೆಗೆ ಹೀಗೆ ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿದ್ದು, ಕೊನೆಗೆ ಪ್ರಜೆಗಳೆಲ್ಲರಿಗೂ ದುಃಖವನ್ನುಂಟುಮಾಡಿ ಪರಲೋಕವನ್ನು ಸೇರಿದನು. ಅದರಿಂದಾಚೆಗೆ ಕುಲಧರ್ಮದಿಂದ ರಾಜ್ಯವು ನಿನಗೆ ಕೈಸೇರಿತು. ನೀನು ಬಾಲನಾಗಿದ್ದಾಗಲೇ ಈ ರಾಜ್ಯದಲ್ಲಿ ಪಟ್ಟಾಭಿಷೇಕವಾಯಿತು. ಓ ಪುರುಷಶ್ರೇಷ್ಠಾ! ಕುಲಕ್ರಮಾಗತವಾದ ಈ ನಿನ್ನ ರಾಜ್ಯವನ್ನು ಇನ್ನೂ ಸಾವಿರಾರುವರ್ಷಗಳವರೆಗೆ ನೀನು ಸುಖದಿಂದ ಪಾಲಿಸು'' ಎಂದರು.

ಆಮೇಲೆ ಜನಮೇಜಯನು ಆ ಮಂತ್ರಿಗಳನ್ನು ಕುರಿತು ''ಎಲೈ ಮಂತ್ರಿಶ್ರೇಷ್ಠರೇ! ನಮ್ಮ ವಂಶದಲ್ಲಿ ಇದುವರೆಗೆ ಪ್ರಜೆಗಳಿಗೆ ಹಿತವನ್ನುಂಟುಮಾಡದ, ಮತ್ತು ಜನರಿಗೆ ಪ್ರಿಯನಲ್ಲದ ರಾಜನೊಬ್ಬನಾದರೂ ಇದ್ದುದಿಲ್ಲ. ಅದರಲ್ಲಿ ಪ್ರತಿಯೊಬ್ಬ ರಾಜನೂ, ಕೇವಲ ಧರ್ಮಪರರಾದ ತನ್ನ ಹಿರಿಯರ ನಡತೆಯನ್ನು ಕೇಳಿ, ಅದನ್ನೇ ಹಿಂಬಾಲಿಸುತಿದ್ದನೇ ಹೊರತು ಅದನ್ನು ತಪ್ಪಿಹೋದವನಿಲ್ಲ. ನನ್ನ ತಂದೆಯೂ ತನ್ನ ತಾತಂದಿರಾದ ಪಾಂಡವರ ನಡತೆಯನ್ನು ಅನುಸರಿಸಿಯೇ ನಡೆದವನು. ಅಂಥವನಿಗೆ ಅಲ್ಪಾಯುಷ್ಯದಲ್ಲಿ ಮರಣವೇಕೆ ಸಂಭವಿಸಿತು? ಅದರ ಸಂಗತಿಯನ್ನು ಕೇಳಬೇಕೆಂದಿರುವೆನು'' ಎಂದನು. ಆಗ ಮಂತ್ರಿಗಳು ''ಓ ರಾಜೇಂದ್ರಾ! ನಿನ್ನ ತಂದೆಯು ಧನುರ್ಧಾರಿಗಳಲ್ಲಿ ಮೇಲೆನಿಸಿದ್ದವನು. ಇದರಿಂದ ಅವ

ನಿಗೆ ಯಾವಾಗಲೂ ಬೇಟೆಯಾಡುವುದರಲ್ಲಿ ಆಸೆ ಹೆಚ್ಚಾಗಿದ್ದಿತು. ತನ್ನ ಅಜ್ಜನಾದ ಪಾಂಡುವಿನಂತೆಯೇ ಅವನೂ ಆಗಾಗ ಬೇಟೆಗೆ ಹೋಗುತ್ತಿದ್ದನು. ಹೀಗೆ ಮೃಗಯಾಶೀಲನಾದ ಆತನು ರಾಜಕಾರ್ಯವನ್ನು ನಮ್ಮಲ್ಲಿ ಒಪ್ಪಿಸಿ, ಬೇಟೆಗೆ ಹೊರಟು ಒಂದು ಜಿಂಕೆಯನ್ನು ಬಾಣದಿಂದ ಹೊಡೆದನು. ಆ ಜಿಂಕೆಯು ಕಣ್ಣಿಗೆ ಕಾಣದೆ ತಪ್ಪಿಸಿಕೊಂಡುಹೋಯಿತು. ತಾನು ಕಾಲುನಡೆಯಿಂದಲೇ ಅದನ್ನು ಹುಡುಕುತ್ತ ಹೊರಟನು. ಕೈಯಲ್ಲಿ ಕತ್ತಿಯನ್ನೂ, ಇತರಾಯುಧಗಳನ್ನೂ ಹಿಡಿದು, ಎಲ್ಲೆಲ್ಲಿ ಸುತ್ತಿ ಹುಡುಕಿದರೂ ಆರಣ್ಯದಲ್ಲಿ ಅವನಿಗೆ ಮೃಗವು ಸಿಕ್ಕಲಿಲ್ಲ. ಕೊನೆಗೆ ಬಹಳ ಆಯಾಸದಿಂದ ಬಳಲಿಹೋದನು. ಇದಲ್ಲದೆ ಅವನಿಗೆ ಅರುವತ್ತುವರ್ಷವಾಗಿದ್ದುದರಿಂದ, ವಯಸ್ಸುಕಳೆದ ಮುದುಕನಾಗಿಯೂ ಇದ್ದನು. ವನಸಂಚಾರದಿಂದ ಬಳಲಿ ದಾಹಗೊಂಡಿದ್ದ ಅವನಿಗೆ, ಆ ಆರಣ್ಯದಲ್ಲಿ ಒಬ್ಬ ಮಹರ್ಷಿಯು ಕಾಣಿಸಿದನು. ಮೌನವ್ರತವಲ್ಲಿದ್ದ ಆ ಋಷಿಯನ್ನು ನಿನ್ನ ತಂದೆಯು, ತನ್ನಿಂದ ತಪ್ಪಿಸಿಕೊಂಡುಹೋದ ಜಿಂಕೆಯವಿಷಯವಾಗಿ ವಿಚಾರಿಸಿದನು. ಎಷ್ಟು ಕೇಳಿದರೂ ಆ ಮಹರ್ಷಿಯು ಬಾಯೆತ್ತಿ ಮಾತಾಡದೆ ಮೋಟುಮರದಂತಿದ್ದನು. ಮೊದಲೇ ಹಸಿವುಬಾಯಾರಿಕೆಯಿಂದಲೂ, ದೇಹಶ್ರಮದಿಂದಲೂ ಬೇಸರಗೊಂಡಿದ್ದ ನಿನ್ನ ತಂದೆಗೆ ಅವನಮೇಲೆ ಕೋಪವುಂಟಾಯಿತು. ಹೀಗೆ ಕೋಪಗೊಂಡ ಆ ರಾಜನು, ಆ ಮಹರ್ಷಿಯು ಮೌನವ್ರತದಲ್ಲಿರುವನೆಂಬುವನ್ನು ತಿಳಿಯದೆ, ಅವನನ್ನು ಕಠಿನವಾಕ್ಯಗಳಿಂದ ತಿರಸ್ಕರಿಸಿದನು. ಮತ್ತು ಸಮೀಪದಲ್ಲಿ ಬಿದ್ದಿದ್ದ ಒಂದು ಸತ್ತ ಹಾವನ್ನು ತನ್ನ ಬಿಲ್ಲಿನ ತುದಿಯಿಂದೆತ್ತಿ, ಶುದ್ಧಾತ್ಮನಾದ ಆ ಮಹರ್ಷಿಯ ಕೊರಳಿಗೆ ತಗುಲಿಸಿದನು. ಇಷ್ಟಾದರೂ ಆ ಮಹರ್ಷಿಯು ಸಾಧುವೆಂದಾಗಲಿ, ಅಸಾಧುವೆಂದಾಗಲಿ ಬಾಯಿಂದಾಡದೆ ಸತ್ತಹಾವು ತನ್ನ ಕೊರಲಿನಲ್ಲಿದ್ದಂತೆಯೇ ಸುಮ್ಮನಿದ್ದನು. ಅವನಿಗೆ ಮನಸ್ಸಿನಲ್ಲಿಯಾದರೂ ಕೋಪವೆಂಬುದೇ ಹುಟ್ಟಲಿಲ್ಲ.

ಇದು ನಾಲ್ವತ್ತೊಂಭತ್ತನೆಯ ಅಧ್ಯಾಯವು.



ನಿರ್ಜನವಾದ ಅಡವಿಯಲ್ಲಿ ನಡೆದ ಕಾಶ್ಯಪ ತಕ್ಷಕ ವೃತ್ತಾಂತವು ಹೇಗೆ ಜನಗಳಿಗೆ ತಿಳಿಯಿತೆಂಬುದನ್ನು ಮಂತ್ರಿಗಳು ಜನಮೇಜಯನಿಗೆ ತಿಳಿಸಿದುದು.

ಆಮೇಲೆ ಮಂತ್ರಿಗಳು ಜನಮೇಜಯನನ್ನು ಕುರಿತು "ರಾಜೇಂದ್ರಾ! ಹೀಗೆ ನಿನ್ನ ತಂದೆಯು ಆಹಾರವಿಲ್ಲದೆ ಕೃಶನಾಗಿ ಕುಳಿತಿದ್ದ ಮಹರ್ಷಿಯ ಕೊರಳಿಗೆ ಸತ್ತ ಹಾವನ್ನು ತಗುಲಿಸಿ, ತನ್ನ ಪಟ್ಟಣಕ್ಕೆ ಹೊರಟು ಹೋದನು ಆ ಋಚೀಕನೆಂಬ ಮಹರ್ಷಿಗೆ, ಗೋವಿನಲ್ಲಿ ಹುಟ್ಟಿದ ಶೃಂಗಿಯೆಂಬ ಪುತ್ರನಿದ್ದನು. ಅವನು ಮಹಾಯಶಸ್ವಿ! ಮಹಾತೇಜಸ್ವಿ! ಆದರೆ ಕೋಪಸ್ವಭಾವವುಳ್ಳವನು. ಅವನು ಆಗಾಗ ಬ್ರಹ್ಮಲೋಕಕ್ಕೆ ಹೋಗಿ, ಪ್ರತ್ಯಕ್ಷವಾಗಿ ಬ್ರಹ್ಮದೇವನ ಪೂಜೆಯನ್ನು ನಡೆಸಿ ಬರುತಿದ್ದನು. ಒಮ್ಮೆ ಅವನು ಬ್ರಹ್ಮಪೂಜೆಗಾಗಿ ಹೋಗಿ ಆ ಕಾರ್ಯವನ್ನು ಮುಗಿಸಿಕೊಂಡು, ಆ ಬ್ರಹ್ಮನ ಅನುಮತಿಯನ್ನು ಪಡೆದು ಹಿಂತಿರುಗಿ ಆಶ್ರಮಕ್ಕೆ ಬಂದುಸೇರುವಷ್ಟರಲ್ಲಿ, ಅವನ ಸ್ನೇಹಿತನಾದ ಋಷಿಕುಮಾರನೊಬ್ಬನು ಅವನ ತಂದೆಯ ಕೊರಲಿಗೆ ಸತ್ತಹಾವನ್ನು ತಗುಲಿಸಿರುವುದನ್ನೂ, ಅದನ್ನು ಹೆಗಲಮೇಲೆ ಹೊತ್ತಹಾಗೆಯೇ ಆ ತಂದೆಯು ಕುಳಿತಿರುವ ಸಂಗತಿಯನ್ನೂ ತಿಳಿಸಿದನು. ಮಹಾತೇಜಸ್ವಿಯಾಗಿ, ಮತ್ತು ಬೇರೊಬ್ಬರಿಗೆ ಯಾವ ಅಪಕಾರವನ್ನೂ ಮಾಡದೆ ಜಿತೇಂದ್ರಿಯನಾಗಿ, ಶುದ್ಧನಾಗಿ, ಸ್ವಕರ್ಮದಲ್ಲಿಯೇ ನಿರತನಾಗಿದ್ದ ತನ್ನ ತಂದೆಗೆ ಇಂತಹ ಅಪಮಾನವಾದುದನ್ನು ಕೇಳಿ ಶೃಂಗಿಗೆ ಅತ್ಯಂತ ಕೋಪವುಂಟಾಯಿತು. ಆಶ್ಚರ್ಯಮಹಿಮೆಯುಳ್ಳವನೂ, ಆಶಾರಹಿತನೂ, ಅಸೂಯಾದಿ ಗುಣಗಳಿಲ್ಲದವನೂ, ಮಾತಿನಲ್ಲಿಯೂ ಕಾರ್ಯಗಳಲ್ಲಿಯೂ ಪ್ರಿಯವನ್ನೇ ತೋರಿಸತಕ್ಕವನೂ, ವಯೋವೃದ್ಧನೂ, ಆಗಿ, ಮರೆಹೊಕ್ಕ ಸಮಸ್ತಪ್ರಾಣಿಗಳನ್ನೂ ರಕ್ಷಿಸತಕ್ಕ ತನ್ನ ತಂದೆಯು ಮೌನವ್ರತದಲ್ಲಿರುವಾಗ, ಅವನಿಗೆ ಅಪಕಾರಮಾಡಿದ ನಿನ್ನ ತಂದೆಯನ್ನು ಶೃಂಗಿಯು ಶಪಿಸಿಬಿಟ್ಟನು. ಆ ಶೃಂಗಿಯು ಇನ್ನೂ ಸಣ್ಣವಯಸ್ಸಿನವನಾಗಿದ್ದರೂ ತೇಜೋವೃದ್ಧನೆನಿಸಿಕೊಂಡಿದ್ದನು. ಆ ಋಷಿಕುಮಾರನು ಒಡನೆಯೇ ಆಚಮನಮಾಡಿ ಬಂದು, ಬ್ರಹ್ಮತೇಜಸ್ಸಿನಿಂದ ಜ್ವಲಿಸುವಂತೆ ಕಾಣುತ್ತ, ಕೋಪದಿಂದ ನಿನ್ನ ತಂದೆಯನ್ನು ಕುರಿತು "ಯಾವ ಪಾಪಿಯು ನಿರ

ಪರಾಧಿಯಾದ ನನ್ನ ತಂದೆಯ ಮೈಮೇಲೆ ಸತ್ತಹಾವನ್ನು ತಗುಲಿಸಿ ಹೋದನೋ, ಆ ನೀಚನನ್ನು ನನ್ನ ವಾಕ್ಯಬಲದಿಂದ ಪ್ರೇರಿತನಾದ ತಕ್ಷಕನು, ಇದುಮೊದಲು ಏಳುದಿನಗಳೊಳಗಾಗಿ ತನ್ನ ಕ್ರೂರವಿಷಜ್ವಾಲೆಯಿಂದ ದಹಿಸಲಿ! ನನ್ನ ತಪೋಮಹಿಮೆಯನ್ನು ಜಗತ್ತೆಲ್ಲವೂ ನೋಡಲಿ'' ಎಂದನು.

ಹೀಗೆ ಶೃಂಗಿಯು ತಾನು ಆಶ್ರಮದ್ವಾರದಲ್ಲಿ ತನ್ನ ಮಿತ್ರನಿಂದ ಆ ವೃತ್ತಾಂತವನ್ನು ಕೇಳಿದೊಡನೆ, ಅಲ್ಲಿಯೇ ಈ ಶಾಪವನ್ನು ಕೊಟ್ಟು, ಆ ಮೇಲೆ ತಂದೆಯ ಬಳಿಗೆ ಹೋಗಿ ಅವನಿಗೆ ತಾನು ಕೊಟ್ಟ ಶಾಪವನ್ನು ತಿಳಿಸಿದನು. ಆ ಶೃಂಗಿಯ ತಂದೆಯಾದರೋ ಬಹಳ ದಯಾಳು! ಪರಮಸಾಧು! ಆದುದರಿಂದ ಅವನು ತನ್ನ ಮಗನ ನಡತೆಗೆ ಮೆಚ್ಚದೆ, ಒಳ್ಳೇ ಗುಣಾಢ್ಯನಾದ ಗೌರಮುಖನೆಂಬ ತನ್ನ ಶಿಷ್ಯನನ್ನು ನಿನ್ನ ತಂದೆಯ ಬಳಿಗೆ ಕಳುಹಿಸಿದನು. ಆ ಶಿಷ್ಯನು ಬಂದು ರಾಜನಿಂದ ಸತ್ಕೃತನಾಗಿ ತನ್ನ ಮಾರ್ಗಶ್ರಮವನ್ನು ತೀರಿಸಿಕೊಂಡಮೇಲೆ, ನಿನ್ನ ತಂದೆಯನ್ನು ಕುರಿತು "ಮಹಾರಾಜಾ! ನಮ್ಮ ಗುರುವು ನಿನಗೆ ಈ ಸಂದೇಶವನ್ನು ಕಳುಹಿಸಿರುವನು. ತಕ್ಷಕನು ನಿನ್ನನ್ನು ತನ್ನ ವಿಷಜ್ವಾಲೆಯಿಂದ ದಹಿಸಲೆಂದು ನನ್ನ ಮಗನು ನಿನಗೆ ಶಾಪವನ್ನು ಕೊಟ್ಟಿರುವನು. ಆದುದರಿಂದ ನೀನು ಎಚ್ಚರಿಕೆಯಿಂದಿರು'' ಎಂದು ಅವನು ಹೇಳಿದ ಸಂಗತಿಯನ್ನು ತಿಳಿಸಿದನು. ಈ ಭಯಂಕರವಾರ್ತೆಯನ್ನು ಕೇಳಿದೊಡನೆ ಪರೀಕ್ಷಿದ್ರಾಜನು ತಕ್ಷಕನಿಗೆ ಭಯಪಟ್ಟು ತಕ್ಕಷ್ಟು ಎಚ್ಚರಿಕೆಯಿಂದಲೇ ಇದ್ದನು. ಏಳು ದಿನಗಳು ಕಳೆಯುತ್ತ ಬಂದಿತು. ಏಳನೇ ದಿನದಲ್ಲಿ ಕಾಶ್ಯಪನೆಂಬ ಮಂತ್ರವಾದಿಯಾದ ಮುನಿಯೊಬ್ಬನು ರಾಜನಬಳಿಗೆ ಹೋಗುತಿದ್ದನು. ತಕ್ಷಕನೆಂಬ ನಾಗರಾಜನು ದಾರಿಯಲ್ಲಿ ಅವನನ್ನು ಸಂಧಿಸಿದನು. ಆಗ ತಕ್ಷಕನು ಬ್ರಾಹ್ಮಣವೇಷದಿಂದ ಕಾಶ್ಯಪನನ್ನು ಕುರಿತು "ನೀನು ಇಷ್ಟು ಆತುರದಿಂದ ಹೋಗುವುದೆಲ್ಲಿಗೆ? ಅಂತಹ ಅವಶ್ಯಕಾರ್ಯವೇನು'' ಎಂದು ಕೇಳಲು, ಆ ಬ್ರಾಹ್ಮಣನು "ಓ ಸರ್ಪೋತ್ತಮಾ! ಕೌರವರಾಜನಾದ ಪರೀಕ್ಷಿತ್ತಿನ ಬಳಿಗೆ ಹೋಗುತ್ತಿರುವೆನು. ತಕ್ಷಕನೆಂಬ ಸರ್ಪವು ಈ ದಿನ ಅವನನ್ನು

ಕಚ್ಚುವನಂತೆ. ಆ ವಿಷವನ್ನು ನೀಗಿಸುವುದಕ್ಕಾಗಿ ನಾನು ಹೋಗುತ್ತಿರುವೆನು. ಆ ರಾಜನನ್ನು ಕಾಪಾಡುವುದಾಗಿ ಸಂಕಲ್ಪಿಸಿಕೊಂಡಿರುವೆನು. ನಾನಿರುವಾಗ ಯಾವ ಸರ್ಪಕ್ಕೂ ಆ ರಾಜನನ್ನು ಕೊಲ್ಲುವುದು ಸಾಧ್ಯವಲ್ಲ" ಎಂದನು. ಆಗ ತಕ್ಷಕನು "ಓ ಬ್ರಾಹ್ಮಣಾ! ನಾನೇ ಆ ತಕ್ಷಕನು. ನಾನು ಕಚ್ಚಿದವನನ್ನು ನೀನು ಬದುಕಿಸಬಲ್ಲೆಯಾ! ಅದು ಎಂದಿಗೂ ನಿನ್ನಿಂದಾಗದು. ಬೇಕಾದರೆ ನನ್ನ ಆಶ್ಚರ್ಯಶಕ್ತಿಯನ್ನು ಈಗಲೇ ನೋಡು" ಎಂದು ಸಮೀಪದಲ್ಲಿದ್ದ ಒಂದು ದೊಡ್ಡ ಆಲದ ಮರವನ್ನು ತನ್ನ ಹಲ್ಲಿನಿಂದ ಕುಟುಕಿದನು. ಒಡನೆಯೇ ಆ ಮರದಲ್ಲಿ ಉರಿಯೆದ್ದು, ಅದು ಸುಟ್ಟು ಭಸ್ಮವಾಯಿತು. ಆದರೇನು? ಆ ಕಾಶ್ಯಪನು ತನ್ನ ಮಂತ್ರಶಕ್ತಿಯಿಂದ ಒಡನೆಯೇ ಅದನ್ನು ತಿರುಗಿ ಚಿಗುರಿಸಿದನು. ಆಗ ತಕ್ಷಕನು ಆ ಬ್ರಾಹ್ಮಣನ ಶಕ್ತಿಗೆ ಆಶ್ಚರ್ಯಗೊಂಡು "ಓ ವಿಪ್ರೋತ್ತಮಾ! ನೀನು ಯಾವ ಆಸೆಗಾಗಿ ಆ ರಾಜನಲ್ಲಿಗೆ ಹೋಗುವೆ" ಎಂದು ಕೇಳಲು, ಕಾಶ್ಯಪನು "ನಾನು ಧನಾರ್ಥಿಯಾಗಿ ಆ ರಾಜನಲ್ಲಿಗೆ ಹೋಗುವೆನು" ಎಂದನು. ಆಗ ತಕ್ಷಕನು "ಓ ಮಹಾತ್ಮಾ! ನೀನು ಆ ರಾಜನಿಂದ ಎಷ್ಟು ಹಣವನ್ನು ಪಡೆಯಬೇಕೆಂದು ಕೋರುವೆಯೋ, ಅದಕ್ಕಿಂತಲೂ ಹೆಚ್ಚು ಧನವನ್ನು ನಾನು ಇಲ್ಲಿಯೇ ಕೊಡುವೆನು. ನೀನು ಹಿಂತಿರುಗು" ಎಂದು ಮೃದುವಚನಗಳಿಂದ ಸಮಾಧಾನಗೊಳಿಸಿದನು. ಕಾಶ್ಯಪನು ಆ ಮಾತಿಗೆ ಸಂತೋಷಗೊಂಡು ಹಿಂತಿರುಗಿಬಿಟ್ಟನು. ಆಮೇಲೆ ತಕ್ಷಕನು ವೇಷಾಂತರದಿಂದ ತನ್ನ ರೂಪವನ್ನು ಮರೆಸಿಕೊಂಡು, ನಿನ್ನ ತಂದೆಯು ಎಷ್ಟೋ ಎಚ್ಚರಿಕೆಯಿಂದ ಕಾವಲಿರಿಸಿದ್ದ ಅರಮನೆಗೆ ಪ್ರವೇಶಿಸಿ, ಅವನನ್ನು ಕಚ್ಚಿ ತನ್ನ ವಿಷಾಗ್ನಿಯಿಂದ ಕೊಂದುಬಿಟ್ಟನು. ಆಮೇಲೆ ನಿನಗೆ ಈ ರಾಜ್ಯದಲ್ಲಿ ಪಟ್ಟಾಭಿಷೇಕವಾಯಿತು. ರಾಜೇಂದ್ರಾ! ನಾವು ಕಂಡುಕೇಳಿದ ಈ ಕ್ರೂರವೃತ್ತಾಂತವನ್ನೆಲ್ಲ ನಿನಗೆ ಯಥಾವತ್ತಾಗಿ ತಿಳಿಸಿದೆವು. ಆ ತಕ್ಷಕನಿಂದ ನಿನ್ನ ತಂದೆಗೂ, ಉತಂಕಮಹರ್ಷಿಗೂ ಉಂಟಾದ ಅವಮಾನವನ್ನೆಲ್ಲ ನೀನು ಕೇಳಿದೆಯಲ್ಲವೇ? ಇನ್ನು ಅದಕ್ಕೆ ತಕ್ಕ ಪ್ರತೀಕಾರವನ್ನು ಯೋಚಿಸಿ ಮುಂದೆ ಹೇಗೆ ನಡೆಸಬೇಕೋ ಹಾಗೆ ನಡೆಸು" ಎಂದರು.

ಆಗ ಜನಮೇಜಯನು ತಿರುಗಿ "ಓ ಅಮಾತ್ಯರೇ! ಕೇವಲ ನಿರ್ಜನ ವಾದ ಕಾಡಿನಲ್ಲಿ ರಹಸ್ಯವಾಗಿ ನಡೆದ ಆಲದ ಮರದ ವೃತ್ತಾಂತವನ್ನು ನಿಮಗೆ ಹೇಳಿದವರಾರು? ತಕ್ಷಕನ ವಿಷದಿಂದ ಭಸ್ಮವಾಗಿ ಬಿದ್ದ ಆ ಮರ ವನ್ನು ತಿರುಗಿ ಚಿಗುರಿಸಿದ ಆ ಕಾಶ್ಯಪನ ಪ್ರಭಾವವು ಆಶ್ಚರ್ಯಕರವಾ ದುದು. ಅವನು ಯಾರಿಗೆ ಮಂತ್ರಿಸುವನೋ ಅವರಿಗೆ ವಿಷದಿಂದ ಸಾವಿಲ್ಲ ವೆಂಬುದೂ ನಿಶ್ಚಯವೇ! ನನ್ನ ತಂದೆಯನ್ನು ಆ ಬ್ರಾಹ್ಮಣನು ಬದುಕಿಸಿ ಬಿಟ್ಟರೆ, ತಕ್ಷಕನಿಗೆ ವಿಷವೇ ಇಲ್ಲವೆಂದು ಲೋಕಾಪಹಾಸ್ಯಕ್ಕೆ ತಾನು ಗುರಿ ಯಾಗುವೆನೆಂಬ ಭಯದಿಂದಲೇ ಪಾಪಿಯಾದ ತಕ್ಷಕನು ಆ ಬ್ರಾಹ್ಮಣನಿಗೆ ತಾನೇ ತೃಪ್ತಿಯನ್ನುಂಟುಮಾಡಿ ಕಳುಹಿಸಿರಬೇಕು. ಆದರೇನು? ಇರಲಿ, ನಾನು ಅವನಿಗೆ ತಕ್ಕ ಪ್ರತೀಕಾರವನ್ನು ಮಾಡದೆ ಬಿಡುವವನಲ್ಲ! ಆದರೆ ನನಗೊಂದು ಸಂದೇಹವಿದೆ. ನಿರ್ಜನವಾದ ಆ ನಟ್ಟಡವಿಯಲ್ಲಿ ಕಾಶ್ಯಪ ನಿಗೂ, ತಕ್ಷಕನಿಗೂ ನಡೆದ ಸಂಭಾಷಣವನ್ನು ಕಂಡವರಾರು? ಕೇಳಿದವ ರಾರು? ಆ ವೃತ್ತಾಂತವು ನಿಮ್ಮ ಕಿವಿಗೆ ಹೇಗೆ ಮುಟ್ಟಿತು? ಈ ಸಂಗತಿ ಯನ್ನು ತಿಳಿದುಕೊಂಡಮೇಲೆ ಸರ್ಪಜಾತಿಯನ್ನೇ ನಿರ್ಮೂಲಮಾಡುವ ಆಲೋಚನೆಯನ್ನು ಮಾಡುವೆವು" ಎಂದನು.

ಅದಕ್ಕಾ ಮಂತ್ರಿಗಳು "ಆ ಸಂಗತಿಯನ್ನು ತಿಳಿಸುವೆವು ಕೇಳು. ತಕ್ಷ ಕ ಕಾಶ್ಯಪರಿಬ್ಬರೂ ಆ ಆಲದಮರದ ಬಳಿಯಲ್ಲಿ ಸಂಧಿಸುವುದಕ್ಕೆ ಮೊದ ಲೇ, ಒಬ್ಬ ಮನುಷ್ಯನು ಕಟ್ಟಿಗೆಗಾಗಿ ಆ ಮರದಲ್ಲಿ ಒಣಗಿದ ಕೊಂಬೆ ಳನ್ನು ಹುಡುಕುತ್ತ ಅದರಮೇಲೆ ಏರಿ ಕುಳಿತಿದ್ದನು. ಆ ಮನುಷ್ಯನು ಮರದಮೇಲಿದ್ದ ಸಂಗತಿಯು ಕಾಶ್ಯಪನಿಗಾಗಲಿ, ತಕ್ಷಕನಿಗಾಗಲಿ ತಿಳಿ ಯದು. ಆ ಮರದೊಡನೆ ಅವನೂ ಭಸ್ಮವಾಗಿ ಹೋದನು. ಕಾಶ್ಯಪನ ಮಂತ್ರಪ್ರಭಾವದಿಂದ ತಿರುಗಿ ಅವನೂ ಆ ಮರದೊಡನೆಯೇ ಬದುಕಿಕೊಂ ಡನು. ಆ ಬದುಕಿಬಂದ ಮನುಷ್ಯನೇ ಆ ವೃತ್ತಾಂತವನ್ನು ಹೊರಗೆಡಹಿ ದನು. ಇಷ್ಟೇ ನಡೆದ ಸಂಗತಿ!" ಎಂದರು. ಈ ಮಾತನ್ನು ಕೇಳಿದೊಡನೆ ಯೇ ಜನಮೇಜಯನು ಕೋಪದಿಂದಲೂ, ದುಃಖದಿಂದಲೂ ಕೈಗಳನ್ನು ಹಿಸುಕುತ್ತ, ಆಗಾಗ ನಿಟ್ಟುಸಿರನ್ನು ಬಿಡುತಿದ್ದನು. ಕಣ್ಣೀರುಬಿಟ್ಟು ರೋ

ದಿಸಿದನು. ಕೊನೆಗೆ ಹೇಗೋ ಆ ದುಃಖವನ್ನು ತಡೆದು, ಕಣ್ಣೊರೆಸಿಕೊಂಡು, ವಿಧ್ಯುಕ್ತವಾಗಿ ನೀರಿನಿಂದ ಮುಖವನ್ನು ತೊಳೆದು ಸ್ವಲ್ಪಹೊತ್ತಿನವರೆಗೆ ತನ್ನಲ್ಲಿತಾನೇ ಮುಂದೇನುಮಾಡಬೇಕೆಂದು ಆಲೋಚಿಸಿ ಮಂತ್ರಿಗಳನ್ನು ಕುರಿತು ಹೀಗೆಂದು ಹೇಳುವನು. "ಎಲೈ ಮಂತ್ರಿಗಳೇ! ನಿಮ್ಮಿಂದ ಪಿತೃಮರಣವಾರ್ತೆಯನ್ನು ಕೇಳಿದಮೇಲೆ, ನನಗುಂಟಾದ ದೃಢಸಂಕಲ್ಪವನ್ನು ತಿಳಿಸುವೆನು ಕೇಳಿರಿ! ದುರಾತ್ಮನಾದ ಆ ತಕ್ಷಕನಿಗೆ ಪ್ರತ್ಯಪಕಾರವನ್ನು ಮಾಡಬೇಕಾದುದೇ ನನ್ನ ಕರ್ತವ್ಯವೆಂದು ಈಗ ನನಗೆ ತೋರಿದೆ. ಈ ಕ್ರೂರಕಾರ್ಯಕ್ಕೆ ಶೃಂಗಿಯು ನಿಮಿತ್ತಮಾತ್ರವಷ್ಟೇ ಹೊರತು ಅವನಿಂದ ತಪ್ಪಿಲ್ಲ. ಅವನನ್ನು ನೆಪವಾಗಿಟ್ಟು ತಕ್ಷಕನೇ ನನ್ನ ತಂದೆಯನ್ನು ಕೊಂದಿರುವನು. ಕಾಶ್ಯಪನನ್ನು ಹಿಂತಿರುಗಿಸಿದುದೂ ಅವನ ವಂಚನೆಯೇ. ಆ ಬ್ರಾಹ್ಮಣನು ಬಂದಿದ್ದರೂ ನನ್ನ ತಂದೆಯು ಸಾಯುತ್ತಿರಲಿಲ್ಲ. ಆ ಕಾಶ್ಯಪನ ಅನುಗ್ರಹದಿಂದಾದರೂ ನನ್ನ ತಂದೆಯು ಬದುಕಿಕೊಂಡಿದ್ದರೆ, ಅದರಿಂದ ತಕ್ಷಕನಿಗೆ ಕೆಟ್ಟುಹೋಗುತ್ತಿದ್ದುದೇನು? ಅಂತಹ ಬ್ರಾಹ್ಮಣನನ್ನೂ ಆ ನೀಚನೇ ಹಿಂತಿರುಗಿಸಿಬಿಟ್ಟನು. ನನ್ನ ಸಾಮರ್ಥ್ಯವು ಆ ತಕ್ಷಕನಿಗೆ ಇನ್ನೂ ತಿಳಿಯದೆಂದು ತೋರುವುದು. ನನ್ನ ತಂದೆಯು ಬದುಕಿರಬಾರದೆಂದೇ ಆ ದುರಾತ್ಮನು ತನ್ನ ಕೈಯಿಂದಲೇ ಆ ಬ್ರಾಹ್ಮಣನಿಗೆ ಬೇಕಾದ ಧನವನ್ನು ಕೊಟ್ಟಿರುವನು. ಇದು ಎಂತಹ ಅನ್ಯಾಯವೋ ನೋಡಿರಿ! ಈಗ ನಾನು ಅವನಮೇಲೆ ಹಗೆಯನ್ನು ತೀರಿಸಿಕೊಂಡು, ಉತಂಕನಿಗೂ, ನನಗೂ, ನಿಮಗೂ ಮತ್ತು ಸಮಸ್ತ ಲೋಕಕ್ಕೂ ಅತ್ಯಂತ ಪ್ರಿಯವಾದ ಕಾರ್ಯವನ್ನು ನಡೆಸುವುದನ್ನಾದರೂ ನೋಡಿರಿ" ಎಂದನು.

ಇದು ಐವತ್ತನೆಯ ಅಧ್ಯಾಯವು.



(ಜನಮೇಜಯನು ಸರ್ಪಯಾಗವನ್ನು ಮಾಡುವುದಾಗಿ ಪ್ರತಿಜ್ಞೆ ಮಾಡಿ ಯಜ್ಞಸಾಮಗ್ರಿಗಳನ್ನು ಸಿದ್ಧಗೊಳಿಸಿ ದೀಕ್ಷೆಯನ್ನು ವಹಿಸಿದುದು.)

ಶೌನಕ ಮುನೀಂದ್ರಾ! ಕೇಳು. ಜನಮೇಜಯನು ಮಂತ್ರಿಗಳಿಗೆ ಹೀಗೆಂದು ಹೇಳಿ, ಅವರ ಅನುಮತಿಯನ್ನು ಪಡೆದು ಸರ್ಪಯಾಗವನ್ನು ಮಾಡುವುದಾಗಿ ಸಂಕಲ್ಪಿಸಿಬಿಟ್ಟನು. ಆಮೇಲೆ ಆ ಪರೀಕ್ಷಿತ್ಕುಮಾರನು ಪುರೋಹಿತರನ್ನೂ, ಋತ್ವಿಕ್ಕುಗಳನ್ನೂ ಕರೆಸಿಕೊಂಡು ಮುಂದಿನ ಕಾರ್ಯಸಿದ್ಧಿಗೆ ಬೇಕಾದ ಮಾತನ್ನು ನುಡಿದನು. "ಓ ಬ್ರಾಹ್ಮಣೋತ್ತಮರೇ! ನನ್ನ ತಂದೆಯನ್ನು ಕೊಂದ ದುರಾತ್ಮನಾದ ತಕ್ಷಕನೆಂಬ ಯಾವ ಸರ್ಪವುಂಟೋ, ಅವನಿಗೆ ತಕ್ಕ ಪ್ರತಿಕ್ರಿಯೆಯನ್ನು ನಾನು ನಡೆಸಬೇಕೆಂದು ಪ್ರತಿಜ್ಞೆಮಾಡಿರುವೆನು. ಅದಕ್ಕೆ ಮಾರ್ಗವನ್ನು ನೀವು ನನಗೆ ತಿಳಿಸಬೇಕು. ಆ ತಕ್ಷಕನನ್ನು ಅವನ ಬಂಧುವರ್ಗದೊಡನೆ, ಉರಿಯುವ ಬೆಂಕಿಯಲ್ಲಿ ಕೆಡಹುವುದಕ್ಕೆ ಯಜ್ಞಕ್ರಿಯೆಯೇನಾದರೂ ನಿಮಗೆ ತಿಳಿಯುವುದೆ? ಆ ಪಾಪಿಯು ನನ್ನ ತಂದೆಯನ್ನು ತನ್ನ ವಿಷಾಗ್ನಿಯಿಂದ ಹೇಗೆ ದಹಿಸಿದನೋ, ಅದೇ ರೀತಿಯಾಗಿ ಅವನನ್ನು ನಾನೂ ಯಜ್ಞಾಗ್ನಿಯಲ್ಲಿ ದಹಿಸಬೇಕೆಂದು ಕೋರುವೆನು" ಎಂದನು. ಆಗ ಋತ್ವಿಕ್ಕುಗಳು ಅವನನ್ನು ಕುರಿತು "ಸರ್ಪಸತ್ರವೆಂಬ ಮಹಾಯಾಗವೊಂದು * ಪುರಾಣಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಅದು ದೇವತೆಗಳಿಂದಲೇ ಏರ್ಪಟ್ಟುದು. ನಿನ್ನ ಕಾರ್ಯೋದ್ದೇಶಕ್ಕೆ ಅದು ಅನುಕೂಲವಾದುದು. ಆ ಸತ್ರಯಾಗವನ್ನು ನಡೆಸಬಲ್ಲವನೂ ನೀನೊಬ್ಬನೆಂದೇ ಪೌರಾಣಿಕರು ಹೇಳುವರು. ಅದೇ ಯಾಗವನ್ನು ನೀನು ನಡೆಸಬಹುದು. ಅದು ನಿನ್ನ ಉದ್ದೇಶಕ್ಕೆ ಸಾಧಕವಾಗಿದೆ" ಎಂದರು.

---

* ಇಲ್ಲಿ ಜನಮೇಜಯನೊಬ್ಬನು ಪೂರ್ವಕಲ್ಪದಲ್ಲಿಯೇ ಈ ಸರ್ಪಯಾಗವನ್ನು ಮಾಡಿರುವುದಾಗಿ ಪುರಾಣಗಳಲ್ಲಿರುವುದರಿಂದ, ಈಗಲೂ ನಿನಗೆ ಆ ಹೆಸರೂ, ಸರ್ಪಯಾಗಕ್ಕೆ ಕಾರಣವೂ ಕೂಡಿಬಂದಿದೆಯೆಂದೂ, ಅದರಿಂದ ನೀನೊಬ್ಬನೇ ಅದನ್ನು ಮಾಡಲು ಸಮರ್ಥನೆಂದೂ, ಋತ್ವಿಕ್ಕುಗಳ ಅಭಿಪ್ರಾಯವು.

ಈ ಅನುಕೂಲವಾಕ್ಯಗಳನ್ನು ಕೇಳಿದೊಡನೆ ಜನಮೇಜಯನು, 'ಇನ್ನು ತಕ್ಷಕನು ಅಗ್ನಿಯಲ್ಲಿ ದಗ್ಧನಾದಂತೆಯೆ!' ಎಂದು ನಿಶ್ಚಯಿಸಿಕೊಂಡನು. ಆಮೇಲೆ ಆ ರಾಜನು ಮಂತ್ರವಿತ್ತುಗಳಾದ ಆ ಬ್ರಾಹ್ಮಣರನ್ನು ಕುರಿತು "ಓ ವಿಪ್ರೋತ್ತಮರೇ! ಆ ಯಾಗವನ್ನು ನಾನು ನಡೆಸಿಯೇ ತೀರುವೆನು. ಅದಕ್ಕೆ ಬೇಕಾದ ಸಂಭಾರಗಳನ್ನು ಸಿದ್ಧಪಡಿಸಿರಿ" ಎಂದನು. ಆಗ ಋತ್ವಿಕ್ಕುಗಳು ಯಾಗಶಾಲೆಯನ್ನು ಕಟ್ಟುವುದಕ್ಕೆ ಬೇಕಾದ ಸ್ಥಳವನ್ನು ಶಾಸ್ತ್ರೀಯವಾಗಿ ಅಳೆಯಿಸಿದರು. ವೇದವಿತ್ತುಗಳೂ, ಧಿಮಂತರೂ ಆದ ಆ ಋತ್ವಿಕ್ಕುಗಳು, ಏಕಕಾಲದಲ್ಲಿ ಅನೇಕ ಬ್ರಾಹ್ಮಣಸಮೂಹವು ಸೇರುವುದಕ್ಕೂ ಋತ್ವಿಕ್ಕುಗಳು ಸೌಕರ್ಯದಿಂದ ಇರುವುದಕ್ಕೂ ಅನುಕೂಲವಾಗಿ, ರಮ್ಯವಾಗಿ, ರಾಜನಿಗೂ ಸಮ್ಮತವಾದ ಯಜ್ಞಶಾಲೆಯೊಂದನ್ನು ವಿಧ್ಯುಕ್ತವಾಗಿ ಕಟ್ಟಿಸಿದರು. ಅದರಲ್ಲಿ ಧನಧಾನ್ಯಗಳೆಲ್ಲ ಸಮೃದ್ಧವಾಗಿ ಸಂಗ್ರಹಿಸಿಡಲ್ಪಟ್ಟಿತು. ಆಮೇಲೆ ರಾಜನಿಗೆ ಯಾಗಕ್ಕಾಗಿ ದೀಕ್ಷೆಯನ್ನು ಮಾಡಿಸಿದರು. ಓ ಮಹರ್ಷಿಗಳೇ! ಆ ಯಜ್ಞಶಾಲೆಯನ್ನು ಕಟ್ಟುವಾಗ ನಡೆದ ವಿಶೇಷವೊಂದನ್ನು ತಿಳಿಸುವೆನು ಕೇಳಿರಿ. ಅದನ್ನು ಕಟ್ಟುವ ಶಿಲ್ಪಿಯು ವಾಸ್ತುವಿದ್ಯೆಯಲ್ಲಿ (ಶಿಲ್ಪಶಾಸ್ತ್ರದಲ್ಲಿ) ನಿಪುಣನು. ಬಹಳ ಧೀಮಂತನು. ಅವನು ಅದನ್ನು ಕಟ್ಟುವಾಗಲೇ ಋತ್ವಿಕ್ಕುಗಳನ್ನು ಕುರಿತು "ಎಲೈ ಬ್ರಾಹ್ಮಣರೇ! ಇಲ್ಲಿ ನಡೆಯುವ ಯಜ್ಞಕ್ಕೆ ನಡುವೆ ಏನೋ ಒಂದು ವಿಘ್ನವುಂಟಾಗುವುದೆಂದು ತೋರುವುದು. ಕೆಲವು ದುರ್ನಿಮಿತ್ತಗಳು ಈಗಲೇ ಅದನ್ನು ಸೂಚಿಸುವುವು" ಎಂದನು. ಆ ಶಿಲ್ಪಿಯು ಜಾತಿಯಲ್ಲಿ ಸೂತನು. ಪುರಾತನವಾದ ಶಿಲ್ಪಶಾಸ್ತ್ರವನ್ನು ಚೆನ್ನಾಗಿ ತಿಳಿದವನು. ಶಿಲ್ಪಕಾರ್ಯಕ್ಕಾಗಿ ಸೂತ್ರವನ್ನು ಹಿಡಿಯುವುದರಲ್ಲಿ ಪ್ರಮುಖನಾದ ಆ ಸ್ಥಪತಿಯು, ಯಜ್ಞಕ್ಕಾಗಿ ನೆಲವನ್ನಳೆದ ಸ್ಥಳವನ್ನೂ, ಕಾಲವನ್ನೂ ನೋಡಿ, "ಈ ಯಜ್ಞವು ಒಂದು ಬ್ರಾಹ್ಮಣನ ನಿಮಿತ್ತವಾಗಿ ನಡುವೆ ನಿಂತು ಹೋಗುವುದೇ ನಿಶ್ಚಯವು" ಎಂದನು. ಜನಮೇಜಯರಾಜನು ಈ ಮಾತನ್ನು ಕೇಳಿದೊಡನೆ ಚಿಂತಾಕುಲನಾಗಿ, ತಾನು ಯಜ್ಞದೀಕ್ಷೆಯನ್ನು ಕೈಕೊಳ್ಳುವುದಕ್ಕೆ ಮೊದಲೇ ದ್ವಾರಪಾಲಕರನ್ನು ಕರೆಸಿ "ಓ ದ್ವಾರಪಾಲ

ಕರೆ! ನನಗೆ ತಿಳಿಸದೆ ಯಾವನನ್ನೂ ಈ ಯಜ್ಞಶಾಲೆಯೊಳಕ್ಕೆ ಬಿಡಕೂಡ ದು" ಎಂದು ಕಟ್ಟಾಜ್ಞೆಮಾಡಿದನು.

ಇದು ಐವತ್ತೊಂದನೆಯ ಅಧ್ಯಾಯವು.

## ಯಜ್ಞಾರಂಭವು. ಸರ್ಪಗಳು ಬಂದು ಅಗ್ನಿಯಲ್ಲಿ ಬಿದ್ದುದು.

ಸರ್ಪಯಾಗಕ್ಕೆ ಬೇಕಾದ ಕ್ರಿಯೆಗಳೆಲ್ಲವೂ ಆರಂಭಿಸಲ್ಪಟ್ಟುವು. ಯಾಜಕರೆಲ್ಲರೂ (ಯಜ್ಞಮಾಡಿಸತಕ್ಕವರು) ತಮ್ಮತಮ್ಮ ಕರ್ಮಗಳಲ್ಲಿ ಪ್ರವರ್ತಿಸಿದರು. ಎಲ್ಲರೂ ಕರಿಯ ವಸ್ತ್ರವನ್ನು ಹೊದೆದರು ಹೊಗೆಯಿಂದ ಕಣ್ಣುಗಳೆಲ್ಲವೂ ಕೆಂಪಾಗಿರಲು, ಜ್ವಲಿಸುವ ಅಗ್ನಿಯಲ್ಲಿ ಮಂತ್ರಪೂರ್ವಕ ವಾಗಿ ಹೋಮವನ್ನಾರಂಭಿಸಿದರು. ಆಗ ಸರ್ಪಗಳೆಲ್ಲವೂ ಭಯದಿಂದ ತತ್ತಳಿಸುವಂತೆ ಮಂತ್ರಪೂರ್ವಕವಾಗಿ ಅವುಗಳನ್ನು ಅಗ್ನಿಮುಖಕ್ಕೆ ಆ ಹ್ವಾನಮಾಡಿದರು. ಆ ಮಂತ್ರವನ್ನು ಉಚ್ಚರಿಸಿದೊಡನೆ ಅಲ್ಲಲ್ಲಿಂದ ಅನೇಕ ಸರ್ಪಗಳು ಬಂದು ಬೆಂಕಿಯಲ್ಲಿ ಬೀಳುತಿದ್ದುವು. ಆ ಸರ್ಪಗಳ ಸಂಕಟವನ್ನೂ, ಕಷ್ಟವನ್ನೂ ಕೇಳಬೇಕೆ? ಅವು ಬರುವಾಗ ಸಂಕಟ ದಿಂದ ಮಿಲಿಮಿಲಿಯಾಡುತ್ತಿರುವುವು. ದೀನಸ್ವರದಿಂದ ಒಂದನ್ನೊಂದು ಕೂಗಿಕೊಳ್ಳುವುವು! ಹೆಡೆಗಳನ್ನೆತ್ತಿ ಅತ್ತಿತ್ತ ಅಪ್ಪಳಿಸುತ್ತಿರುವುವು. ಉದ್ದ ವಾಗಿ ನಿಟ್ಟುಸಿರನ್ನು ಬಿಟ್ಟು ಬುಸುಗುಟ್ಟುವುವು. ತಲೆಯಲ್ಲಿಯೂ, ಬಾಲ ದಲ್ಲಿಯೂ ಒಂದನ್ನೊಂದು ಹೆಣೆದುಕೊಳ್ಳುವುವು. ಆ ಸರ್ಪಗಳು ಬಣ್ಣ ದಲ್ಲಿ ಕೆಲವು ಕಪ್ಪಾಗಿಯೂ, ಕೆಲವು ನೀಲವರ್ಣವಾಗಿಯೂ ಇರುವುವು. ಅವುಗಳಲ್ಲಿ ವಯಸ್ಸು ಕಳೆದು ಮುದಿಯಾದುವು ಕೆಲವು! ಇನ್ನೂ ಸಣ್ಣ ಮರಿಗಳು ಕೆಲವು! ಇಂತಹ ಅನೇಕ ಸರ್ಪಗಳು ಲಕ್ಷೋಪಲಕ್ಷ ಸಂಖ್ಯೆಯಿಂದ ಬಂದು ದೀನಸ್ವರದಿಂದ ಅರಚುತ್ತ ಉರಿಯುವ ಬೆಂಕಿಯಲ್ಲಿ ಬೀಳುತಿದ್ದುವು. ಆಗ ಸರ್ಪಗಳು ನೂರುನೂರಾಗಿ, ಸಾವಿರಸಾವಿರ ವಾಗಿ ಮತ್ತು ಲಕ್ಷ, ಕೋಟಿ, ಅರ್ಬುದ, ನ್ಯರ್ಬುದ ಸಂಖ್ಯೆಗಳಿಂದ

ಎಡೆಬಿಡದೆ ಆ ಹೋಮಾಗ್ನಿಯಲ್ಲಿ ಬಂದು ಬಿದ್ದು ದಗ್ಧವಾದುವು. ಗೋಕರ್ಣದಂತೆ ತಲೆಬಾಲಗಳಲ್ಲಿ ಸಣ್ಣದಾಗಿಯೂ, ನಡುವೆ ದಪ್ಪನಾಗಿಯೂ ಇದ್ದು, ಒಂದು ಹರದಾರಿ ಮತ್ತು ಗಾವುದದಳತೆಯುಳ್ಳ ಹಾವುಗಳೆಷ್ಟೋ ಬಂದು ಬಿದ್ದುವು. ಮತ್ತು ಆ ಹಾವುಗಳಲ್ಲಿ ಕುದುರೆಯ ಆಕಾರವುಳ್ಳವು ಕೆಲವು! ಕೊಬ್ಬಿದ ಮದದಾನೆಯಂತೆ ದೊಡ್ಡ ದೇಹವುಳ್ಳವು ಕೆಲವು! ಆನೆಯ ಸುಂಡಲಿನಂತೆ ಆಕಾರವುಳ್ಳವು ಕೆಲವು. ಪರಿಘಾಯುಧಗಳಂತೆ ಆಕಾರವುಳ್ಳವು ಕೆಲವು. ಹೀಗೆ ವಿವಿಧ ವರ್ಣಗಳಿಂದಲೂ, ವಿವಿಧಾಕಾರಗಳಿಂದಲೂ ಕೂಡಿ ಆಕಾರದಲ್ಲಿಯೂ ಬಲದಲ್ಲಿಯೂ ಅತಿಭಯಂಕರಗಳಾಗಿ ಕ್ರೂರವಿಷವುಳ್ಳ ಸಣ್ಣದೊಡ್ಡ ಹಾವುಗಳೆಷ್ಟೋ ಬಂದು ಆ ಅಗ್ನಿಯಲ್ಲಿ ಪರಂಪರೆಯಾಗಿ ಬೀಳುತ್ತಿದ್ದುವು. ಓ ಮಹರ್ಷಿಗಳಿರಾ! ತಾಯಿಯ ಶಾಪವೆಂಬುದು ಎಷ್ಟು ಕ್ರೂರವೋ ನೋಡಿರಿ? ಮಾತೃಶಾಪವೆಂಬ ಕ್ರೂರದಂಡನೆಗೆ ಸಿಕ್ಕಿದ ಆ ಸರ್ಪಗಳೆಲ್ಲವೂ ಹೀಗೆ ಅಗ್ನಿಯಲ್ಲಿ ಬಿದ್ದು ದಗ್ಧವಾದುವು.

ಇದು ಐವತ್ತೆರಡನೆಯ ಅಧ್ಯಾಯವು.

---

ಸರ್ಪಯಾಗದಲ್ಲಿ ಋತ್ವಿಕ್ಕುಗಳ ಹೆಸರುಗಳು. ಇಂದ್ರನು ತಕ್ಷಕನಿಗೆ ಅಭಯವನ್ನು ಕೊಟ್ಟುದು. ವಾಸುಕಿಗೂ ಅವನ ಸಹೋದರಿಗೂ ನಡೆದ ಸಂಭಾಷಣೆಗಳು.

ಈ ನಡುವೆ ಶೌನಕನು ಸೂತಪುತ್ರನನ್ನು ಕುರಿತು, "ಸೂತಕುಮಾರಾ! ಆ ಸರ್ಪಯಾಗದಲ್ಲಿ ಋತ್ವಿಕ್ಕುಗಳಾಗಿದ್ದ ಮಹರ್ಷಿಗಳಾರು? ಮಹಾಭಯಕ್ಕೂ, ದುಃಖಕ್ಕೂ ಕಾರಣವಾದ ಇಂತಹ ದಾರುಣಯಜ್ಞದಲ್ಲಿ ಸದಸ್ಯರಾಗಿದ್ದವರಾರು? ಸರ್ಪಯಾಗದ ವಿಧಾನಗಳನ್ನು ತಿಳಿದವರಲ್ಲಿ ಪ್ರಧಾನರಾರು? ಈ ಸಂಗತಿಯನ್ನು ನೀನು ನನಗೆ ವಿವರವಾಗಿ ತಿಳಿಸಬೇಕು" ಎಂದನು. ಅದಕ್ಕಾ ಸೂತನು "ಶೌನಕಾ! ಒಳ್ಳೆಯದು. ಅಲ್ಲಿದ್ದ ಋತ್ವಿಕ್ಕುಗಳ ಹೆಸರನ್ನು ನಿನಗೆ ತಿಳಿಸುವೆನು. ಆ ಯಾಗದಲ್ಲಿ ಚಂಡಭಾರ್ಗವನೆಂಬ ಬ್ರಾಹ್ಮಣನು ಋಗ್ವೇದವನ್ನು ಪಠಿಸುವ ಹೋತೃ

ಸ್ಥಾನದಲ್ಲಿದ್ದನು. ಅವನು ಚ್ಯವನವಂಶದವನು. ವೇದವಿತ್ತುಗಳಲ್ಲಿ ಮೇಲಾದವನು. ಕುತ್ಸವಂಶದಲ್ಲಿ ಹುಟ್ಟಿ ವಯೋವೃದ್ಧನೂ, ವಿದ್ವಾಂಸನೂ ಆದ ಜೈಮಿನಿಯೆಂಬ ಬ್ರಾಹ್ಮಣನು ಸಾಮಗಾನವಮಾಡತಕ್ಕ ಉದ್ಗಾತೃವಾಗಿದ್ದನು. ಶಾರ್ಙ್ಗರವನು ಬ್ರಹ್ಮಸ್ಥಾನದಲ್ಲಿಯೂ, ಪಿಂಗಳನು ಅಧ್ವರ್ಯುಸ್ಥಾನದಲ್ಲಿಯೂ ಇದ್ದರು. ಪುತ್ರಶಿಷ್ಯರೊಡಗೂಡಿದ ವ್ಯಾಸನೂ ಮತ್ತು ಉದ್ದಾಲಕ, ಪ್ರಮತಕ, ಶ್ವೇತಕೇತು, ಕುಂಡಜಠರರೆಂಬವರೂ, ಕಾಲಘಟನೂ, ವತ್ಸಗೋತ್ರದಲ್ಲ ಹುಟ್ಟಿ ವೃದ್ಧನೂ ವೇದಾಧ್ಯಯನಶೀಲನೂ ಆದ ಶತಸ್ರವನೂ, ಕೋಹಲ, ದೇವಶರ್ಮ, ಮೌದ್ಗಲ್ಯ, ಸಮಶೌರಭರೇ ಮುಂತಾಗಿ ಇನ್ನೂ ಅನೇಕವೇದಪಾರಂಗತರಾದ ಬ್ರಾಹ್ಮಣರೂ ಆ ಯಾಗದಲ್ಲಿ ಸದಸ್ಯರಾಗಿದ್ದರು.

ಓ ಮಹರ್ಷಿಗಳಿರಾ! ಆ ಯಜ್ಞದಲ್ಲಿ ಋತ್ವಿಕ್ಕುಗಳು ಒಂದೊಂದು ಸಾರಿ ಮಂತ್ರಪೂರ್ವಕವಾಗಿ ಹೋಮಮಾಡಿದಾಗಲೂ ಎಷ್ಟೋ ಸರ್ಪಗಳು ಬಂದು ಅಗ್ನಿಯಲ್ಲಿ ಬಿಳುತಿದ್ದುವು. ಅಗ್ನಿದಗ್ಧಗಳಾದ ಆ ಸರ್ಪಗಳ ಕೊಬ್ಬು, ಕೆನ್ನೀರು, ಮಿದುಳು ಮುಂತಾದುವೆಲ್ಲ ಕಾಲುವೆಯಂತೆ ಹರಿಯುತಿದ್ದುವು. ಸರ್ಪದಾಹದಿಂದುಂಟಾದ ದುರ್ಗಂಧವು ವಾತಾವರಣಗಳನ್ನೆಲ್ಲ ವ್ಯಾಪಿಸಿಕೊಂಡಿತು. ಅಗ್ನಿಯಲ್ಲಿ ಬೀಳುವಾಗಲೂ, ಆಕಾಶದಿಂದ ಬರುವಾಗಲೂ, ಆಕಾಶದಲ್ಲಿಯೇ ನಿಂತಾಗಲೂ, ಆ ಸರ್ಪಗಳು ಕೂಗಿಕೊಳ್ಳುವ ದೀನಧ್ವನಿಯು ಎಲ್ಲೆಲ್ಲಿಯೂ ಕೇಳಿಸಿತು. ಇದು ಹೀಗಿರಲು, ಅತ್ತಲಾಗಿ ನಾಗರಾಜನಾದ ತಕ್ಷಕನಿಗೆ ಜನಮೇಜಯರಾಜನು ಯಜ್ಞದೀಕ್ಷೆಯನ್ನು ಕೈಕೊಂಡ ವೃತ್ತಾಂತವು ತಿಳಿಯಿತು. ಆ ತಕ್ಷಕನಿಗೆ ಎದೆ ನಡುಗಿ ಹೋಯಿತು. ಈ ಅನರ್ಥಕ್ಕೆಲ್ಲ ತಾನೇ ಮೊದಲನೆಯ ಕಾರಣನಾದುದರಿಂದ, ಅವನು ಮನಸ್ಸಿನಲ್ಲಿ ನಡುಗಿ, ದೇವೇಂದ್ರನ ಬಳಿಗೆ ಹೋದನು. ಮೊದಲಿಂದಲೂ ನಡೆದ ಸಂಗತಿಯನ್ನೆಲ್ಲ ಅವನಿಗೆ ತಿಳಿಸಿ, ಅವನ ಪಾದಗಳಲ್ಲಿ ಬಿದ್ದು ಮರೆಹೊಕ್ಕನು. ಆಗ ದೇವೇಂದ್ರನು ಪ್ರೇಮದಿಂದ ಅವನನ್ನು ಕುರಿತು "ತಕ್ಷಕಾ! ಆ ಸರ್ಪಯಾಗಕ್ಕಾಗಿ ನೀನೇನೂ ಹೆದರಬೇಕಾದುದಿಲ್ಲ. ಆದರಿಂದ ನಿನಗೆ ಅಪಾಯವೇನೂ ಇರದು. ನಿನಗಾಗಿ ನಾವು

ಮೊದಲೇ ಬ್ರಹ್ಮದೇವನಲ್ಲಿ ಪ್ರಾರ್ಥಿಸಿಕೊಂಡಿರುವೆವು. ನೀನು ಹೆದರಬೇಡ. ಮನಸ್ಸಿನ ಚಿಂತೆಯನ್ನು ಬಿಟ್ಟುಬಿಡು" ಎಂದನು. ಹೀಗೆ ಇಂದ್ರನು ಅಭಯವನ್ನು ಕೊಟ್ಟು ಧೈರ್ಯವನ್ನು ಹೇಳಿದಮೇಲೆ, ತಕ್ಷಕನು ಅವನ ಬಳಿಯಲ್ಲಿಯೇ ಸೇರಿಕೊಂಡು ಸುಖವಾಗಿರುತ್ತಿದ್ದನು. ಇತ್ತಲಾಗಿ ಸರ್ಪಗಳೆಲ್ಲವೂ ಅಗ್ನಿಯಲ್ಲಿ ಎಡೆಬಿಡದೆ ಬೀಳುತ್ತಿರುವುದನ್ನೂ, ತನ್ನ ಪರಿಜನರಲ್ಲಿಯೂ ಅನೇಕರು ಸತ್ತು, ಸ್ವಲ್ಪಮಂದಿ ಮಾತ್ರವೇ ಉಳಿದಿರುವುದನ್ನೂ ನೋಡಿದಮೇಲೆ, ವಾಸುಕಿಗೆ ಮನಸ್ಸಿನಲ್ಲಿ ಚಿಂತೆ ಹುಟ್ಟಿತು. ಅವನು ಬಹಳ ದುಃಖದಿಂದ ತಪಿಸುತ್ತ ತನ್ನ ಸಹೋದರಿಯಾದ ಜರತ್ಕಾರುವನ್ನು ಕರೆದು "ಎಲೆ ಭದ್ರೆ! ನನ್ನ ದೇಹವೆಲ್ಲ ಸಂಕಟದಿಂದ ದಗ್ಧವಾಗುತ್ತಿರುವುದು. ನನಗೆ ಈಗ ದಿಕ್ಕೇ ತೋರದಂತಾಗಿದೆ. ನನಗೆ ಮೂರ್ಛೆ ಬಂದಂತೆ ಬುದ್ಧಿಯು ವಿಕಲವಾಗಿದೆ. ಕಣ್ಣುಗಳು ತೊಳಸುತ್ತಿವೆ. ನನ್ನ ಎದೆಯು ಒಡೆದುಹೋಗುವಂತಿದೆ. ಈಗಾಗಲೇ ನಾನೂ ವಶತಪ್ಪಿ ಆ ಯಾಗಾಗ್ನಿಯಲ್ಲಿ ಬೀಳುವ ಸ್ಥಿತಿಯಲ್ಲಿರುವೆನು. ಜನಮೇಜಯನ ಯಾಗವು ನಮ್ಮೆಲ್ಲರ ಸಮೂಲನಾಶಕ್ಕಾಗಿಯೇ ನಡೆಯುತ್ತಿದೆ. ತಂಗೀ! ನಿಶ್ಚಯವಾಗಿ ನಾನೂ ಯಮಪುರಿಗೆ ಹೋಗಬೇಕಾದ ಸಂದರ್ಭವು ಸಮೀಪಿಸಿದಂತಿದೆ. ಕಲ್ಯಾಣೀ! ಯಾವ ಉದ್ದೇಶದಿಂದ ನಿನ್ನನ್ನು ನಾನು ಜರತ್ಕಾರುವಿಗೆ ಕೊಟ್ಟೆನೋ, ಅದನ್ನು ಸಫಲಗೊಳಿಸತಕ್ಕ ಕಾಲವು ಬಂದಿದೆ. ನನ್ನನ್ನೂ ನನ್ನ ಬಂಧುಗಳೆಲ್ಲರನ್ನೂ ಬದುಕಿಸಿಕೊಳ್ಳತಕ್ಕ ಭಾರವು ಈಗ ನಿನ್ನ ಮೇಲೆ ಬಿದ್ದಿದೆ. ಆ ಯಾಗವನ್ನು ನಿಲ್ಲಿಸುವುದಕ್ಕೆ ಈಗ ನಿನ್ನ ಮಗನೊಬ್ಬನೇ ಶಕ್ತನೆಂದು ಮೊದಲೇ ಬ್ರಹ್ಮನು ನನಗೆ ಹೇಳಿರುವನು. ಆದುದರಿಂದ ಸಹೋದರೀ! ಬಾಲನಾಗಿದ್ದರೂ ವೃದ್ಧನಂತೆ ಸಮ್ಮಾನ್ಯನಾಗಿ, ವೇದವಿತ್ತಾದ ನಿನ್ನ ಮಗನನ್ನು ಕರೆದು, ನನ್ನನ್ನೂ, ನನ್ನ ಪರಿವಾರಗಳನ್ನೂ ಈ ಆಪತ್ತಿನಿಂದ ಬಿಡುಗಡೆಮಾಡುವಂತೆ ಹೇಳಿ ಕಳುಹಿಸು" ಎಂದನು.

ಇದು ಐವತ್ತುಮೂರನೆಯ ಅಧ್ಯಾಯವು.



{ ಆಸ್ತೀಕನು ತನ್ನ ತಾಯಿಯೊಡನೆ ಸಂಭಾಷಿಸಿ ವಾಸುಕಿಗೆ ಸಮಾಧಾನವನ್ನು ಹೇಳಿ ಸರ್ಪಸತ್ರಕ್ಕೆ ಹೊರಟುದು. }

ವಾಸುಕಿಯ ಮಾತನ್ನು ಕೇಳಿದೊಡನೆ ಅವನ ತಂಗಿಯಾದ ಜರತ್ಕಾರುವು ತನ್ನ ಮಗನನ್ನು ಕರೆದು “ ಕುಮಾರಾ! ನನ್ನಣ್ಣನಾದ ನಾಗರಾಜನು ಒಂದು ಮಹಾಕಾರ್ಯವನ್ನುದ್ದೇಶಿಸಿ ನನ್ನನ್ನು ನಿನ್ನ ತಂದೆಗೆ ಕನ್ಯಾದಾನಮಾಡಿದನು. ಅದಕ್ಕೆ ಈಗ ಕಾಲವು ಬಂದೊದಗಿದೆ. ನಿನ್ನಿಂದ ಆ ಕಾರ್ಯವು ಕೈಗೂಡಬೇಕಾಗಿದೆ. ಆ ಕಾರ್ಯಸಾಧನೆಗಾಗಿ ನೀನು ಈಗಲೇ ಹೊರಡಬೇಕು” ಎಂದಳು. ಅದಕ್ಕಾ ಆಸ್ತೀಕನು “ ಅಮ್ಮಾ! ಅದೇನದು? ನನ್ನ ಸೋದರಮಾವನು ಯಾವ ಕಾರ್ಯೋದ್ದೇಶದಿಂದ ನಿನಗೆ ವಿವಾಹಮಾಡಿದನು. ಅದನ್ನು ನೀನು ವಿವರವಾಗಿ ತಿಳಿಸು. ಅದನ್ನು ಕೇಳಿ ಆಮೇಲೆ ನಿನ್ನ ಅಜ್ಞೆಯಂತೆ ನಡೆಯುವೆನು” ಎಂದನು. ಆಗ ವಾಸುಕಿಯ ಸಹೋದರಿಯು ತನ್ನ ಬಂಧುಗಳಿಗೆಲ್ಲ ತನ್ನ ಮಗನಿಂದ ಕ್ಷೇಮವುಂಟಾಗುವುದೆಂಬ ನಂಬಿಕೆಯಿಂದ ಅವನನ್ನು ಕುರಿತು “ ಪುತ್ರಾ! ಸರ್ಪಕುಲಕ್ಕೆಲ್ಲ ತಾಯಿಯಾದ ಕದ್ರುವೆಂಬವಳುಂಟು. ಅವಳು ಒಮ್ಮೆ ತನ್ನ ಮಕ್ಕಳಲ್ಲಿ ಕೋಪಗೊಂಡು ಕ್ರೂರಶಾಪವನ್ನು ಕೊಟ್ಟುಬಿಟ್ಟಳು. ಅದರ ಕಾರಣವೇನೆಂದು ಕೇಳುವೆಯಾ? ಅವಳು ತನ್ನ ಸವತಿಯಾದ ವಿನತೆಯೊಂಬವಳೊಡನೆ, ಅಸಂಬದ್ಧವಾದ ಒಂದು ಪಂಥವನ್ನು ಮಾಡಿಕೊಂಡು, ಆ ಪಂಥವನ್ನು ಮೋಸದಿಂದ ಗೆಲ್ಲುವುದಕ್ಕಾಗಿ ತನ್ನ ಮಕ್ಕಳನ್ನು ಕರೆದು, “ ಎಲೈ ಮಕ್ಕಳಿರಾ! ನಾನು ವಿನತೆಗೆ ದಾಸಿಯಾಗುವಹಾಗೆ ಒಂದು ಪಂಥವನ್ನು ಮಾಡಿಕೊಂಡುಬಿಟ್ಟೆನು. ಆ ದಾಸ್ಯವನ್ನು ನೀವು ತಪ್ಪಿಸಬೇಕು. ಉಚ್ಚೈಶ್ರವಸ್ಸೆಂಬ ಕುದುರೆಯ ಬಾಲಕ್ಕೆ ನೀವು ಸುತ್ತಿಕೊಂಡು ಅದನ್ನು ಕಪ್ಪಾಗಿ ಕಾಣಿಸಬೇಕು” ಎಂದಳು. ಅವರು ಆ ಮಾತಿಗೆ ಸಮ್ಮತಿಸದಿರಲು “ ಜನಮೇಜಯನು ನಿಮ್ಮನ್ನು ಯಾಗದಲ್ಲಿ ದಹಿಸಿಬಿಡುವನು. ಅದರಲ್ಲಿ ನೀವು ಸಾಯಿರಿ” ಎಂದು ಶಪಿಸಿದಳು. ಈ ಶಾಪವು ಬ್ರಹ್ಮದೇವನಿಗೂ ಸಮ್ಮತವಾಯಿತು. ಸೃಷ್ಟಿಕರ್ತನಾದ ಬ್ರಹ್ಮನೂ “ ತಥಾಸ್ತು” ಎಂದು ಅದನ್ನು ಅನುಮೋದಿಸಿಬಿಟ್ಟನು. ಇದನ್ನು ಕೇಳಿದ ವಾಸುಕಿಯು,

ಅಮೃತಮಥನಕಾಲದಲ್ಲಿ ತಾನು ದೇವತೆಗಳಿಗೆ ಸಹಾಯಮಾಡಿದಮೇಲೆ ಅವರಲ್ಲಿ ಮರೆಹೊಕ್ಕು ಪ್ರಾರ್ಥಿಸಲು, ಅಮೃತಲಾಭದಿಂದ ಕೃತಾರ್ಥರಾದ ದೇವತೆಗಳು ವಾಸುಕಿಯನ್ನು ಮುಂದಿಟ್ಟುಕೊಂಡೇ ಬ್ರಹ್ಮನ ಬಳಿಗೆ ಹೋಗಿ, "ಪಿತಾಮಹಾ! ಈ ನಾಗರಾಜನಾದ ವಾಸುಕಿಯು ತನ್ನ ಕಡೆಯವರಿಗೆ ಬಂದ ಅನರ್ಥಕ್ಕಾಗಿ ಬಹಳ ಕೊರಗುತ್ತಿರುವನು. ತಾಯಿಯ ಶಾಪದಿಂದ ಸರ್ಪಗಳಿಗೆ ಅಪಾಯವಿಲ್ಲದಿರುವ ಮಾರ್ಗವನ್ನು ತಿಳಿಸಬೇಕು" ಎಂದು ಪ್ರಾರ್ಥಿಸಿದರು. ಆಗ ಬ್ರಹ್ಮನು ಅವರನ್ನು ಕುರಿತು, ಜರತ್ಕಾರುವೆಂಬ ತಪಸ್ವಿಯು ಜರತ್ಕಾರುವೆಂಬ ಭಾರ್ಯೆಯನ್ನು ವರಿಸುವನೆಂದೂ, ಆ ದಂಪತಿಗಳಲ್ಲಿ ಜನಿಸಿದ ಬ್ರಾಹ್ಮಣನು ಸರ್ಪಗಳನ್ನು ತಾಯಿಯ ಶಾಪದಿಂದ ಕಾಪಾಡುವನೆಂದೂ ಹೇಳಿದನು. ಈ ಮಾತನ್ನು ಕೇಳಿ ನನ್ನಣ್ಣನು ಮಹಾತ್ಮನಾದ ನಿನ್ನ ತಂದೆಗೆ ನನ್ನನ್ನು ಮೊದಲೇ ಕನ್ಯಾದಾನಮಾಡಿದನು. ಬ್ರಹ್ಮವಾಕ್ಯದಂತೆ ನನ್ನಲ್ಲಿ ನೀನು ಹುಟ್ಟಿರುವೆ. ನೀನು ನಮ್ಮನ್ನೆಲ್ಲ ಈ ಮಹಾಭಯದಿಂದ ಕಾಪಾಡಬೇಕು. ಆ ಕಾಲವು ಈಗ ಪ್ರಾಪ್ತವಾಗಿದೆ. ನನ್ನ ಸಹೋದರನನ್ನೂ ನೀನು ಅಗ್ನಿಗಂಡದಿಂದ ತಪ್ಪಿಸಿ, ಅವನು ನನ್ನನ್ನು ನಿನ್ನ ತಂದೆಗೆ ವಿವಾಹಮಾಡಿಕೊಟ್ಟ ಉದ್ದೇಶವು ವ್ಯರ್ಥವಾಗದಂತೆ ಮಾಡು. ಇದರಮೇಲೆ ನಿನ್ನ ಅಭಿಪ್ರಾಯವೇನಾದರೂ ಇದ್ದರೆ ತಿಳಿಸು" ಎಂದಳು.

ಅದಕ್ಕಾ ಆಸ್ತೀಕನು "ಅಮ್ಮಾ! ಹಾಗೆಯೇ ಆಗಲಿ! ಅದಕ್ಕೆ ತಡೆಯೇನಿದೆ?" ಎಂದು ಹೇಳಿ, ದುಃಖದಿಂದ ತಪಿಸುತಿದ್ದ ವಾಸುಕಿಯ ಬಳಿಗೆ ಬಂದು, ಅವನಿಗೆ ಪುನರ್ಜೀವವನ್ನುಂಟುಮಾಡುವ ಮಾತುಗಳಿಂದ "ಮಾವಾ! ಚಿಂತಿಸಬೇಡ! ನಾನು ನಿನ್ನನ್ನು ಆ ಶಾಪದಿಂದ ಬಿಡುಗಡೆಮಾಡುವೆನು. ಇದು ಸತ್ಯವು! ಹೆದರಬೇಡ! ಕಳವಳವನ್ನು ಬಿಟ್ಟುಬಿಡು. ನಿನಗೇನೂ ಭಯವಿಲ್ಲ. ನಿಮಗೆಲ್ಲ ಕ್ಷೇಮವಾಗುವ ಪ್ರಯತ್ನವನ್ನು ಮಾಡುವೆನು. ವಿನೋದಕ್ಕಾಗಿಯಾದರೂ ನನ್ನ ಬಾಯಿಂದ ಸುಳ್ಳುಮಾತು ಹೊರಡದು. ಇನ್ನು ಇಂತಹ ಸಂದರ್ಭಗಳಲ್ಲಿ ಹೇಳಬೇಕಾದುದೇನು? ಈಗಲೇ ನಾನು ಯಜ್ಞದೀಕ್ಷೆಯಲ್ಲಿರುವ ಜನಮೇಜಯರಾಜನ ಬಳಿಗೆ

ಹೋಗಿ, ಅವನನ್ನು ಹಿತವಾಕ್ಯಗಳಿಂದ ತೃಪ್ತಿಗೊಳಿಸಿ, ಆ ಯಾಗವನ್ನು ಅವನು ನಿಲ್ಲಿಸಿಬಿಡುವಂತೆ ಮಾಡುವೆನು. ನಾಗರಾಜಾ! ಇದುಮಾತ್ರ ವಲ್ಲದೆ ನನ್ನಿಂದ ನಿನಗೆ ಬೇರೆ ಏನಾಗಬೇಕಾಗಿದ್ದರೂ ಅದನ್ನೆಲ್ಲ ನಿರೀಕ್ಷಿಸಬಹುದು. ನನ್ನಲ್ಲಿ ನೀನಿಟ್ಟ ನಂಬಿಕೆಗೆ ಎಂದಿಗೂ ಲೋಪವು ಬಾರದೆಂದು ದೃಢವಾಗಿರು" ಎಂದನು.

ಅದನ್ನು ಕೇಳಿ ವಾಸುಕಿಯು "ವತ್ಸಾ! ನೀನು ಎಷ್ಟು ಧೈರ್ಯವನ್ನು ಹೇಳಿದರೇನು? ನನ್ನ ಮೈ ನಡುಗುತ್ತಿದೆ. ನನ್ನ ಎದೆಯು ಒಡೆಯುತ್ತಿದೆ. ಮಾತೃಶಾಪವೆಂಬ ಬ್ರಹ್ಮದಂಡದಿಂದ ಹತನಾದ ನನಗೆ ದಿಕ್ಕೇ ತಿಳಿಯದಂತಾಗಿದೆ" ಎಂದನು. ಅದಕ್ಕಾ ಆಸ್ತೀಕನು ತಿರುಗಿ ವಾಸುಕಿಯನ್ನು ಕುರಿತು "ಸರ್ಪರಾಜಾ! ನೀನು ಯಾವ ವಿಧದಲ್ಲಿಯೂ ಭಯಪಡಬೇಕಾಗಿಲ್ಲ. ನಿನಗುಂಟಾಗಿರುವ ಅಗ್ನಿಭಯವನ್ನು ನಾನು ಖಂಡಿತವಾಗಿ ತಪ್ಪಿಸಬಲ್ಲೆನು. ಪ್ರಳಯಾಗ್ನಿಗೆ ಸಮಾನಶಕ್ತಿಯುಳ್ಳುದಾಗಿ, ಮಹಾಭಯಂಕರವೆನಿಸಿದ ಆ ಬ್ರಹ್ಮದೇವನ ಶಿಕ್ಷೆಯನ್ನಾದರೂ ನಾನು ತಪ್ಪಿಸುವೆನು. ಚಿಂತಿಸಲೇಬೇಡ, ಧೈರ್ಯಗೊಂಡಿರು" ಎಂದನು.

ಹೀಗೆ ಆಸ್ತೀಕನು ವಾಸುಕಿಯ ಮನಸ್ಸಿನಲ್ಲಿದ್ದ ದುಸ್ಸಹವಾದ ಚಿಂತೆಯನ್ನು ನೀಗಿಸಿ, ಅದನ್ನು ತನ್ನೊಳಗಿಟ್ಟುಕೊಂಡನು. ಒಡನೆಯೇ ಸರ್ಪಗಳ ರಕ್ಷಣೆಯನ್ನುದ್ದೇಶಿಸಿ ಜನಮೇಜಯನ ಯಾಗಶಾಲೆಗೆ ಹೊರಟು ಬಂದನು. ಆ ಯಾಗಶಾಲೆಯ ವೈಭವವನ್ನು ಕೇಳಬೇಕೆ? ಬೇಕುಬೇಕಾದ ಎಲ್ಲಾ ಸಮೃದ್ಧಿಗಳಿಂದ ಶೋಭಿಸುತ್ತಿರುವುದು. ಸೂರ್ಯಾಗ್ನಿಗಳಂತೆ ತೇಜಸ್ವಿಗಳಾದ ಅನೇಕಸದಸ್ಯರು ನೆರೆದಿರುವರು. ಆ ಯಾಗಶಾಲೆಯನ್ನು ನೋಡಿ ಆಸ್ತೀಕನು ಒಳಕ್ಕೆ ಪ್ರವೇಶಿಸುವಷ್ಟರಲ್ಲಿ, ಬಾಗಿಲು ಕಾಯುತಿದ್ದ ಸೇವಕರು ಇವನನ್ನು ಅಲ್ಲಿಯೇ ತಡೆದು ನಿಲ್ಲಿಸಿದರು. ಆಗ ಆ ಬ್ರಾಹ್ಮಣೋತ್ತಮನು ಯಜ್ಞಶಾಲೆಯೊಳಗೆ ಪ್ರವೇಶಿಸುವುದಕ್ಕಾಗಿ ದ್ವಾರಪಾಲಕರ ಮುಂದೆ ನಿಂತು, ಆ ಯಜ್ಞವನ್ನು ಸ್ತೋತ್ರಮಾಡತೊಡಗಿದನು. ಆಗ ಅವನು ಅಲ್ಲಿ ಕ್ರಮವಾಗಿ ಯಾಗದೀಕ್ಷಿತನಾದ ಜನಮೇಜಯರಾಜನನ್ನೂ,

ಋತ್ವಿಕ್ಕುಗಳನ್ನೂ ಸದಸ್ಯರನ್ನೂ, ಅಗ್ನಿಹೋತ್ರವನ್ನೂ ಹೀಗೆಂದು ಸ್ತುತಿಸುವನು.

ಇದು ಐವತ್ತುನಾಲ್ಕನೆಯ ಅಧ್ಯಾಯವು.

ಆಸ್ತೀಕನು ಜನಮೇಜಯನ ಯಜ್ಞವನ್ನು ಪ್ರಶಂಸೆ ಮಾಡಿದುದು.

ಆಸ್ತೀಕನು ಆ ಯಾಗಶಾಲೆಯ ಮುಂದೆ ನಿಂತು "ಹಿಂದೆ ಪ್ರಯಾಗಕ್ಷೇತ್ರದಲ್ಲಿ ಸೋಮನ ಯಜ್ಞ, ವರುಣನ ಯಜ್ಞ, ಪ್ರಜಾಪತಿಯಾದ ಬ್ರಹ್ಮನ ಯಜ್ಞ, ಇವೆಲ್ಲವೂ ನಡೆದುವು. ಓ ಭರತಕುಲೋತ್ತಮಾ! ಪರೀಕ್ಷಿತ್ಕುಮಾರಾ! ಈ ನಿನ್ನ ಯಜ್ಞವೂ ಅದೇವಿಧವಾದುದು. ನಿನ್ನ ಇಷ್ಟರಾದ ನಮ್ಮೆಲ್ಲರಿಗೂ ಇದರಿಂದ ಕ್ಷೇಮವಾಗಲಿ!

ಇಂದ್ರನ ಯಾಗಗಳು ನೂರೆಂದು ಎಣಿಸಲ್ಪಟ್ಟಿವೆ. ಆ ನೂರು ಯಾಗಗಳನ್ನೂ ನೂರರಿಂದ ಗುಣಿಸಿದರೆ ಎಷ್ಟಾಗುವುವೋ ಆ ಹತ್ತು ಸಾವಿರ ಯಾಗಗಳಿಗೆ ಸಮಾನವಾದುದು ಈ ನಿನ್ನ ಯಾಗವು. ಓ ಭರತಕುಲಾಗ್ರಣೀ! ಪರೀಕ್ಷಿತ್ಕುಮಾರಾ! ಇದರಿಂದ ನಮ್ಮ ಪ್ರಿಯಜನಗಳಿಗೆಲ್ಲ ಕ್ಷೇಮವುಂಟಾಗಲಿ!

ಗಯ, ಶಶಿಬಿಂದು, ವೈಶ್ರವಣರೆಂಬವರ ಯಾಗಗಳಂತೆಯೇ ಈ ನಿನ್ನ ಯಾಗವೂ ಅತಿಶಯಿಸಿದೆ. ಓ ಭರತವಂಶಾಗ್ರಣೀ! ಪರೀಕ್ಷಿತ್ಕುಮಾರಾ! ನಮ್ಮ ಇಷ್ಟಜನಕ್ಕೆಲ್ಲ ಇದರಿಂದ ಕ್ಷೇಮವುಂಟಾಗಲಿ!

ನೃಗನ ಯಜ್ಞ, ಅಜಮೀಢನೆಂಬ ರಾಜನ ಯಜ್ಞ, ದಶರಥಪುತ್ರನಾದ ಶ್ರೀರಾಮನ ಯಜ್ಞ, ಇವು ಹೇಗಿದ್ದುವೋ ಈ ನಿನ್ನ ಯಾಗವೂ ಅವುಗಳಿಗೆ ಸಾಟಿಯಾದುದು. ಓ ಭರತವಂಶತಿಲಕಾ! ಪರೀಕ್ಷಿತ್ಕುಮಾರಾ! ನಮ್ಮ ಪ್ರಿಯಜನಗಳಿಗೆ ಇದು ಕ್ಷೇಮಕರವಾಗಲಿ!

ಅಜಮೀಢಕುಲದಲ್ಲಿ ಧರ್ಮದೇವತೆಯ ಪುತ್ರನಾಗಿ ಜನಿಸಿದ ಯುಧಿಷ್ಠಿರನ ಯಾಗಕ್ಕೆ ಸಾಟಿಯಾದುದು ಈ ನಿನ್ನ ಯಾಗವು. ಓ ಭಾರತ

ಕುಲೋತ್ತಮಾ ! ಪರೀಕ್ಷಿತ್ಕುಮಾರಾ ! ನಮ್ಮ ಪ್ರಿಯರಿಗೆಲ್ಲ ಕ್ಷೇಮವುಂಟಾಗಲಿ !

ಸತ್ಯವತೀಪುತ್ರನಾದ ಶ್ರೀಕೃಷ್ಣದ್ವೈಪಾಯನನ ಯಾಗವೂ ಹಿಂದೆ ನಡೆಯಿತು. ಅದರಲ್ಲಿ ಅವನೇ ತಾನಾಗಿ ಕ್ರಿಯೆಗಳನ್ನು ನಡೆಸಿದನು. ಈ ನಿನ್ನ ಯಾಗವೂ ಅದಕ್ಕೆ ಸಮಾನವಾದುದು. ನಮ್ಮ ಪ್ರಿಯರಿಗೆಲ್ಲ ಕ್ಷೇಮವಾಗಲಿ !

ಈ ನಿನ್ನ ಯಾಗದಲ್ಲಿರುವ ಋತ್ವಿಕ್ಕುಗಳೆಲ್ಲರೂ ಸೂರ್ಯಸಮಾನತೇಜಸ್ಸುಳ್ಳವರು. ವೃತ್ರವೈರಿಯಾದ ಸಾಕ್ಷಾದ್ದೇವೇಂದ್ರನ ಯಾಗದಲ್ಲಿದ್ದ ಋತ್ವಿಕ್ಕುಗಳಿಗೆ ಸಮಾನರು. ಇವರಿಗೆ ತಿಳಿಯಬೇಕಾದುದೊಂದಿಲ್ಲ. ಇಂತಹ ಸತ್ಪಾತ್ರದಲ್ಲಿ ಕೊಟ್ಟ ದಾನವು ಎಂದಿಗೂ ನಷ್ಟವಾಗದು. ಕೃಷ್ಣದ್ವೈಪಾಯನನೆಂಬ ವ್ಯಾಸಮಹರ್ಷಿಗೆ ಸಮಾನನಾದ ಋತ್ವಿಕ್ಕು ಲೋಕದಲ್ಲಿ ಬೇರೆ ಯಾವನೂ ಇಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ತಮ್ಮ ತಮ್ಮ ಕ್ರಿಯೆಗಳಲ್ಲಿ ಸಮರ್ಥರಾಗಿ ಈ ಭೂಮಿಯಲ್ಲಿ ಎಲ್ಲೆಲ್ಲಿರತಕ್ಕ ಋತ್ವಿಕ್ಕುಗಳೂ ಅವನ ಶಿಷ್ಯರೇ! ಅಂತವರೆಲ್ಲರೂ ಇಲ್ಲಿ ಸೇರಿರುವರು. ವಿಭಾವಸುವೆಂದೂ, ಚಿತ್ರಭಾನುವೆಂದೂ, ಹಿರಣ್ಯರೇತಸ್ಸೆಂದೂ, ಹುತಭುಜನೆಂದೂ ಹೆಸರುಗೊಂಡ ಮಹಾತ್ಮನಾದ ಅಗ್ನಿದೇವನು ಪ್ರದಕ್ಷಿಣವಾಗಿ ಸುತ್ತುವ ಜ್ವಾಲೆಗಳೊಡನೆ ನೀನು ಕೊಡುವ ಹವಿಸ್ಸನ್ನು ಎಷ್ಟೋ ಆಶೆಯಿಂದ ಸ್ವೀಕರಿಸುತ್ತಿರುವನು. ಈ ಮನುಷ್ಯಲೋಕದಲ್ಲಿ ನಿನ್ನಂತೆ ಪ್ರಜೆಗಳನ್ನು ಧರ್ಮದಿಂದ ಪಾಲಿಸತಕ್ಕ ರಾಜನು ಬೇರೊಬ್ಬನಿಲ್ಲ. ನಿನ್ನ ಧೈರ್ಯಕ್ಕಾಗಿ ಸಂತೋಷಗೊಂಡೆನು. ನೀನೊಬ್ಬನು, ವರುಣನೊಬ್ಬನು, ಯಮನೊಬ್ಬನು, ಈ ಮೂವರೇ ಧರ್ಮಕ್ಕೆ ಪ್ರಭುಗಳು. ಇಂದ್ರನು ತಾನೇ ವಜ್ರಪಾಣಿಯಾಗಿ ಬಂದು ಈ ಲೋಕದಲ್ಲಿ ಪ್ರಜೆಗಳನ್ನು ಕಾಪಾಡುವಂತೆ ನೀನು ಜನರನ್ನು ಕಾಪಾಡುತ್ತಿರುವೆಯೆಂದು ನಾನು ಭಾವಿಸುವೆನು. ಈ ಲೋಕದಲ್ಲಿ ನಿನ್ನಂತಹ ಪ್ರಜಾರಕ್ಷಕನಾದ ಬೇರೆ ರಾಜನು ಈಗಲೂ ಇಲ್ಲ. ಮುಂದೆಯೂ ಇರಲಾರನು. ಖಟ್ವಾಂಗ, ನಾಭಾಗ, ಯಯಾತಿ, ದಿಲೀಪ, ಮಾಂಧಾತೃ, ಮೊದಲಾದ ರಾಜರಿಗೆ ಸಮಾನವಾದ ಪ್ರಭಾವವುಳ್ಳ ಓ

ಮಹಾರಾಜಾ! ನೀನು ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನು. ಭೀಷ್ಮನಂತೆ ಸ್ಥಿರವ್ರತವುಳ್ಳವನು. ವಾಲ್ಮೀಕಿಯ ವೀರ್ಯದಂತೆ ನಿನ್ನ ವೀರ್ಯವು ಗುಪ್ತವಾದುದು. ವಸಿಷ್ಠನ ಕೋಪದಂತೆ ನಿನ್ನ ಕೋಪವು ನಿನ್ನ ಮನಸ್ಸಿಗೆ ಅಧೀನವಾದುದು. ನಿನ್ನ ಪದವಿಯು ಇಂದ್ರಪದವಿಗೆ ಸಮಾನವಾದುದು. ಕಾಂತಿಯಿಂದ ನೀನು ಸಾಕ್ಷಾನ್ನಾರಾಯಣನಂತೆ ಬೆಳಗುವೆ. ಧರ್ಮನಿರ್ಣಯವನ್ನು ತಿಳಿಯುವುದರಲ್ಲಿ ನೀನು ಯಮನಿಗೂ, ಸದ್ಗುಣಗಳಲ್ಲಿ ಕೃಷ್ಣನಿಗೂ ಸಮಾನನು. ವಸುಗಳಂತೆ ಸಂಪತ್ತುಗಳಿಗೆ ವಾಸಭೂತನು. ಯಜ್ಞಗಳಿಗೆಲ್ಲ ನೀನೇ ನಿಧಿ. ಬಲದಲ್ಲಿ ದಂಭೋದ್ಭವನೆಂಬ ರಾಜನಿಗೆ ಸಮಾನನು. ಪರಶುರಾಮನಂತೆ ಶಸ್ತ್ರಾಸ್ತ್ರಗಳಲ್ಲಿ ಪ್ರಾಜ್ಞನು. ಔರ್ವ, ಮತ್ತು ತ್ರಿತರೆಂಬ ಇಬ್ಬರು ಋಷಿಗಳಿಗೂ, ಭಗೀರಥನಿಗೂ ಸಮಾನವಾದ ನಿನ್ನ ತೇಜಸ್ಸು ಕಣ್ಣಿಂದ ನೋಡುವುದಕ್ಕೂ ದುಸ್ಸಹವೆನಿಸಿದೆ'' ಎಂದನು. ಈ ಸ್ತುತಿವಾಕ್ಯಗಳು ಆ ಯಾಗಸಭೆಯಲ್ಲಿದ್ದ ರಾಜನಿಗೂ, ಸದಸ್ಯರಿಗೂ, ಋತ್ವಿಕ್ಕುಗಳಿಗೂ, ಅಗ್ನಿದೇವನಿಗೂ ಕಿವಿಗೆ ಬಿದ್ದು, ಅವರಿಗೆ ಅಪಾರಸಂತೋಷವುಂಟಾಯಿತು. ಆಗ ಜನಮೇಜಯನು ಆ ಸಭೆಯಲ್ಲಿದ್ದವರೆಲ್ಲರ ಮುಖಲಕ್ಷಣಗಳಿಂದಲೂ, ಇಂಗಿತಗಳಿಂದಲೂ ಅವರ ಅಭಿಪ್ರಾಯವನ್ನು ತಿಳಿದುಕೊಂಡು, ಅವರೊಡನೆ ಹೀಗೆಂದು ಹೇಳುವನು.

ಇದು ಐವತ್ತೈದನೆಯ ಅಧ್ಯಾಯವು.

---

ಸರ್ಪಯಾಗದಲ್ಲಿ ಋತ್ವಿಕ್ಕುಗಳು ಮಂತ್ರಪೂರ್ವಕವಾಗಿ ಆಹ್ವಾನಮಾಡಿದಮೇಲೆ ತಕ್ಷಕನೊಡನೆ ಇಂದ್ರನೂ ಆಕರ್ಷಿಸಲ್ಪಟ್ಟುದು. ಇದೇ ಸಮಯದಲ್ಲಿ ಆಸ್ತೀಕನು ಯಜ್ಞವನ್ನು ನಿಲ್ಲಿಸುವಂತೆ ವರವನ್ನು ಕೇಳಿದುದು.

ಆಗ ಜನಮೇಜಯನು ಋತ್ವಿಕ್ಕುಗಳನ್ನು ನೋಡಿ '' ಓ ವಿಪ್ರೋತ್ತಮರೇ! ಇವನು ಬಾಲನಂತೆ ಕಂಡರೂ ಬಹಳ ವೃದ್ಧನಂತೆ ಮಾತಾಡುತ್ತಿರುವನು. ಇವನು ಬಾಲನಲ್ಲ. ದೊಡ್ಡವನೆಂದೇ ತೋರುವುದು. ಈ ಯಜ್ಞಕಾಲದಲ್ಲಿ ಇಂತಹ ಸತ್ಪಾತ್ರವು ದೊರೆಯುವುದೇ ದುರ್ಲಭವು. ಇವ

ನಿಗೆ ಕೇಳಿದ ವರವನ್ನು ಕೊಟ್ಟು ಸಂತೋಷಪಡಿಸಬೇಕೆಂದಿರುವೆನು. ನೀವೂ ಇದಕ್ಕೆ ಅನುಕೂಲರಾಗಿ ನನ್ನನ್ನು ಅನುಮತಿಸಬೇಕು" ಎಂದನು. ಅದಕ್ಕಾ ಸದಸ್ಯರು "ಮಹಾರಾಜಾ! ತಡೆಯೇನು? ಬ್ರಾಹ್ಮಣನು ವಿದ್ಯಾವಂತನಲ್ಲದಿದ್ದರೂ ಅವನನ್ನು ವಿದ್ವಾಂಸನಂತೆಯೇ ಭಾವಿಸಿ ಪೂಜಿಸಬೇಕು. ಹೀಗಿರುವಾಗ ಇಂತವರನ್ನು ಸತ್ಕರಿಸುವ ವಿಷಯದಲ್ಲಿ ಕೇಳಬೇಕಾದುದೇನಿದೆ? ನಿನ್ನ ಇಷ್ಟಸಿದ್ಧಿಗಾಗಿ ಈ ಬ್ರಾಹ್ಮಣೋತ್ತಮನನ್ನು ಮೊದಲು ಸಂತೋಷಿಸು. ಇವನು ಈಗ ನಿನ್ನಿಂದ ತನ್ನ ಕೋರಿಕೆಗಳನ್ನೆಲ್ಲ ಪಡೆಯಲಿ. ಇಂತವರಿಗೆ ನೀನು ಏನನ್ನು ಕೊಟ್ಟರೂ ಸಲ್ಲುವುದು. ಇಂತವರ ಪೂಜೆಯಿಂದ ಬೇಗನೆ ನಿನ್ನ ಇಷ್ಟಾರ್ಥವೂ ಕೈಗೂಡುವುದು. ನಿನ್ನ ವೈರಿಯಾದ ತಕ್ಷಕನು ಶೀಘ್ರದಲ್ಲಿಯೇ ಅಗ್ನಿಯಲ್ಲಿ ಬಂದು ಬೀಳುವನು" ಎಂದರು. ಉದಾರ ಸ್ವಭಾವವುಳ್ಳ ಜನಮೇಜಯನು ಕೂಡಲೇ ಆಗಂತುಕನಾದ ಆ ಬ್ರಾಹ್ಮಣನನ್ನು ಸಮೀಪಕ್ಕೆ ಕರೆಯಿಸಿಕೊಂಡು "ಓ ಬ್ರಾಹ್ಮಣೋತ್ತಮಾ! ನಿನಗೆ ಬೇಕಾದ ಕೋರಿಕೆಯನ್ನು ತಿಳಿಸು" ಎಂದು ಹೇಳಿ ಮುಗಿಸುವಷ್ಟರಲ್ಲಿ, ಆ ಯಜ್ಞದಲ್ಲಿ ಹೋತೃಸ್ಥಾನದಲ್ಲಿದ್ದ ಬ್ರಾಹ್ಮಣನು ಮನಸ್ಸಿನಲ್ಲಿ ಅಷ್ಟಾಗಿ ಉತ್ಸಾಹವಿಲ್ಲದೆ, ತನ್ನಲ್ಲಿ ತಾನು "ಇಷ್ಟಾದರೂ ಈ ಕ್ರಿಯೆಯಲ್ಲಿ ತಕ್ಷಕನ ತಲೆಯನ್ನೇ ಕಾಣೆನಲ್ಲಾ" ಎಂದು ಗುಣಗುಟ್ಟುತ್ತಿದ್ದನು. ಇದನ್ನು ಕೇಳಿ ಜನಮೇಜಯನು "ಹೌದು ನಿಜವೇ! ಎಲೈ ಋತ್ವಿಕ್ಕುಗಳೇ! ನೀವೆಲ್ಲರೂ ಆ ತಕ್ಷಕನನ್ನು ಕೂಡಲೇ ಬರಮಾಡುವುದಕ್ಕೆ ನಿಮ್ಮಿಂದಾದ ಪ್ರಯತ್ನವನ್ನು ಮಾಡಬೇಕು. ಆ ತಕ್ಷಕನೇ ನನಗೆ ಮುಖ್ಯ ವಿರೋಧಿ. ಅವನನ್ನು ಬೇಗನೆ ಬರಮಾಡಿರಿ! ಯಜ್ಞಕರ್ಮವು ಶೀಘ್ರದಲ್ಲಿ ಮುಗಿಯುವುದಕ್ಕೆ ಪ್ರಯತ್ನಿಸಿರಿ" ಎಂದನು. ಅದಕ್ಕಾ ಋತ್ವಿಕ್ಕುಗಳು "ರಾಜೇಂದ್ರಾ! ಆ ತಕ್ಷಕನು ಭಯಪೀಡಿತನಾಗಿ ಇಂದ್ರನ ಗೃಹದಲ್ಲಿ ಅವಿತುಕೊಂಡಿರುವನೆಂದು ಮಂತ್ರದೇವತೆಗಳಿಂದಲೂ ಅಗ್ನಿಹೋತ್ರನಿಂದಲೂ ನಮಗೆ ಸೂಚಿಸಲ್ಪಟ್ಟಿದೆ. ಇದಲ್ಲದೆ ಪೂರ್ವದಲ್ಲಿ ಲೋಹಿತಾಕ್ಷನೆಂಬ ಸೂತನೂ ಕೂಡ ಇದು ಹೀಗೆಯೇ ಆಗುವುದೆಂದು ನಮಗೆ ಮೊದಲೇ ತಿಳಿಸಿರುವನು. ಅವನು ಪೂರ್ವಕಲ್ಪದ ಚರಿತ್ರವನ್ನೆಲ್ಲ ತಿಳಿದ ಮಹಾತ್ಮನಾದ ಪೌರಾಣಿಕನು" ಎಂದರು. ಆಗ ರಾಜನು ಲೋ

ಹಿತಾಕ್ಷನೆಂಬ ಸೂತನನ್ನು ಕರೆಸಿ ಕೇಳಲು, ಅವನು "ರಾಜಾ! ಅದು ವಾಸ್ತವವೇ! ಈ ಬ್ರಾಹ್ಮಣನು ಹೇಳಿದಂತೆಯೇ ಅದು ನಡೆದಿದೆ. ಪೂರ್ವ ಕಲ್ಪದ ಚರಿತ್ರವನ್ನು ತಿಳಿದ ನಾನು ಅದರಮೇಲೆಯೇ ಹೀಗೆ ಹೇಳುತ್ತಿರುವೆನು. ಇಂದ್ರನು ತಕ್ಷಕನಿಗೆ ಅಗ್ನಿಭಯವಿಲ್ಲವೆಂದು ವರವನ್ನು ಕೊಟ್ಟು ತನ್ನಲ್ಲಿರಿಸಿಕೊಂಡಿರುವನು. ಇಂದ್ರನ ಅಭಯುದಾನದಿಂದ ತಕ್ಷಕನು ಧೈರ್ಯಗೊಂಡಿರುವನು" ಎಂದನು. ಈ ಮಾತನ್ನು ಕೇಳಿ ಜನಮೇಜಯನಿಗೆ ಮನಸ್ಸು ವ್ಯಾಕುಲವಾಯಿತು. ಆಮೇಲೆ ಆವನು ಹೋತೃವನ್ನು ಕುರಿತು "ಹೇಗಿದ್ದರೂ ಆ ಸರ್ಪವನ್ನುಮಾತ್ರ ನಾವು ಬಿಡಬಾರದು. ಇಂದ್ರನನ್ನೂ ಸೇರಿಸಿಯೇ ಆ ತಕ್ಷಕನನ್ನು ಈ ಬೆಂಕಿಯಲ್ಲಿ ಬೀಳುವಂತೆ ಮಾಡಲು ಪ್ರಯತ್ನಿಸಿರಿ" ಎಂದನು. ಆಗ ಹೋತೃವು ಮನಸ್ಸಿನಲ್ಲಿ ದೃಢಮಾಡಿಕೊಂಡು "ಸಹೇಂದ್ರಾಯ ತಕ್ಷಕಾಯ" ಎಂಬ ಶಬ್ದಗಳೊಡನೆ ಸ್ವಾಹಾಕಾರವನ್ನುಚ್ಚರಿಸುತ್ತ "ಜಂಭವೈರಿಯಾದ ಆ ಇಂದ್ರನು ತಕ್ಷಕಸಹಿತನಾಗಿ ಈ ಬೆಂಕಿಗೆ ಆಹುತಿಯಾಗಲಿ" ಎಂದು ಹೋಮವನ್ನು ಮಾಡಿದನು. ಈ ಹೋಮಕಾರ್ಯವನ್ನಾರಂಭಿಸಿದಾಗಲೇ ದೇವೇಂದ್ರನಿಗೆ ತನಗೂ ಕೊನೆಗಾಲವು ಸಮಾಪಿಸಿತೆಂದು ತಿಳಿದುಹೋಯಿತು. ಆ ಮಂತ್ರಬಲದಿಂದ ಅವನೂ ಆಕರ್ಷಿಸಲ್ಪಟ್ಟನು. ದೇವೇಂದ್ರನು ವಿಮಾನದಲ್ಲಿದ್ದಂತೆಯೇ ಸಮಸ್ತ ದೇವತೆಗಳಿಂದ ಆವರಿಸಲ್ಪಡುತ್ತ ಸ್ವರ್ಗದಿಂದ ಹೊರಟುಬರುತಿದ್ದನು. ಮೇಘಗಳೂ, ಅಪ್ಸರಸ್ಸುಗಳೂ, ವಿದ್ಯಾಧರರೂ ಗುಂಪುಕೂಡಿ ಅವನನ್ನು ಹಿಂಬಾಲಿಸಿದರು. ತಕ್ಷಕನಿಗೆ ಅಭಯುವನ್ನು ಕೊಟ್ಟಿದ್ದ ದೇವೇಂದ್ರನು ಆ ತಕ್ಷಕನನ್ನು ತನ್ನ ಉತ್ತರೀಯದಲ್ಲಿ ಕಟ್ಟಿ ಬಚ್ಚಿಟ್ಟುಕೊಂಡಿದ್ದರೂ ಮೂಟೆಯಲ್ಲಿದ್ದ ಆ ತಕ್ಷಕನು ಭಯದಿಂದ ಗಡಗಡನೆ ನಡುಗುತ್ತಿದ್ದನು. ತಕ್ಷಕನೊಡನೆ ತನಗೂ ಸಾವು ಸಿದ್ಧವೆಂದು ಇಂದ್ರನೂ ನಿಶ್ಚಯಿಸಿದ್ದನು. ಇಷ್ಟರಲ್ಲಿಯೇ ಇತ್ತಲಾಗಿ ಜನಮೇಜಯನಿಗೆ ತಕ್ಷಕನಮೇಲಿನ ಕೋಪವು ಮೇಲೆಮೇಲೆ ಹೆಚ್ಚಿತು. ಆಗ ಅವನು ಆ ಮಂತ್ರಪಾಠಕರನ್ನು ಕುರಿತು "ಆ ತಕ್ಷಕನು ಇಂದ್ರನ ಗೃಹದಲ್ಲಿರುವುದಾದರೆ ಆವನನ್ನು ಇಂದ್ರನೊಡನೆಯೇ ಬೆಂಕಿಯಲ್ಲಿ ಕೆಡಹಿರಿ" ಎಂದು ಆ ಹೋತೃವನ್ನು ಆತುರಗೊಳಿಸುತ್ತಿದ್ದನು. ಹೋತೃವು ಹೋಮವನ್ನು ಮಾಡಿದನು. ಈ ಹೋಮವನ್ನು ನಡೆಸಿದ ನಿಮಿಷ

ಮಾತ್ರದಲ್ಲಿಯೇ ದುಃಖಿತರಾದ ಇಂದ್ರತಕ್ಷಕರಿಬ್ಬರೂ ಯಾಗಶಾಲೆಗೆ ಮೇಲೆ ಆಕಾಶದಲ್ಲಿ ಕಾಣಿಸಿದರು. ಆ ಯಜ್ಞವನ್ನು ನೋಡಿ ಇಂದ್ರನ ಎದೆಯು ನಡುಗಿತು. ಒಡನೆಯೇ ಭಯದಿಂದ ಇಂದ್ರನು ತಾನು ಬಚ್ಚಿಟ್ಟುಕೊಂಡಿದ್ದ ತಕ್ಷಕನನ್ನು ಬಿಟ್ಟು ತನ್ನ ಗೃಹಕ್ಕೆ ಹಿಂತಿರುಗಿದನು. ಇಂದ್ರನು ಕೈಬಿಟ್ಟಮೇಲೆ, ತಕ್ಷಕನು ಮಂತ್ರಶಕ್ತಿಯಿಂದ ಸ್ವಾಧೀನತಪ್ಪಿ, ತಬ್ಬಿಬ್ಬಾಗಿ ಅಗ್ನಿಜ್ವಾಲೆಯ ಸಮೀಪಕ್ಕೆ ಬಂದು ಸೇರಿದನು. ಇದನ್ನು ನೋಡಿ ಋತ್ವಿಕ್ಕುಗಳು ಸಂತೋಷದಿಂದ “ರಾಜೇಂದ್ರಾ! ಅದೋ ನೋಡು. ನಿನ್ನ ವೈರಿಯು ವೇಗದಿಂದ ಬರುತ್ತಿರುವುದನ್ನು ನೋಡು. ಭಯಂಕರವಾಗಿ ಅರಚುತ್ತಿರುವ ಅವನ ಧ್ವನಿಯನ್ನು ಕೇಳು. ಇಂದ್ರನು ಅವನನ್ನು ಕೈಬಿಟ್ಟಿರಬೇಕು. ಆದುದರಿಂದ ಅವನೊಬ್ಬನೇ ಬರುತ್ತಿರಬೇಕು. ಆ ತಕ್ಷಕನು ಆಗಲೇ ಸ್ವರ್ಗವನ್ನು ಬಿಟ್ಟು ಮಂತ್ರಬಲದಿಂದ ಪ್ರಜ್ಞೆತಪ್ಪಿ, ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತ, ಭಯದಿಂದ ನಡುಗುತ್ತ, ಆಕಾಶದಿಂದ ಕೆಳಗಿಳಿಯುವುದನ್ನು ನೋಡು! ರಾಜಾ! ಈ ನಿನ್ನ ಯಜ್ಞವು ಯಾವ ಲೋಪವೂ ಇಲ್ಲದೆ ವಿಧ್ಯುಕ್ತವಾಗಿ ನಡೆದಿದೆಯೆಂಬುದಕ್ಕೆ ಇದೇ ಸಾಕ್ಷಿ! ಇನ್ನು ನೀನು ಆಗಂತುಕನಾದ ಬ್ರಾಹ್ಮಣನಿಗೆ ವರವನ್ನು ಕೊಡಬಹುದು” ಎಂದರು. ಒಡನೆಯೇ ಜನಮೇಜಯನು ಆಸ್ತಿಕನನ್ನು ನೋಡಿ “ಓ ಮಹಾತ್ಮಾ! ಬಾಲ್ಯದಲ್ಲಿಯೇ ಮಹಾವಿದ್ವಾಂಸನೆನಿಸಿದ ನಿನಗೆ ತಕ್ಕ ವರವನ್ನು ಕೊಡುವೆನು. ನಿನ್ನ ಇಷ್ಟವೇನೋ ಅದನ್ನು ತಿಳಿಸು. ಅದು ಕೊಡಬಾರದಾಗಿದ್ದುದಾದರೂ ಕೊಡುವೆನು” ಎಂದನು. ಇದೇ ಸಮಯವನ್ನು ನಿರೀಕ್ಷಿಸುತಿದ್ದ ಆಸ್ತೀಕನು ನಾಗರಾಜನಾದ ತಕ್ಷಕನು ಅಗ್ನಿಯಲ್ಲಿ ಬೀಳುವುದರೊಳಗಾಗಿ ರಾಜನನ್ನು ಕುರಿತು “ರಾಜೇಂದ್ರಾ! ನೀನು ನನಗೆ ವರವನ್ನು ಕೊಡುವುದಾದರೆ, ನಾನು ಕೇಳುವೆನು. ಈ ಯಾಗವನ್ನು ಇಷ್ಟಕ್ಕೇ ನಿಲ್ಲಿಸಿಬಿಡು. ಇನ್ನುಮೇಲೆ ಯಾವ ಸರ್ಪವೂ ಅಗ್ನಿಯಲ್ಲಿ ಬೀಳಬಾರದು” ಎಂದನು. ಇದನ್ನು ಕೇಳಿ ಜನಮೇಜಯನು ಮನಸ್ಸಿನಲ್ಲಿ ಅಷ್ಟಾಗಿ ಸಂತೋಷವಿಲ್ಲದೆ, ಆಸ್ತಿಕನನ್ನು ಕುರಿತು “ಓ ಬ್ರಾಹ್ಮಣೋತ್ತಮಾ! ಧನ ಕನಕಾದಿಗಳನ್ನಾಗಲಿ, ಪಶುಗಳನ್ನಾಗಲಿ, ಇನ್ನೂ ಬೇರೆ ನೀನು ಯಾವ ವಸ್ತುವನ್ನು ಕೇಳಿದರೂ, ನೀನು ಕೇಳಿದಷ್ಟನ್ನು

ನಾನು ಕೊಡಲು ಸಿದ್ಧನಾಗಿರುವೆನು. ಈ ಯಾಗವನ್ನು ಮಾತ್ರ ನಿಲ್ಲಿಸಲಾರೆನು" ಎಂದನು. ಅದಕ್ಕಾ ಆಸ್ತೀಕನು "ಮಹಾರಾಜಾ! ನನಗೆ ನಿನ್ನ ಬೆಳ್ಳಿಭಂಗಾರಗಳೊಂದೂ ಬೇಡ! ನಿನ್ನ ಗೋವುಗಳೂ ಬೇಡ! ಅವುಗಳಿಗಾಗಿ ನಾನು ನಿನ್ನಲ್ಲಿಗೆ ಬಂದವನಲ್ಲ. ಈ ನಿನ್ನ ಯಾಗವು ನಿಲ್ಲಬೇಕು. ನನ್ನ ಮಾತೃಕುಲಕ್ಕೆ ಇದು ಕ್ಷೇಮಕರವು" ಎಂದನು. ಅದಕ್ಕಾ ಜನಮೇಜಯನು "ಓ ಬ್ರಾಹ್ಮಣಾ! ಬೇರೆ ವರವನ್ನು ಕೇಳು. ಇದು ಬೇಡ. ನಿನಗೆ ಶುಭವಾಗಲಿ" ಎಂದನು. ಆದರೇನು? ಆಸ್ತೀಕನು ಬೇರೆ ಯಾವ ವರಕ್ಕೂ ಒಪ್ಪಲಿಲ್ಲ. ಆಗ ಅಲ್ಲಿದ್ದ ಸದಸ್ಯರೆಲ್ಲರೂ ಏಕವಾಕ್ಯದಿಂದ ರಾಜನನ್ನು ನೋಡಿ "ಮಹಾರಾಜಾ! ನೀನು ಕೊಟ್ಟ ಮಾತಿನಂತೆ ಈ ಬ್ರಾಹ್ಮಣನಿಗೆ ಅವನು ಕೇಳಿದ ವರವನ್ನು ಕೊಡಬೇಕಾದುದೇ ನ್ಯಾಯವು. ಕೊಟ್ಟುಬಿಡು" ಎಂದರು.

ಇದು ಐವತ್ತಾರನೆಯ ಅಧ್ಯಾಯವು.



 ಸರ್ಪಯಾಗದಲ್ಲಿ ದಗ್ಧರಾದ ನಾಗಗಳ ಹೆಸರು. 

ಆಮೇಲೆ ಶೌನಕನು "ಸೂತಪುತ್ರಾ! ಆ ಸರ್ಪಯಾಗದಲ್ಲಿ ಅಗ್ನಿಯಲ್ಲಿ ಉರಿದುಹೋದ ಎಲ್ಲಾ ಸರ್ಪಗಳ ಹೆಸರನ್ನೂ ಕೇಳಬೇಕೆಂದಿರುವೆನು. ಅದನ್ನು ತಿಳಿಸು" ಎನಲು, ಸೂತಪುತ್ರನು "ಮುನೀಂದ್ರಾ! ಆಗ ಅಗ್ನಿಯಲ್ಲಿ ಬಿದ್ದ ಸರ್ಪಗಳ ಸಂಖ್ಯೆಗೆ ಪಾರವೇ ಇಲ್ಲ. ಸಾವಿರ, ಲಕ್ಷ, ಕೋಟಿ, ದಶಕೋಟಿಗಳಂತೆ ಗುಂಪುಗುಂಪಾಗಿ ಬಂದುಬಿದ್ದುವು. ನನಗೆ ನೆನಪಿದ್ದಮಟ್ಟಿಗೆ ಆ ಯಾಗಾಗ್ನಿಯಲ್ಲಿ ಬೆಂದುಹೋದ ಕೆಲವು ಪ್ರಧಾನಸರ್ಪಗಳ ಹೆಸರನ್ನು ಮಾತ್ರ ತಿಳಿಸುವೆನು ಕೇಳು. ಅವುಗಳಲ್ಲಿ ವಾಸುಕಿಯ ವಂಶದಲ್ಲಿ ಹುಟ್ಟಿದುವು ಕೆಲವು. ಅವೆಲ್ಲವೂ ಅತಿಭಯಂಕರಾಕಾರವುಳ್ಳವುಗಳೂ, ಮತ್ತು ತೀವ್ರವಿಷವುಳ್ಳವುಗಳೂ ಆಗಿದ್ದುವು. ಮತ್ತು ಕಪ್ಪು ಬಿಳುಪು, ಕೆಂಪು, ಮುಂತಾದ ನಾನಾವರ್ಣಗಳಲ್ಲಿದ್ದುವು. ಆ ವಾಸುಕಿವಂಶದಲ್ಲಿ ಮಾತೃಶಾಪಕ್ಕೆ ಗುರಿಯಾಗಿ ಅಗ್ನಿಯಲ್ಲಿ ಬಿದ್ದವುಗಳಲ್ಲಿ ಮುಖ್ಯವಾದ

ಕೆಲವರ ಹೆಸರನ್ನು ತಿಳಿಸುವೆನು. ಕೋಟಿಶ, ಮಾನಸ, ಪೂರ್ಣ, ಶಲ, ಪಾಲ, ಹಲೀಮಕ, ಪಿಚ್ಚಲ, ಕೌಣಪ, ಚಕ್ರ, ಕಾಲವೇಗ, ಪ್ರಕಾಲ, ಹಿರಣ್ಯವಾಹ, ಶರಣ, ತಕ್ಷ, ಕಾಲದಂತರೆಂಬೀ ಪ್ರಧಾನನಾಗಗಳಲ್ಲದೆ, ಅದೇ ವಾಸುಕಿಕುಲದಲ್ಲಿ ಜನಿಸಿ, ಮಹಾಬಲವೀರ್ಯವುಳ್ಳ ಇನ್ನೂ ಎಷ್ಟೋ ಸರ್ಪಗಳು ನಾಶವಾದುವು. ಆಮೇಲೆ ತಕ್ಷಕಕುಲದಲ್ಲಿ ಹುಟ್ಟಿದ ಕೆಲವು ಪ್ರಧಾನ ಸರ್ಪಗಳಾವುವೆಂದರೆ, ಪುಚ್ಛಾಂಡ, ಮಂಡಲಕ, ಪಿಂಡಸೇಕ್ತ್ರ, ರಭೇಣಕ, ಉಚ್ಛಿಕ, ಶರಭ, ಭಂಗ, ಬಿಲ್ವತೇಜ, ವಿರೋಹಣ, ಶಿಲಿ, ಶಲಕರ, ಮೂಕ, ಸುಕುಮಾರ, ಪ್ರವೇಪನ, ಮುದ್ಗರ, ಶಿಶುರೋಮ, ಸುರೋಮ, ಮಹಾಗಜ, ಇವು ಮೊದಲಾಗಿ ಇನ್ನೂ ಎಷ್ಟೋ ಸರ್ಪಗಳು ದಗ್ಧವಾಗಿ ಹೋದುವು. ಐರಾವತವೆಂಬ ಸರ್ಪಕುಲದಲ್ಲಿ ಹುಟ್ಟಿದ ಪಾರಾವತ, ಪಾರಿಯಾತ್ರ, ಪಾಂಡರ, ಹರಿಣ, ಕೃಶ, ವಿಹಂಗ, ಶರಭ, ಮೋದ, ಪ್ರಮೋದ, ಸಂಹತಾಪನ ಎಂಬೀ ಪ್ರಧಾನ ನಾಗಗಳೆಲ್ಲ ಅಗ್ನಿಯಲ್ಲಿ ಭಸ್ಮವಾದುವು.

ಕೌರವ್ಯವೆಂಬ ನಾಗಕುಲದ ಏರಕ, ಕುಂಡಲ, ವೇಣಿ, ವೇಣೀಸ್ಕಂಧ, ಕುಮರಕ, ಬಾಹುಕ, ಶೃಂಗಬೇರ, ಧೂರ್ತಕ, ಪ್ರಾತರಾತಕರೆಂಬೀ ಮಹಾಸರ್ಪಗಳೆಲ್ಲ ಬೆಂದುಹೋದುವು. ಧೃತರಾಷ್ಟ್ರ ನಾಗಕುಲದಲ್ಲಿ ಹುಟ್ಟಿ, ಕ್ರೂರವಿಷದಿಂದಲೂ, ವಾಯುವೇಗದಿಂದಲೂ ಕೂಡಿದ ಎಷ್ಟೋ ಸರ್ಪಗಳು ಆ ಅಗ್ನಿಯಲ್ಲಿ ಸತ್ತುವು. ಅವುಗಳಲ್ಲಿ ಶಂಕುಕರ್ಣ, ಪಿಠರಕ, ಕುಠಾರಮುಖ, ಸೇಚಕ, ಪೂರ್ಣಾಂಗದ, ಪೂರ್ಣಮುಖ, ಪ್ರಹಾಸ, ಶಕುನಿ, ದರಿ, ಅಮಾಹಠ, ಕಾಮಠಕ, ಸುಷೇಣ, ಮಾನಸ, ಅವ್ಯಯ, ಅಷ್ಟಾವಕ್ರ, ಕೋಮಲಕ, ಶ್ವಸನ, ಮೌನವೇಪಗ, ಭೈರವ, ಮುಂಡವೇದಾಂಗ, ಪಿಶಂಗ, ಉದಪಾರಕ, ಋಷಭ, ವೇಗವಂತ, ಪಿಂಡಾರಕ, ಮಹಾಹನು, ರಕ್ತಾಂಗ, ಸರ್ವಸಾರಂಗ, ಸಮೃದ್ಧ, ಪಟವಾಸಕ, ವರಾಹಕ, ಮಣಿಸ್ಕಂಧ, ಅರುಣಿ ಇವರೆಲ್ಲರೂ ಆ ವಂಶದಲ್ಲಿ ಪ್ರಧಾನರು. ಹೀಗೆ ಆಯಾ ವಂಶದಲ್ಲಿ ಪ್ರಮುಖರಾದ ಕೆಲವರ ಹೆಸರನ್ನು ಮಾತ್ರ ನಾನು ನಿಮಗೆ ತಿಳಿಸಿದೆನು. ಇವಲ್ಲದೆ ಆಗ ಜನಮೇಜಯನ ಯಾಗಾಗ್ನಿಯಲ್ಲಿ ದಗ್ಧರಾದ ನಾಗರ ಸಂಖ್ಯೆಯು ಅಪರಿಮಿತವಾದುದರಿಂದ ಅವನ್ನೆಲ್ಲ ಹೇಳುವುದು

ಸಾಧ್ಯವೇ ಅಲ್ಲ. ಆ ಸರ್ಪಗಳಲ್ಲಿ ಎರಡುತಲೆ, ಐದುತಲೆ, ಏಳುತಲೆ, ಹತ್ತುತಲೆ, ನೂರುತಲೆ, ಮತ್ತು ಎಣಿಸುವುದಕ್ಕೇ ಸಾಧ್ಯವಿಲ್ಲದಷ್ಟು ತಲೆಗಳುಳ್ಳ ನಾನಾಜಾತಿಯ ಸರ್ಪಗಳಿದ್ದುವು ಮತ್ತು ಪ್ರಳಯಕಾಲಾಗ್ನಿಯಂತೆ ಕ್ರೂರವಿಷವುಳ್ಳ ಎಷ್ಟೋ ಭಯಂಕರಸರ್ಪಗಳು ಆಹುತಿಯಾಗಿ ಹೋದುವು. ಮತ್ತು ಆಗ ಪರ್ವತದಂತೆ ಮಹಾಕಾಯವುಳ್ಳವುಗಳೂ, *ಒಂದೆರಡು ಯೋಜನದುದ್ದವಾದ ದೇಹವುಳ್ಳವುಗಳೂ, ಕಾಮರೂಪವೂ, ಕಾಮವೀರ್ಯವುಳ್ಳವುಗಳೂ ಆದ ಅನೇಕಾನೇಕನಾಗಗಳು ಉರಿಯುವ ಯಾಗಾಗ್ನಿಯಲ್ಲಿ ಬಿದ್ದು ಸತ್ತುವು. ಹೀಗೆ ಮಾತೃಶಾಪದಿಂದಲೂ, ಮಂತ್ರಶಕ್ತಿಯಿಂದಲೂ ಆಕರ್ಷಿಸಲ್ಪಟ್ಟ ಎಷ್ಟೋ ಸರ್ಪಕುಟುಂಬಗಳು ಆ ಯಾಗಾಗ್ನಿಗೆ ಆಹುತಿಯಾದುವು.

ಇದು ಐವತ್ತೇಳನೆಯ ಅಧ್ಯಾಯವು.



{ ಜನಮೇಜಯನು ಆಸ್ತೀಕನ ಕೋರಿಕೆಯಂತೆ ಯಜ್ಞವನ್ನು ನಿಲ್ಲಿಸಿದುದು. ಆಸ್ತೀಕನಿಗೆ ಸರ್ಪಗಳು ವರವನ್ನು ಕೊಟ್ಟುದು. }

ಓ ಶೌನಕಾ! ಆಸ್ತೀಕನಲ್ಲಿ ಮಹಾಶ್ಚರ್ಯಕರವಾದ ಮತ್ತೊಂದು ಪ್ರಭಾವವನ್ನು ನಾವು ಕೇಳಿರುವೆವು. ಏನೆಂದರೆ, ಜನಮೇಜಯನು ಆಸ್ತೀಕನಿಗೆ ವರವನ್ನು ಕೊಡುವುದಾಗಿ ವಾಗ್ದಾನಮಾಡಿದುದು ಮೊದಲು, ಇಂದ್ರನು ತನ್ನನ್ನು ಕೈಬಿಟ್ಟು ತಾನು ಇಂದ್ರವಿಮಾನದಿಂದ ಜಾರಿಬಿದ್ದರೂ ತಕ್ಷಕನು ಅಗ್ನಿಯಲ್ಲಿ ಬೀಳದೆ ಆಕಾಶದಲ್ಲಿಯೇ ನಿಂತಿದ್ದನು. ಆಗ ಜನಮೇಜಯನು ಚಿಂತಾಪರನಾಗಿ "ಆಹಾ! ಏನಿದು? ಶಾಸ್ತ್ರಕ್ರಮವಾಗಿ ನಾವು ಮಂತ್ರವನ್ನು ಹೇಳಿ ಹೋಮಮಾಡಿ ಕರೆದಿದ್ದರೂ, ಅಗ್ನಿಯೂ ಜಾಜ್ವಲ್ಯಮಾನವಾಗಿ ಉರಿಯುತ್ತಿದ್ದರೂ ತಕ್ಷಕನು ಅಗ್ನಿಯಲ್ಲಿ ಬೀಳದೆ,

* ಸರ್ಪಗಳು ಒಂದೆರಡು ಯೋಜನದುದ್ದವಿದ್ದರೂ ಮಂತ್ರಸಾಮರ್ಥ್ಯದಿಂದ ಅಗ್ನಿಯಲ್ಲಿ ಬೀಳುವಾಗ, ಅಗಸ್ತ್ಯನ ಕೈಯಲ್ಲಿ ಅಡಗಿದ ಸಮುದ್ರದಂತೆ ಅಗ್ನಿಕುಂಡದಲ್ಲಿ ಬೀಳುವುದಕ್ಕೆ ತಕ್ಕಷ್ಟು ಚಿಕ್ಕವಾಯಿತೆಂದು ಗ್ರಾಹ್ಯವು.

ಆಕಾಶದಲ್ಲಿಯೇ ಭಯದಿಂದ ನಡುಗುತ್ತ ನಿಂತಿರಲು ಕಾರಣವೇನು? ಇದಲ್ಲವೇ ಆಶ್ಚರ್ಯವು" ಎಂದು ತನ್ನಲ್ಲಿ ತಾನು ಚಿಂತಿಸುತಿದ್ದನು" ಎಂದನು.

ಈ ನಡುವೆ ಶೌನಕನು ಸೂತನನ್ನು ಕುರಿತು "ಸೂತಪುತ್ರಾ! ಜನಮೇಜಯನು ಆಶ್ಚರ್ಯಪಟ್ಟುದು ನ್ಯಾಯವೇ. ಆ ತಕ್ಷಕನು ಅಗ್ನಿಯಲ್ಲಿ ಬೀಳದಿದ್ದುದೇಕೆ? ಬುದ್ಧಿವಂತರಾದ ಬ್ರಾಹ್ಮಣರಿಗೂ ಸರಿಯಾದ ಮಂತ್ರವೇ ಆಗ ಬುದ್ಧಿಗೆ ತೋರದೆ ಹೋಯಿತೋ" ಎಂದನು. ಅದಕ್ಕಾ ಸೂತನು "ಮುನೀಂದ್ರಾ! ಹಾಗಲ್ಲ. ಇಂದ್ರನಿಂದ ಕೈಬಿಡಲ್ಪಟ್ಟು ಅವನ ಕೈಯಿಂದ ಜಾರಿಬಿದ್ದ ತಕ್ಷಕನಿಗೆ ಆಗಲೇ ಭಯದಿಂದ ಪ್ರಜ್ಞೆತಪ್ಪಿ ಹೋಯಿತು. ಅವನು ಆಕಾಶದಿಂದ ಅಗ್ನಿಯಲ್ಲಿ ಬೀಳುವಷ್ಟರಲ್ಲಿ ಆಸ್ತೀಕನು ಅವನ ಸ್ಥಿತಿಯನ್ನು ನೋಡಿ "ನಿಲ್ಲು! ನಿಲ್ಲು" ಎಂದು ಮೂರುಸಾರಿ ಮಾತ್ರ ಉಚ್ಚರಿಸಿದನು. ಮಂತ್ರಶಕ್ತಿಗಿಂತಲೂ ಪ್ರಬಲವಾದ ಶಕ್ತಿಯುಳ್ಳ ಈ ಶಬ್ದಗಳು ಆಸ್ತೀಕನ ಬಾಯಿಂದ ಹೊರಟೊಡನೆ ಭೂವ್ಯಾಕಾಶಗಳ ನಡುವೆ ಒಬ್ಬ ಮನುಷ್ಯನು ನಿಂತಂತೆ ಆ ತಕ್ಷಕನು ಅಲ್ಲಿಯೇ ನಿಂತುಹೋದನು. ಅದು ಹಾಗಿರಲು, ಇತ್ತಲಾಗಿ ಆಸ್ತೀಕನ ಪ್ರಾರ್ಥನೆಗೂ, ಸದಸ್ಯರ ಪ್ರೇರಣೆಗೂ ಬದ್ಧನಾಗಿ ಜನಮೇಜಯನು "ಎಲೈ ಋತ್ವಿಕ್ಕುಗಳೇ! ಈ ಬ್ರಾಹ್ಮಣನ ಕೋರಿಕೆಯಂತೆಯೇ ನಡೆಯಲಿ. ಈ ಕರ್ಮವನ್ನು ಇಷ್ಟಕ್ಕೇ ನಿಲ್ಲಿಸಿರಿ. ಸರ್ಪಗಳೆಲ್ಲ ಬದುಕಿಕೊಳ್ಳಲಿ. ಆಸ್ತೀಕನೂ ಸಂತೋಷದಿಂದ ಹೋಗಲಿ. ಲೋಹಿತಾಕ್ಷನೆಂಬ ಸೂತನ ಮಾತು ಸತ್ಯವಾಗಲಿ" ಎಂದನು. ರಾಜನು ಆಸ್ತೀಕನಿಗೆ ಈ ವರವನ್ನು ಕೊಟ್ಟೊಡನೆ ಆ ಮಹಾಸಭೆಯಲ್ಲಿ ದೊಡ್ಡ ಸಂತೋಷಕೋಲಾಹಲವುಂಟಾಯಿತು. ಆ ಯಾಗವೂ ಅಷ್ಟರಲ್ಲಿಯೇ ನಿಂತುಹೋಯಿತು. ಋತ್ವಿಕ್ಕುಗಳು ಸದಸ್ಯರು ಮೊದಲಾಗಿ ಅಲ್ಲಿಗೆ ಬಂದಿದ್ದವರೆಲ್ಲರಿಗೂ ಜನಮೇಜಯನು ಅನೇಕ ಸಹಸ್ರಸಂಖ್ಯೆಯಿಂದ ಧನಕನಕಾದಿಗಳನ್ನು ಕೊಟ್ಟನು. ಅಲ್ಲದೆ ಆಗ ರಾಜನು ಈ ಭಾವಿ ಸಂಗತಿಯನ್ನು ಮೊದಲೇ ತಿಳಿಸಿದ ಲೋಹಿತಾಕ್ಷನೆಂಬ ಸೂತನಿಗೂ ಅದಕ್ಕೆ ಮೊದಲೇ ಈ ಸಂಗತಿಯನ್ನು ಸೂಚಿಸಿದ್ದ ಸ್ಥಪತಿಗೂ (ಯಜ್ಞಶಾಲೆಯನ್ನು ನಿರ್ಮಿಸಿದ

ಶಿಲ್ಪಿಗೂ) ವಿಶೇಷಧನವನ್ನು ಕೊಟ್ಟನು. ಅಲ್ಲದೆ ಶಿಲ್ಪಿಯ ಕಲಾನೈಪುಣ್ಯಕ್ಕೆ ಸಂತೋಷಿಸಿ ಅವನನ್ನು ಭೋಜನವಸ್ತ್ರಾದಿಗಳಿಂದ ವಿಶೇಷವಾಗಿ ಸಂತೋಷಪಡಿಸಿದನು. ಆಮೇಲೆ ಶಾಸ್ತ್ರೋಕ್ತವಾಗಿ ರಾಜನಿಗೆ ಅವಭೃಥಸ್ನಾನವು ನಡೆಯಿತು. ರಾಜನೂ ತೃಪ್ತನಾದನು. ಅತ್ತಲಾಗಿ ತಾನು ಬಂದ ಉದ್ದೇಶವು ಕೈಗೂಡಿದುದಕ್ಕಾಗಿ ಅತ್ಯಂತ ತೃಪ್ತನಾಗಿದ್ದ ಆಸ್ತೀಕನನ್ನು ನೋಡಿ “ಬ್ರಾಹ್ಮಣೋತ್ತಮಾ! ಇನ್ನು ನೀನು ಹೋಗಿಬರಬಹುದು. ಆದರೆ ನಾನು ಶೀಘ್ರದಲ್ಲಿಯೇ ಒಂದು ಅಶ್ವಮೇಧ ಮಹಾಯಾಗವನ್ನು ಮಾಡುವೆನು. ಅದಕ್ಕಾಗಿ ನೀನು ತಿರುಗಿ ಇಲ್ಲಿಗೆ ಬಂದು ಆ ಯಾಗದಲ್ಲಿ ಸದಸ್ಯನಾಗಿರಬೇಕು” ಎಂದು ಪ್ರಾರ್ಥಿಸಿ, ಅವನನ್ನು ಬಹಳವಾಗಿ ಸನ್ಮಾನಿಸಿದನು. ಆಸ್ತೀಕನು ಅದಕ್ಕೆ ಸಮ್ಮತಿಸಿ ಅಲ್ಲಿಂದ ಹಿಂತಿರುಗಿದನು. ಅವನು ಅಲ್ಲಿಂದ ಹೊರಟೊಡನೆ ತನ್ನ ತಾಯಿಗೂ, ಸೋದರಮಾವನಿಗೂ ನಮಸ್ಕರಿಸಿ ನಡೆದ ಸಂಗತಿಯನ್ನೆಲ್ಲ ಅವರಿಗೆ ತಿಳಿಸಿದನು. ಆಗ ನಾಗಲೋಕಕ್ಕೆಲ್ಲ ಅಪಾರಸಂತೋಷವಾಯಿತು. ಎಲ್ಲರೂ ಆಸ್ತೀಕನ ಮುಂದೆ ಗುಂಪಾಗಿ ಸೇರಿ “ಮಹಾಭಾಗಾ! ನಿನಗೆ ನಮ್ಮಿಂದಾಗಬೇಕಾದ ಪ್ರಿಯವೇನಿದ್ದರೂ ಹೇಳು. ನಿನ್ನಿಂದ ನಾವು ಶಾಪವಿಮುಕ್ತರಾಗಿ ಬದುಕಿಕೊಂಡೆವು. ನಿನಗೆ ಇಷ್ಟವಾದ ವರಗಳನ್ನು ಕೇಳಬಹುದು” ಎಂದರು.

ಅದಕ್ಕಾ ಆಸ್ತೀಕನು “ಎಲೈ ನಾಗಶ್ರೇಷ್ಠರೇ! ನನಗೆ ಬೇರೆ ವರವೇನೂ ಬೇಕಾದುದಿಲ್ಲ. ಮನುಷ್ಯಲೋಕದಲ್ಲಿ ಬ್ರಾಹ್ಮಣನಾಗಲಿ, ಇತರ ವರ್ಣದವರಾಗಲಿ ಈ ಧರ್ಮಚರಿತ್ರವನ್ನು ಶ್ರದ್ಧೆಯಿಂದ ಬೆಳಗ್ಗೆ ಸಾಯಂಕಾಲಗಳಲ್ಲಿ ಯಾವನು ಪಠಿಸಿದರೂ, ಅವರಿಗೆ ಯಾವ ಸರ್ಪಗಳಿಂದಲೂ ಭಯವಿಲ್ಲದಿರಲಿ” ಎಂದನು. ಇದನ್ನು ಕೇಳಿ ನಾಗರೆಲ್ಲರೂ ಸಂತುಷ್ಟರಾಗಿ ಅವನನ್ನು ಕುರಿತು “ನೀನು ಕೇಳಿದ ಈ ವರವು ಸತ್ಯವಾಗಲಿ. ನಾವು ಪ್ರೀತಿಪೂರ್ವಕವಾಗಿ ನಿನ್ನ ಕೋರಿಕೆಯನ್ನು ನಡೆಸುವೆವು. ಅಸಿತನನ್ನೂ, ಆರ್ತಿಮಂತನನ್ನೂ, ಸುನೀಥನನ್ನೂ ಯಾವನು ಸ್ಮರಿಸುವನೋ ಅವನಿಗೆ ಹಗಲಲ್ಲಿಯಾಗಲಿ, ರಾತ್ರಿಯಲ್ಲಿಯಾಗಲಿ ಸರ್ಪಭಯವಿಲ್ಲದಿರಲಿ! ಓ ಬ್ರಾಹ್ಮಣೋತ್ತಮಾ! ಸರ್ಪಭಯವಿದ್ದಕಡೆಗಳಲ್ಲಿ ಯಾವ ಮನು

ಷ್ಯನು ಸರ್ಪಗಳನ್ನುದ್ದೇಶಿಸಿ "ಮಹಾಮಹಿಮೆಯುಳ್ಳ ಓ ಸರ್ಪಗಳೇ! ನನ್ನನ್ನು ನೀವು ಹಿಂಸಿಸಬಾರದು. ಜರತ್ಕಾರು ಮುನಿಯಿಂದ ಜರತ್ಕಾರು ವೆಂಬವಳಲ್ಲಿ ಜನಿಸಿ ಮಹಾತಪಸ್ವಿಯಾದ ಯಾವ ವಿಪ್ರೋತ್ತಮನು ನಿಮ್ಮನ್ನೆಲ್ಲ ಸರ್ಪಯಾಗದಿಂದ ಕಾಪಾಡಿದನೋ ಆ ಆಸ್ತಿಕನನ್ನು ನಾನು ಹೃದಯದಲ್ಲಿ ಇಟ್ಟಿರುವೆನು. ನೀವು ಬಿಟ್ಟುಹೋಗಿರಿ. ನಿಮಗೆ ಮಂಗಳವಾಗಲಿ. ಮಹಾವಿಷವುಳ್ಳ ಓ ಸರ್ಪಗಳೇ! ದೂರಸಾಗಿರಿ. ಜನಮೇಜಯನ ಯಾಗಾಂತದಲ್ಲಿ ಆಸ್ತೀಕನು ಹೇಳಿದ ಮಾತನ್ನು ನೆನಸಿಕೊಳ್ಳಿರಿ" ಎಂದು ನಿನ್ನನ್ನು ಕುರಿತ ಈ ಮಂತ್ರಗಳನ್ನು ಕೇಳಿದೊಡನೆ ಯಾವ ಸರ್ಪವು ಅಲ್ಲಿಂದ ಬಿಟ್ಟುಹೋಗುವುದಿಲ್ಲವೋ ಆ ಸರ್ಪದ ತಲೆಯು ಶಿಂಶವೃಕ್ಷದ ಫಲದಂತೆ ಶತಭಾಗವಾಗಿ ಭೇದಿಸಿಹೋಗಲಿ" ಎಂದನು.

ಮುನೀಂದ್ರಾ! ಈ ಮಾತನ್ನು ಕೇಳಿ ಆಸ್ತೀಕನಿಗೆ ಅತ್ಯಂತ ಸಂತೋಷವಾಯಿತು. ನಾಗರಾಜನಾದ ವಾಸುಕಿಯೂ ಅದನ್ನನುಮೋದಿಸಿ ಸರ್ಪಗಳೊಡನೆ ಹಿಂತಿರುಗಿ ಹೋದನು. ಆಸ್ತಿಕನೂ ಹಿಂತಿರುಗಿದನು. ಧರ್ಮಾತ್ಮನಾದ ಆ ಬ್ರಾಹ್ಮಣೋತ್ತಮನು ಹೀಗೆ ಸರ್ಪಗಳನ್ನು ಅಪಾಯದಿಂದ ತಪ್ಪಿಸಿದ ಮಹಾಯಶಸ್ಸಿಗೆ ಭಾಗಿಯಾಗಿ, ಬಹುಕಾಲದವರೆಗೆ ಬದುಕಿದ್ದು, ಪುತ್ರಪೌತ್ರಾದಿಗಳನ್ನೆಲ್ಲ ಪಡೆದು ಕಾಲಧರ್ಮವನ್ನು ಹೊಂದಿದನು. ಎಲೈ ಮಹರ್ಷಿಗಳಿರಾ! ಈ ಆಸ್ತೀಕಚರಿತ್ರವನ್ನು ನಿಮಗೆ ಯಥಾಸ್ಥಿತವಾಗಿ ಹೇಳಿದೆನು. ಈ ಚರಿತ್ರವನ್ನೋದಿದಕಡೆಯಲ್ಲಿ ಸರ್ಪಭಯವಿರದು. ಶೌನಕಮುನೀಂದ್ರಾ! ಈ ಚರಿತ್ರವನ್ನು ನಿನ್ನ ಕೂಟಸ್ಥನಾದ ಪ್ರಮತಿಯು ರುರುವಿಗೆ ಹೇಳಿದಾಗ ನಾನೂ ಅದನ್ನು ಕೇಳುತಿದ್ದೆನು. ಅದನ್ನು ಹಾಗೆಯೇ ನಿಮಗೂ ಹೇಳಿರುವೆನು. ಡುಂಡುಭವು ಹೇಳಿದುದಾಗಿ ನಾನು ತಿಳಿಸಿದಾಗ, ನೀವು ನನ್ನನ್ನು ಪ್ರಶ್ನೆಮಾಡಿದ ಕಥೆಯು ಇದೇ! ಧರ್ಮಿಷ್ಠವೂ, ಪುಣ್ಯವರ್ಧಕವೂ ಆದ ಈ ಆಸ್ತೀಕಚರಿತ್ರವನ್ನು ಕೇಳಿದವನು ಪಾಪವಿಮುಕ್ತನಾಗಿ ದೀರ್ಘಾಯುಷ್ಯವನ್ನು ಹೊಂದುವನು"

ಇದು ಐವತ್ತೆಂಟನೆಯ ಅಧ್ಯಾಯವು.

**ಇಲ್ಲಿಗೆ ಆಸ್ತೀಕಪರ್ವವು ಮುಗಿದುದು.**

# ಅಂಶಾವತರಣಪರ್ವವು.

---

(ಸರ್ಪಯಾಗದಲ್ಲಿ ವೈಶಂಪಾಯನು ಜನಮೇಜಯನಿಗೆ ಹೇಳಿದ ಕ್ರಮದಲ್ಲಿಯೇ ತಮಗೆ ಮಹಾಭಾರತಕಥೆಯನ್ನು ವಿವರವಾಗಿ ತಿಳಿಸಬೇಕೆಂದು ಶೌನಕಾದಿಗಳು ಸೂತನನ್ನು ಕೇಳಿದುದು.)

ಶೌನಕಮುನಿಯು ಸೂತನನ್ನು ಕುರಿತು “ ಓ ಸೂತಪುತ್ರಾ! ಭೃಗುವಂಶದ ಮಹತ್ತಾದ ಚರಿತ್ರವನ್ನೆಲ್ಲ ನಿನ್ನಿಂದ ಕೇಳಿ ನಮಗೆ ಅತ್ಯಂತ ಸಂತೋಷವಾಯಿತು. ಇನ್ನೂ ನಾವು ಕೇಳಿ ತಿಳಿಯಬೇಕೆಂದಿರುವ ಅನೇಕ ವಿಷಯಗಳುಂಟು. ವ್ಯಾಸಮುನಿಯಿಂದ ಉಕ್ತವಾದ ಕಥೆಗಳನ್ನೆಲ್ಲ ನೀನು ನಮಗೆ ತಿಳಿಸಬೇಕು. ಜನಮೇಜಯರಾಜನು ದುಸ್ಸಾಧ್ಯವಾದ ಆ ಸರ್ಪಯಾಗವನ್ನು ನಡೆಸುವಾಗ, ಅಲ್ಲಿ ಸೇರಿದ್ದ ಮಹಾತ್ಮರಾದ ಸದಸ್ಯರು, ಯಾಗಕರ್ಮಗಳ ನಡುವೆ ಅವಕಾಶವಿದ್ದಾಗ ಯಾವಯಾವ ವಿಷಯಗಳನ್ನು ಕುರಿತು, ಹೇಗೆಹೇಗೆ ಸಂಭಾಷಣಗಳನ್ನು ನಡೆಸಿದರೋ, ಅವನ್ನೆಲ್ಲ ನೀನು ನಮಗೆ ಯಥಾವತ್ತಾಗಿ ತಿಳಿಸಬೇಕು” ಎಂದರು. ಅದಕ್ಕಾ ಸೂತನು “ ಓ ಶೌನಕಾದಿಗಳೇ! ಆ ಯಾಗಮಧ್ಯದಲ್ಲಿ ಅವಕಾಶವಿದ್ದಾಗಲೆಲ್ಲ ಅಲ್ಲಿ ನೆರೆದಿದ್ದ ಬ್ರಾಹ್ಮಣರೆಲ್ಲರೂ ಸೇರಿ ವೇದಾಂತವಿಚಾರವಾದ ಪ್ರಸಂಗಗಳನ್ನು ನಡೆಸುತ್ತಿದ್ದರು. ವ್ಯಾಸಮಹರ್ಷಿಯುಮಾತ್ರ ವಿಚಿತ್ರವಾದ ಮಹಾಭಾರತವೆಂಬ ಮಹಾಚರಿತ್ರವನ್ನು ಪ್ರಸಂಗಿಸುತಿದ್ದನು” ಎಂದನು. ಆಗ ಶೌನಕನು “ ಓ ಸೂತಪುತ್ರಾ! ಆ ಚರಿತ್ರವನ್ನೇ ನಾವು ಕೇಳಬೇಕೆಂದು ಆಸೆಪಡುವೆವು. ಆ ಸರ್ಪಯಾಗಕಾಲದಲ್ಲಿ ಯಾಗಕರ್ಮಗಳೇನೂ ನಡೆಯದಿದ್ದ ಅವಕಾಶದಲ್ಲಿ, ಜನಮೇಜಯನ ಪ್ರಾರ್ಥನೆಯಮೇಲೆ ಶ್ರೀಕೃಷ್ಣದ್ವೈಪಾಯನನು (ವ್ಯಾಸನು) ಪಾಂಡವರ ಕೀರ್ತಿಯನ್ನು ಪ್ರಕಾಶಗೊಳಿಸತಕ್ಕ ಯಾವ ಪುಣ್ಯಕಥೆಯನ್ನು ಹೇಳಿದನೋ, ಅದನ್ನೇ ನೀನು ನಮಗೆ ಹೇಳಬೇಕು. ಯೋಗಬಲದಿಂದ ಆತ್ಮಜ್ಞಾನವನ್ನು ಪಡೆದ ಆ ವ್ಯಾಸಮಹರ್ಷಿಯ ಬುದ್ಧಿಯು ಮಹಾಸಮುದ್ರದಂತೆ ಅನಂತವಾದುದು. ಅದರಲ್ಲಿ ಹು

ಟ್ಟಿದ ಮಹಾರತ್ನಗಳಂತಿರುವ ನೀತಿ ಧರ್ಮ ಕಥಾವಿಷಯಗಳನ್ನೆಲ್ಲ ನಮಗೆ ಯುಕ್ತರೀತಿಯಾಗಿ ವಿವರಿಸಿ ಹೇಳು" ಎಂದನು.

ಆಗ ಸೂತನು "ಓ ಮಹರ್ಷಿಗಳಿರಾ! ನಿಮ್ಮ ಇಷ್ಟದಂತೆಯೇ ವ್ಯಾಸಪ್ರೋಕ್ತವಾದ ಆ ಮಹಾಭಾರತವೆಂಬ ಇತಿಹಾಸವನ್ನೆಲ್ಲ ಆಮೂಲಾಗ್ರವಾಗಿ ನಿಮಗೆ ತಿಳಿಸುವೆನು ಕೇಳಿರಿ. ಆ ಕಥೆಯನ್ನು ಹೇಳುವುದರಲ್ಲಿ ನನಗೂ ಮಹೋತ್ಸಾಹವು ಹುಟ್ಟಿದೆ" ಎಂದು ಆ ಕಥೆಯನ್ನು ಹೇಳತೊಡಗಿದನು.

ಇದು ಐವತ್ತೊಂಭತ್ತನೆಯ ಅಧ್ಯಾಯವು.

(ಸರ್ಪಸತ್ರಕ್ಕೆ ಬಂದ ವ್ಯಾಸಮುನಿಯು ಜನಮೇಜಯನಿಗೆ ಭಾರತ ಕಥೆಯನ್ನು ಹೇಳುವಂತೆ ವೈಶಂಪಾಯನನಿಗೆ ನಿಯಮಿಸಿದುದು.)

ಓ ಮಹರ್ಷೀ! ವ್ಯಾಸಮಹರ್ಷಿಯ ತಾಯಿಗೆ ಸತ್ಯವತಿಯೆಂದು ಹೆಸರು. ಅವಳನ್ನು ಕಾಳಿಯೆಂದೂ ಕರೆಯುವುದುಂಟು. ಆ ಸತ್ಯವತಿಯು ಕನ್ಯೆಯಾಗಿದ್ದಾಗಲೇ ಅವಳಲ್ಲಿ ಶಕ್ತಿಮುನಿಕುಮಾರನಾದ ಪರಾಶರನಿಗೆ, ಪಾಂಡವರ ಪಿತಾಮಹನೂ, ಮಹಾವಿದ್ವಾಂಸನೂ ಆದ ಕೃಷ್ಣದ್ವೈಪಾಯನನೆಂಬ ವ್ಯಾಸಮುನಿಯು, ಯಮುನಾನದೀ ದ್ವೀಪದಲ್ಲಿ ಜನಿಸಿದನು. ಆ ವ್ಯಾಸಮುನಿಯು ಹುಟ್ಟಿದೊಡನೆ, ಇಚ್ಛಾಮಾತ್ರದಿಂದಲೇ ತನ್ನ ದೇಹವನ್ನು ಬೆಳೆಸಿಕೊಂಡು, ವಯಸ್ಕನಾಗಿ, ವೇದಗಳನ್ನೂ, ಇತಿಹಾಸಗಳನ್ನೂ ಸಾಂಗವಾಗಿ ಅಧಿಕರಿಸಿ, ಅಪಾರಕೀರ್ತಿಗೆ ಭಾಗಿಯಾದನು. ತಪಸ್ಸಿನಲ್ಲಿಯಾಗಲಿ, ವೇದಾಧ್ಯಯನದಲ್ಲಿಯಾಗಲಿ, ವ್ರತೋಪವಾಸಗಳಲ್ಲಿಯಾಗಲಿ, ಕೋಪದಲ್ಲಿಯಾಗಲಿ ಅವನನ್ನು ಮೀರಿಸಿದವನು ಲೋಕದಲ್ಲಿಯೇ ಇಲ್ಲವು. ವೇದವಿತ್ತುಗಳಲ್ಲಿ ಮೇಲೆನಿಸಿಕೊಂಡ ಆ ಮಹಾತ್ಮನೇ ಅಖಂಡವಾಗಿದ್ದ ವೇದವನ್ನು ನಾಲ್ಕು ಶಾಖೆಗಳನ್ನಾಗಿ ಮಾಡಿ ವಿಭಾಗಿಸಿದನು. ಆತನು ಪರಾವರಜ್ಞಾನವುಳ್ಳವನು. ಬ್ರಹ್ಮರ್ಷಿಗಳಲ್ಲಿ ಶ್ರೇಷ್ಠನು.

ಸತ್ಯವ್ರತನು. ಪರಮಪರಿಶುದ್ಧನು. ಪುಣ್ಯಕೀರ್ತಿ. ಇಂತಹ ಮಹರ್ಷಿಯು ಸಂತತಿಯಿಲ್ಲದೆ ನಿಂತುಹೋದ ಶಂತನುವಂಶವನ್ನು ಮುಂದುವರಿಸುವುದಕ್ಕಾಗಿ, ಪಾಂಡು, ಧೃತರಾಷ್ಟ್ರ, ವಿದುರರೆಂಬ ಮೂವರು ಪುತ್ರರನ್ನು ಪಡೆದನು.

ಈ ಮಹಾತಪಸ್ವಿಯು ಸರ್ಪಯಾಗಕ್ಕಾಗಿ ಜನಮೇಜಯರಾಜನು ದೀಕ್ಷೆವಹಿಸಿರುವುದನ್ನು ಕೇಳಿ, ವೇದಪಾರಂಗತರಾದ ತನ್ನ ಶಿಷ್ಯರೊಡಗೂಡಿ ಆ ಯಜ್ಞಕ್ಕಾಗಿ ಬಂದನು. ಆ ಯಾಗಸದಸ್ಸಿನಲ್ಲಿ ದೇವತೆಗಳಿಂದ ಪರಿವೃತನಾದ ದೇವೇಂದ್ರನಂತೆ, ಅನೇಕಸದಸ್ಯರ ನಡುವೆ ಜನಮೇಜಯರಾಜನು ಯಾಗದೀಕ್ಷಿತನಾಗಿ ಕುಳಿತಿದ್ದನು. ಮೂರ್ಧಾಭಿಷಿಕ್ತರಾದ ನಾನಾದೇಶದ ರಾಜರೂ, ಯಜ್ಞಕ್ರಿಯೆಗಳಲ್ಲಿ ಸಮರ್ಥರಾಗಿ ಸಾಕ್ಷಾದ್ಬ್ರಹ್ಮದೇವನಿಗೆ ಸಮಾನರೆನಿಸಿದ ಋತ್ವಿಕ್ಕುಗಳೂ, ಆ ರಾಜನ ಸುತ್ತಲೂ ನೆರೆದಿದ್ದರು. ಭರತಕುಲಕ್ಕೆ ತಿಲಕವಂತಿದ್ದ ಆ ಜನಮೇಜಯರಾಜನೂಕೂಡ ವ್ಯಾಸಮಹರ್ಷಿಯು ತನ್ನ ಯಾಗಕ್ಕಾಗಿ ಬಂದುದನ್ನು ಕಂಡೊಡನೆ ಪರಮಹರ್ಷದಿಂದ ತನ್ನ ಸಮಸ್ತಪರಿವಾರಗಳೊಡನೆ ಇದಿರೆದ್ದು ಬಂದು, ಆ ಮಹರ್ಷಿಯನ್ನು ತಾನೇ ಕರೆದುಕೊಂಡು ಹೋಗಿ, ಆ ಸದಸ್ಯರ ಅನುಮತಿಯನ್ನು ಪಡೆದು, ದೇವೇಂದ್ರನು ಬೃಹಸ್ಪತಿಯನ್ನು ಹೇಗೋ ಹಾಗೆ ಅವನನ್ನು ಸತ್ಕರಿಸಿ, ಅವನಿಗೆ ಸುವರ್ಣಪೀಠವೊಂದನ್ನು ಕೊಟ್ಟು ಕುಳ್ಳಿರಿಸಿದನು. ದೇವರ್ಷಿಸಮೂಹಗಳಿಂದ ಪೂಜಿಸಲ್ಪಟ್ಟವನೂ, ತನಗೆ ಕೂಟಸ್ಥನೂ, ಲೋಕಪೂಜ್ಯನೂ ಆದ ಆ ಮಹರ್ಷಿಯನ್ನು ಉತ್ತಮಾಸನದಲ್ಲಿ ಕುಳ್ಳಿರಿಸಿದಮೇಲೆ, ಶಾಸ್ತ್ರೋಕ್ತಕ್ರಮದಿಂದ, ಅರ್ಘ್ಯಪಾದ್ಯಾಚಮನೀಯಗಳನ್ನು ಕೊಟ್ಟು, ಗೋವನ್ನೂ ತಂದೊಪ್ಪಿಸಿದನು. ವ್ಯಾಸಮಹರ್ಷಿಯು ಆ ರಾಜನ ಸತ್ಕಾರಗಳನ್ನೆಲ್ಲ ಪ್ರೀತಿಯಿಂದ ಕೈಕೊಂಡು, ಗೋವನ್ನುಮಾತ್ರ ಹಿಂತಿರುಗಿಸಿ ಕಳುಹಿಸಿಬಿಟ್ಟನು. ಹೀಗೆ ಜನಮೇಜಯನು ತನಗೆ ಕೂಟಸ್ಥನಾದ ಆ ಮಹರ್ಷಿಯನ್ನು ಪೂಜಿಸಿ, ತಾನು ಕೃತಕೃತ್ಯನಾದಂತೆ ಸಂತೋಷದಿಂದ ಆ ಮಹರ್ಷಿಯ ಪಕ್ಕದಲ್ಲಿ ಕುಳಿತು, ಕುಶಲಪ್ರಶ್ನೆಗಳನ್ನು ಮಾಡಿದನು. ವ್ಯಾಸಮಹರ್ಷಿಯೂಕೂಡ ಅವನಿಗೆ ತನ್ನ ಕುಶಲಗಳನ್ನೆಲ್ಲ ತಿಳಿ

ಸಿದನು. ಇವೆಲ್ಲ ಆದಮೇಲೆ, ಅಲ್ಲಿ ನೆರೆದಿದ್ದ ಸದಸ್ಯರೆಲ್ಲರೂ ವ್ಯಾಸಮಹರ್ಷಿಯನ್ನು ಗೌರವಿಸಿ ಸತ್ಕರಿಸಲು, ಇವನೂ ಅವರನ್ನು ಯಥೋಚಿತವಾಗಿ ಆದರಿಸಿ ಪೂಜಿಸಿದನು. ಇಷ್ಟೆಲ್ಲ ಆದಮೇಲೆ, ಜನಮೇಜಯನು ವ್ಯಾಸಮಹರ್ಷಿಯ ಮುಂದೆ ಬದ್ಧಾಂಜಲಿಯಾಗಿ ಹೀಗೆಂದು ಪ್ರಾರ್ಥಿಸುವನು. "ವಿಪ್ರೋತ್ತಮಾ! ಕೌರವಪಾಂಡವರ ಚರಿತ್ರಗಳನ್ನೆಲ್ಲ ನೀನು ಪ್ರತ್ಯಕ್ಷವಾಗಿ ಕಣ್ಣಿಂದ ನೋಡಿದವನು. ಆದುದರಿಂದ ಅವರ ಚರಿತ್ರವನ್ನೆಲ್ಲ ನಾವು ನಿನ್ನ ಬಾಯಿಂದ ಕೇಳಬೇಕೆಂದು ಕೋರುವೆವು. ಯಾವಾಗಲೂ ಸಾಧುವರ್ತನೆಯಲ್ಲಿಯೇ ಇರುತಿದ್ದವರಲ್ಲಿ ಅನ್ಯೋನ್ಯವೈರವು ಹೇಗುಂಟಾಯಿತು? ಅಂತಹ ಪರಮಸಾಧುಗಳಾದ ನನ್ನ ಮುತ್ತಾತಂದಿರ ಮನಸ್ಸಿನಲ್ಲಿ ದೈವಿಕವಾದ ಆವೇಶವು ಹುಟ್ಟಿ, ಅದರಿಂದ ಅನೇಕ ಪ್ರಾಣಿಗಳಿಗೆ ನಾಶಕರವಾದ ಆ ಮಹಾಯುದ್ಧವು ಹೇಗೆ ಸಂಭವಿಸಿತು? ಅವನ್ನೆಲ್ಲ ಯಥಾವಸ್ಥಿತವಾಗಿ ನೀನು ನಮಗೆ ತಿಳಿಸಬೇಕು. ನಿನ್ನಿಂದಲೇ ನಾವು ಅದನ್ನು ಕೇಳಲೆಳಸುವೆವು" ಎಂದನು. ಆಗ ವ್ಯಾಸಮುನಿಯು, ಸಮೀಪದಲ್ಲಿದ್ದ ತನ್ನ ಶಿಷ್ಯನಾದ ವೈಶಂಪಾಯನನನ್ನು ನೋಡಿ "ವೈಶಂಪಾಯನಾ! ಕೌರವಪಾಂಡವರಿಗೆ ಮೊದಲು ಹೇಗೆ ವೈರವುಂಟಾಯಿತೋ, ಅದು ಹೇಗೆ ಪರ್ಯವಸಾನಹೊಂದಿತೋ, ಅವನ್ನೆಲ್ಲ ನೀನು ನನ್ನಿಂದ ಕೇಳಿದಂತೆಯೇ ಈ ರಾಜನಿಗೆ ತಿಳಿಸು" ಎಂದನು. ವೈಶಂಪಾಯನನು ತನ್ನ ಗುರುವಿನ ಆಜ್ಞೆಗೆ ಬದ್ಧನಾಗಿ, ಅಲ್ಲಿ ನೆರೆದಿದ್ದ ಎಲ್ಲಾ ರಾಜರ, ಮತ್ತು ಸದಸ್ಯರ ಮುಂದೆ, ಜನಮೇಜಯನಿಗೆ ಆ ಪುರಾತನಕಥೆಯನ್ನು ಹೇಳತೊಡಗಿದನು.

ಇದು ಅರುವತ್ತನೆಯ ಅಧ್ಯಾಯವು.

---

{ ವೈಶಂಪಾಯನನು ಜನಮೇಜಯನಿಗೆ ಭಾರತಕಥೆಯನ್ನು ಸಂಕ್ಷೇಪಿಸಿ ತಿಳಿಸಿದುದು. }

"ರಾಜೇಂದ್ರಾ! ಪಾಂಡುಕುಮಾರರಾದ ಧರ್ಮರಾಜಾದಿಗಳೈವರೂ ದುರಾತ್ಮರಾದ ಧೃತರಾಷ್ಟ್ರನ ಮಕ್ಕಳ ವಿರೋಧಕ್ಕೆ ಪಾತ್ರರಾದುದು ಹೇಗೆಂ

ಬುದನ್ನು ಹೇಳುವೆನು ಕೇಳು. ಆದರೆ, ಮೊದಲು ನನ್ನ ಗುರುವಿನಲ್ಲಿ ಮನಸ್ಸನ್ನೂ, ಬುದ್ಧಿಯನ್ನೂ, ಧ್ಯಾನವನ್ನೂ ನೆಲೆಗೊಳಿಸಿ, ಅವನಿಗೆ ನಮಸ್ಕರಿಸಿ, ಆಮೇಲೆ ಬ್ರಾಹ್ಮಣರನ್ನೂ, ಇತರ ವಿದ್ವಾಂಸರೆಲ್ಲರನ್ನೂ ಮನಸ್ಸಿನಿಂದಲೇ ಪೂಜಿಸಿ, ಆಮೇಲೆ ವ್ಯಾಸಮಹರ್ಷಿಯ ಮತಾನುಸಾರವಾಗಿ, ಪೂರ್ಣವಾಗಿ ಭಾರತಕಥೆಯನ್ನೆಲ್ಲ ನಿನಗೆ ಹೇಳುವೆನು. ಮಹಾರಾಜಾ! ಆ ಪುಣ್ಯಕಥೆಯನ್ನು ಕೇಳುವುದಕ್ಕೆ ನೀನೂ ತಕ್ಕ ಪಾತ್ರವೆನಿಸಿರುವೆ. ಅಲ್ಲದೆ ನನ್ನ ಗುರುವಿನಿಂದ ನಾನು ಭಾರತಕಥೆಯನ್ನು ಗ್ರಹಿಸಿದಮೇಲೆ, ಇದನ್ನು ನಿನ್ನಂತಹ ಸತ್ಪಾತ್ರಕ್ಕೆ ಹೇಳಬೇಕೆಂದು ಅವರು ತಮ್ಮ ಬಾಯಿಂದಲೇ ನನಗೆ ಆಜ್ಞೆಮಾಡಿದುದು ನನ್ನನ್ನು ಮತ್ತಷ್ಟು ಪ್ರೋತ್ಸಾಹಗೊಳಿಸುತ್ತಿದೆ. ರಾಜಾಗ್ರಣೀ! ರಾಜ್ಯಕ್ಕಾಗಿ ಕೌರವಪಾಂಡವರಲ್ಲಿ ವಿರೋಧವುಂಟಾದುದು, ಜೂಜಾಟದಿಂದ ಪಾಂಡವರಿಗೆ ವನವಾಸವುಂಟಾದುದು, ಆಮೇಲೆ ಆ ಉಭಯಪಕ್ಷದವರಲ್ಲಿ ಲೋಕನಾಶಕವಾದ ಯುದ್ಧವು ಜರುಗಿದುದು, ಇವನ್ನೆಲ್ಲ ನಿನಗೆ ಸಂಗ್ರಹಿಸಿ ತಿಳಿಸುವೆನು ಕೇಳು.

ವೀರರಾದ ಪಾಂಡವರಿಗೆ ಬಾಲ್ಯದಲ್ಲಿಯೇ ತಂದೆಯು ಮೃತನಾಗಲು, ಅವರು ಅಡವಿಯಿಂದ ತಮ್ಮ ಅರಮನೆಗೆ ಬಂದು ಸೇರಿ, ಬಹುಶೀಘ್ರಕಾಲದಲ್ಲಿ ಸಾಂಗವಾಗಿ ವೇದಗಳನ್ನೆಲ್ಲ ಅಭ್ಯಸಿಸಿದರು. ಧನುರ್ವಿದ್ಯೆಯಲ್ಲಿಯೂ ನಿಪುಣರಾದರು. ಬಲಪರಾಕ್ರಮಗಳಲ್ಲಿಯೂ, ಸಾಹಸಗಳಲ್ಲಿಯೂ ಅವರು ಅಸಮಾನರೆನಿಸಿದರು. ರಾಜ್ಯಲಕ್ಷ್ಮಿ, ಕೀರ್ತಿಲಕ್ಷ್ಮಿಗಳೆರಡೂ ಅವರನ್ನೊಲಿದಿದ್ದುವು. ಜನರೆಲ್ಲರಿಗೂ ಅವರಲ್ಲಿ ಅತ್ಯಂತಗೌರವಬುದ್ಧಿಯುಂಟಾಯಿತು. ಪಾಂಡವರ ಈ ಮೇಲ್ಮೆಯನ್ನೆಲ್ಲ ನೋಡಿ ಧೃತರಾಷ್ಟ್ರಪುತ್ರರಿಗೆ ಅಸೂಯೆ ಹುಟ್ಟಿತು. ಕ್ರೂರನಾದ ದುರ್ಯೋಧನನು ಕರ್ಣಶಕುನಿಗಳೊಡನೆ ಸೇರಿಕೊಂಡು, ಪಾಂಡವರನ್ನು ನಾನಾವಿಧವಾಗಿ ಪೀಡಿಸಿ, ಕೊನೆಗೆ ಅವರನ್ನು ಊರುಬಿಟ್ಟು ಹೊರಡಿಸಲು ಪ್ರಯತ್ನಮಾಡುತಿದ್ದನು. (ಸಿಂಹದ ಬಾಯೊಳಗಿನ ಮಾಂಸವನ್ನು ವಂಚನೆಯಿಂದ ಅಪಹರಿಸಲೆಳಿಸುವ ಕುಳಿಂಗಪಕ್ಷಿಯಂತೆ) ವಂಚನೆಯೇ ಸ್ವಭಾವವಾಗಿ ಉಳ್ಳ ಶಕುನಿಯ ಪಕ್ಷವನ್ನೇ ಅನುಸರಿಸುತಿದ್ದ ದುರಾತ್ಮನಾದ ದುರ್ಯೋಧನನು, ಪಾಂಡವರಿಗೆ

ರಾಜ್ಯವನ್ನೇನೂ ಕೊಡದೆ ತಾನೇ ಅಪಹರಿಸಬೇಕೆಂಬ ದುರುದ್ದೇಶದಿಂದ, ಅವರಿಗೆ ನಾನಾವಿಧವಾಗಿ ಹಿಂಸೆಗಳನ್ನು ಕೊಡುತಿದ್ದನು. ಆಮೇಲೆ ಒಮ್ಮೆ ಭೀಮನಿಗೆ ವಿಷವನ್ನು ತಿನ್ನಿಸಿಬಿಟ್ಟನು. ಆದರೇನು? ವೀರನಾದ ಭೀಮನು ಆ ವಿಷವನ್ನೂ ಅನ್ನದೊಡನೆ ಜೀರ್ಣಮಾಡಿಕೊಂಡುಬಿಟ್ಟನು. ಆಮೇಲೆ ಮತ್ತೊಮ್ಮೆ ಭೀಮನು ಪ್ರಮಾಣಕೋಟಿಯೆಂಬ ಗಂಗಾನದಿಯ ಒಂದು ಘಟ್ಟದಲ್ಲಿ ಮಲಗಿದ್ದಾಗ, ಕೌರವರು ಅವನ ಕೈಕಾಲುಗಳನ್ನು ಕಟ್ಟಿ ಗಂಗಾಪ್ರವಾಹದಲ್ಲಿ ಎತ್ತಿಹಾಕಿ ಮನೆಗೆ ಓಡಿಬಂದರು. ಆದರೇನು? ಭೀಮನಿಗೆ ಎಚ್ಚರವಾದೊಡನೆ, ತಾನೇ ತನ್ನ ಮೈಮೇಲಿನ ಕಟ್ಟುಗಳನ್ನೆಲ್ಲ ಕಿತ್ತುಹಾಕಿ ನಿರಾಯಾಸವಾಗಿ ಮೇಲೆದ್ದು ಮನೆಗೆ ಹೊರಟುಬಂದನು. ಆಮೇಲೆ ಮತ್ತೊಮ್ಮೆ ಭೀಮನು ನಿದ್ರಿಸುತಿದ್ದಾಗ, ದುರ್ಯೋಧನನು ಮಹಾವಿಷವುಳ್ಳ ಕಾಳಸರ್ಪಗಳನ್ನು ತರಿಸಿ, ಅವನ ಅಂಗೋಪಾಂಗಗಳನ್ನೆಲ್ಲ ಕಚ್ಚಿಸಿದನು. ಅವರಿಂದಲೂ ಭೀಮನು ಸಾಯಲಿಲ್ಲ. ಜನಮೇಜಯರಾಜಾ! ಒಂದು ರಹಸ್ಯವನ್ನು ತಿಳಿಸುವೆನು ಕೇಳು. ದುರ್ಯೋಧನನು ಪಾಂಡವರಿಗೆ ಈ ವಿಧವಾದ ಬಾಧೆಗಳನ್ನೆಲ್ಲ ಕೊಡುತಿದ್ದಾಗ, ಧರ್ಮಶೀಲನೂ, ಧೀಮಂತನೂ ಆದ ವಿದುರನು, ಆ ಪಾಂಡವರನ್ನು ಅಪಾಯದಿಂದ ತಪ್ಪಿಸುವುದಕ್ಕೂ, ಆಯಾ ಕಾಲಕ್ಕೆ ತಕ್ಕ ಪ್ರತೀಕಾರಗಳನ್ನು ಮಾಡುವುದಕ್ಕೂ ಕಣ್ಣಿಟ್ಟು ಕಾಯುತಿದ್ದನು. ಇಂದ್ರನು ಸ್ವರ್ಗಲೋಕದಲ್ಲಿದ್ದರೂ ಭೂಲೋಕದ ಪ್ರಾಣಿಕೋಟಿಗಳಿಗೆ ಸೌಖ್ಯವನ್ನುಂಟುಮಾಡುವಂತೆ, ವಿದುರನು ಪಾಂಡವರಿಗೆ ದೂರವಾಗಿ, ಕೌರವಗೃಹದಲ್ಲಿದ್ದುಕೊಂಡೇ ಅವರಿಗೆ ಕ್ಷೇಮವನ್ನುಂಟು ಮಾಡುತಿದ್ದನು. ರಾಜೇಂದ್ರಾ! ಪಾಂಡವರಾದರೋ ಕೌರವಕುಲಕ್ಷಯವೆಂಬ ವ್ಯಾಜದಿಂದ ಭೂಭಾರಪರಿಹಾರಕ್ಕಾಗಿಯೇ ದೈವದಿಂದ ಸೃಷ್ಟಿಸಲ್ಪಟ್ಟವರು. ಮತ್ತು ಅದಕ್ಕಾಗಿಯೇ ದೈವದಿಂದ ರಕ್ಷಿಸಲ್ಪಟ್ಟವರು. ಅಂತವರನ್ನು ಕೊಲ್ಲಬೇಕೆಂದರೆ ಸಾಧ್ಯವೆ? ಅಂತವರನ್ನು ಕೊಲ್ಲುವುದಕ್ಕಾಗಿ ದುರ್ಯೋಧನನು ರಹಸ್ಯವಾಗಿಯೂ, ಪ್ರಕಾಶವಾಗಿಯೂ ಎಷ್ಟೆಷ್ಟೋ ಉಪಾಯಗಳನ್ನು ಮಾಡಿದರೂ, ಅವರನ್ನು ಕೊಲ್ಲುವುದಕ್ಕೆ ಅವನಿಂದ ಸಾಧ್ಯವಾಗಲಿಲ್ಲ. ಆಮೇಲೆ ಅವನು ತನ್ನ ದುರ್ಮಂತ್ರಿಗಳೊಡನೆ ಆಲೋಚಿಸಿ, ತನ್ನ ತಂದೆಯನ್ನೂ ಪ್ರೋತ್ಸಾಹಿಸಿ ಅರಗಿನ ಮನೆಯೊಂದನ್ನು ಕಟ್ಟಿ

ಸಿದನು. ಅದರಲ್ಲಿ ಪಾಂಡವರನ್ನು ವಾಸಮಾಡುವಂತೆ ಏರ್ಪಡಿಸಿದನು. ತನ್ನ ಮಕ್ಕಳಲ್ಲಿರುವ ಮೋಹದಿಂದ ಧೃತರಾಷ್ಟ್ರನೂಕೂಡ ಅವರಿಗೇ ರಾಜ್ಯವು ಸಿಕ್ಕಲೆಂಬ ಪೇರಾಸೆಯಿಂದ, ಪಾಂಡವರನ್ನು ಹಸ್ತಿನಾಪುರದಿಂದ ಹೊರಡಿಸಿ, ವಾರಣಾವತದಲ್ಲಿ ಕಟ್ಟಿಸಿದ ಹೊಸಮನೆಗೆ (ಅರಗಿನ ಮನೆಗೆ) ಹೋಗಲು ಪ್ರೇರಿಸಿದನು. ಅದರಂತೆ ಪಾಂಡವರು ಪ್ರಯಾಣಮಾಡುತ್ತಿರುವಾಗ, ವಿದುರನು ರಹಸ್ಯವಾಗಿ ಅವರಿಗೆ ಮುಂದಿರುವ ಅಪಾಯವನ್ನು ತಿಳಿಸಿ, ಅದನ್ನು ತಪ್ಪಿಸಿಕೊಳ್ಳುವ ಉಪಾಯವನ್ನೂ ಹೇಳಿಕೊಟ್ಟನು. ಅದರಂತೆ ಅವರು ನಡುರಾತ್ರಿಯಲ್ಲಿ ಆ ಲಾಕ್ಷಾಗೃಹದಿಂದ ತಪ್ಪಿಸಿಕೊಂಡು ಕಾಡಿಗೆ ಹೋದರು. ಆ ಸಂಗತಿಯನ್ನು ಇನ್ನೂ ಸ್ವಲ್ಪ ವಿವರಿಸಿ ತಿಳಿಸುವೆನು ಕೇಳು. ಪಾಂಡವರು ತಮ್ಮ ತಾಯಿಯನ್ನೂ ಕರೆದುಕೊಂಡು, ವಾರಣಾವತಕ್ಕೆ ಹೋಗಿ, ಅಲ್ಲಿ ಒಂದು ವರ್ಷದವರೆಗೆ ವಾಸಮಾಡುತಿದ್ದರು. ದುರ್ಯೋಧನನ ಮಂತ್ರಿಯಾದ ಪುರೋಚನನೆಂಬವನು, ಪಾಂಡವರನ್ನು ಕೊಲ್ಲುವುದಕ್ಕಾಗಿಯೇ ಅಲ್ಲಿರಿಸಲ್ಪಟ್ಟಿದ್ದನು. ಈ ಸಂಗತಿಯನ್ನು ವಿದುರನಿಂದ ಮೊದಲೇ ತಿಳಿದಿದ್ದ ಪಾಂಡವರು, ಬಹಳ ಎಚ್ಚರಿಕೆಯಿಂದ ತಮಗೆ ಅಪಾಯವಿಲ್ಲದಂತೆ ನೋಡಿಕೊಳ್ಳುತ್ತ ಧೃತರಾಷ್ಟ್ರನ ಆಜ್ಞೆಯನ್ನೂ ಮೀರಲಾರದೆ, ಒಂದು ವರ್ಷಕಾಲದವರೆಗೆ ಆ ಅರಗಿನಮನೆಯಲ್ಲಿಯೇ ಇರುತಿದ್ದರು. ಆ ಒಂದು ವರ್ಷಕಾಲದವರೆಗೆ ಅವರು ವಿದುರನು ಹೇಳಿದಂತೆ ಆ ಮನೆಯಿಂದ ಕಾಡಿನವರೆಗೆ ಒಂದು ಸುರಂಗಮಾರ್ಗವನ್ನು ಮಾಡಿಟ್ಟುಕೊಂಡರು. ಅವೆಲ್ಲವೂ ಮುಗಿದಮೇಲೆ, ಒಂದು ರಾತ್ರಿ ಪುರೋಚನನು ಮಲಗಿದ್ದಾಗ, ತಾವೇ ಆ ಮನೆಗೆ ಬೆಂಕಿಯಿಟ್ಟು ತಮ್ಮ ತಾಯಿಯನ್ನೂ ಕರೆದುಕೊಂಡು, ಆ ಸುರಂಗಮಾರ್ಗವಾಗಿ ಒಂದು ದೊಡ್ಡ ಕಾಡಿಗೆ ಬಂದುಸೇರಿದರು. ಆ ಕಾಡಿನಲ್ಲಿ ಒಂದು ಕಡೆ ಭಯಂಕರರೂಪವುಳ್ಳ ಹಿಡಿಂಬನೆಂಬ ರಾಕ್ಷಸನು ಅವರನ್ನಿದಿರಿಸಲು, ಅವನನ್ನು ಅಲ್ಲಿಯೇ ಕೊಂದುಬಿಟ್ಟರು. ತಮ್ಮ ಸಂಗತಿಯು ಇತರರಿಗೆ ತಿಳಿಯಬಾರದೆಂಬುದಕ್ಕಾಗಿ ಆ ರಾತ್ರಿಯೇ ಆ ಕಾಡನ್ನು ಬಿಟ್ಟು ಹೊರಟುಬಿಟ್ಟರು. ಆದರೆ, ಅದೇ ಕಾಡಿನಲ್ಲಿ ಭೀಮನಿಗೆ ಹಿಡಿಂಬೆಯೆಂಬ ರಾಕ್ಷಸಿಯೊಡನೆ ವಿವಾಹವಾಗಿ, ಘಟೋತ್ಕಚನೆಂಬ ಮಗನು ಹುಟ್ಟಿದನು. ಆಮೇಲೆ ಪಾಂಡವರು ಏಕಚಕ್ರವೆಂಬ ಪುರಕ್ಕೆ

ಹೋಗಿ, ಅಲ್ಲಿ ಬ್ರಹ್ಮಚಾರಿವೇಷದಿಂದ ವೇದಾಧ್ಯಯನಮಾಡುತ್ತ ಕಠಿನ ನಿಯಮದಲ್ಲಿರುವಂತೆ ತೋರಿಸುತಿದ್ದರು. ಹೀಗೆ ಸ್ವಲ್ಪಕಾಲದವರೆಗೆ ಅಲ್ಲಿರುವಾಗ, ಭೀಮನು ಬಕಾಸುರನೆಂಬ ನರಭಕ್ಷಕನಾದ ರಾಕ್ಷಸನೊಬ್ಬನನ್ನು ಕೊಂದನು. ಮಹಾ ವೀರನಾದ ಭೀಮನು ತನ್ನ ಭುಜಬಲಮಾತ್ರದಿಂದಲೇ ಆ ಘೋರರಾಕ್ಷಸನನ್ನು ಕೊಂದು, ಆ ಊರಿನ ಜನಗಳಿಗೆಲ್ಲ ಪ್ರಾಣಭಯವನ್ನು ತಪ್ಪಿಸಿದನು. ಆಮೇಲೆ ಪಾಂಡವರು ಪಾಂಚಾಲದೇಶದಲ್ಲಿ ಸ್ವಯಂವರವಾಗುವ ವೃತ್ತಾಂತವನ್ನು ಕೇಳಿ, ಬ್ರಾಹ್ಮಣವೇಷದಿಂದಲೇ ಅಲ್ಲಿಗೆ ಹೋಗಿ, ದ್ರೌಪದಿಯನ್ನು ವಿವಾಹವಾಗಿ, ಅವಳೊಡನೆ ಒಂದುವರ್ಷಕಾಲದವರೆಗೆ ಅಲ್ಲಿಯೇ ಇದ್ದರು. ಇವರಮೇಲೆ ತಾವು ಬದುಕಿರುವ ಸಂಗತಿಯು ಎಲ್ಲರಿಗೂ ತಿಳಿದುಹೋಗಲು, ಅವರು ತಿರುಗಿ ಹಸ್ತಿನಾಪುರಕ್ಕೆ ಬಂದು ಸೇರಿದರು.

ಹೀಗೆ ಪಾಂಡವರು ಊರಿಗೆ ಬಂದುಸೇರಿದಮೇಲೆ, ಭೀಷ್ಮನೂ, ಧೃತರಾಷ್ಟ್ರನೂ ಅವರನ್ನು ನೋಡಿ “ಮಕ್ಕಳಿರಾ! ನೀವೂ, ಕೌರವರೂ ಒಂದು ಕಡೆಯಲ್ಲಿದ್ದರೆ ಜಗಳವು ತಪ್ಪಿದುದಲ್ಲ. ಆದುದರಿಂದ ನಿಮ್ಮ ಸಹೋದರರೊಡನೆ ನಿಮಗೆ ವಿರೋಧವಿಲ್ಲವಂತೆ ನೀವು ದೂರವಾಗಿರುವುದು ಒಳ್ಳೆಯದು. ಆದುದರಿಂದ ನಿಮ್ಮನ್ನು ಖಾಂಡವಪ್ರಸ್ಥದಲ್ಲಿರಿಸಬೇಕೆಂದು ನಾವು ಆಗಲೇ ಯೋಚಿಸಿರುವೆವು. ಆದುದರಿಂದ ನೀವು ಅಲ್ಲಿಗೆ ಹೋಗಿ ಸುಖವಾಗಿರಿ. ಅದೂ ಬಹಳ ರಮ್ಯವಾದ ದೇಶವೇ! ಅನೇಕ ಗ್ರಾಮಗಳು ಅದಕ್ಕೆ ಸೇರಿರುವುವು. ರಾಜಮಾರ್ಗಗಳೆಲ್ಲವೂ ಬೇರೆಬೇರೆಯಾಗಿ ಬಹಳ ಚೆನ್ನಾಗಿವೆ” ಎಂದರು. ತಾತಂದಿರಿಬ್ಬರೂ ಹೇಳಿದ ಮಾತನ್ನು ಮೀರಲಾರದೆ ಪಾಂಡವರು, ತಮ್ಮ ಪದಾರ್ಥಗಳನ್ನೆಲ್ಲ ಸಾಗಿಸಿಕೊಂಡು, ತಮ್ಮ ಇಷ್ಟಮಿತ್ರರನ್ನೂ ಕರೆದುಕೊಂಡು ಅಲ್ಲಿಗೆ ಹೊರಟುಹೋದರು. ಅಲ್ಲಿ ಹೋದಮೇಲೆ ಅವರು ತಮ್ಮ ಅಸ್ತ್ರಬಲದಿಂದ ಅನೇಕ ರಾಜರನ್ನು ಜಯಿಸಿ ತಮ್ಮ ಅಧೀನಮಾಡಿಕೊಂಡು, ಹಲವು ಸಂವತ್ಸರಗಳವರೆಗೆ ಅಲ್ಲಿಯೇ ವಾಸಮಾಡುತ್ತಿದ್ದರು. ಅಲ್ಲಿ ಅವರು ಸತ್ಯಧರ್ಮಗಳನ್ನು ಬಿಡದೆ, ಬಹಳ ಜಾಗರೂಕರಾಗಿಯೂ, ಪ್ರಯತ್ನಪರರಾಗಿಯೂ ಎಷ್ಟೋ ಶತ್ರುಗಳನ್ನಡಗಿ

ಸಿ ರಾಜ್ಯವನ್ನೂ ವಿಸ್ತರಿಸಿಕೊಂಡರು. ಅವರೆಲ್ಲರೂ ದಿಗ್ವಿಜಯಕ್ಕಾಗಿ ಹೊರಟು ಭೀಮನು ಪೂರ್ವದಿಕ್ಕನ್ನೂ, ಅರ್ಜುನನು ಉತ್ತರದಿಕ್ಕನ್ನೂ, ನಕುಲನು ಪಶ್ಚಿಮದಿಕ್ಕನ್ನೂ, ಸಹದೇವನು ದಕ್ಷಿಣದಿಕ್ಕನ್ನೂ ಜಯಿಸಿ ಸಮಸ್ತಭೂಭಾಗವನ್ನೂ ತಮ್ಮ ವಶಮಾಡಿಕೊಂಡರು. ಆಗ ನಿಜವಾದ ಸೂರ್ಯನೊಡನೆ, ಸೂರ್ಯಸಮಾನತೇಜಸ್ಸುಳ್ಳ ಐದು ಮಂದಿ ಪಾಂಡವರಿಂದಲೂ ಕೂಡಿದ ಭೂಮಿಯು, ಆರು ಮಂದಿ ಸೂರ್ಯರಿಂದ ಕೂಡಿದಂತೆ ಶೋಭಿಸುತ್ತಿತ್ತು.

ಹೀಗಿರುವಾಗ ಯಾವುದೋ ಒಂದು ಕಾರಣಾಂತರದಿಂದ ಧರ್ಮರಾಜನು ತನಗೆ ಪ್ರಾಣಕ್ಕಿಂತಲೂ ಪ್ರಿಯನಾದ ಅರ್ಜುನನನ್ನು ಕಾಡಿಗೆ ಕಳುಹಿಸಬೇಕಾದ ಸಂಭವವು ಬಂದೊದಗಿತು. ಪುರುಷಸಿಂಹನೂ, ದೃಢಚಿತ್ತನೂ ಆದ ಸವ್ಯಸಾಚಿಯು, ಪೂರ್ಣವಾಗಿ ಒಂದು ಸಂವತ್ಸರವೂ ಒಂದು ತಿಂಗಳಕಾಲದವರೆಗೆ ವನವಾಸದಲ್ಲಿ ಕಾಲವನ್ನು ಕಳೆಯುತ್ತ, ಅದೇ ಕಾಲದಲ್ಲಿ ಅನೇಕತೀರ್ಥಯಾತ್ರೆಗಳನ್ನೂ ಮಾಡಿದನು. ಈ ನಡುವೆ ಅವನಿಗೆ ಉಲೂಪಿಯೆಂಬ ನಾಗಕನ್ಯೆಯೊಡನೆ ವಿವಾಹವಾಯಿತು. ಮತ್ತು ಪಾಂಡ್ಯರಾಜನ ಮಗಳಾದ ಚಿತ್ರಾಂಗದೆಯೆಂಬವಳೂ ದೊರೆತಳು. ಅದರಿಂದಾಚೆಗೆ ಅವನು ದ್ವಾರಕೆಯಲ್ಲಿದ್ದ ಕೃಷ್ಣನ ಬಳಿಗೆ ಬಂದನು. ಅಲ್ಲಿಯೂ ಅವನಿಗೆ ಕೃಷ್ಣನ ತಂಗಿಯಾದ ಸುಭದ್ರೆಯೊಡನೆ ವಿವಾಹವಾಯಿತು. ಶಚಿಯು ಇಂದ್ರನೊಡನೆಯೂ, ಶ್ರೀದೇವಿಯು ಕೃಷ್ಣನೊಡನೆಯೂ ಸೇರಿದಂತೆ ಸುಭದ್ರೆಯು ಅತ್ಯಂತಸಂತುಷ್ಟಳಾಗಿ ಅರ್ಜುನನೊಡನೆ ಸೇರಿ ಸುಖದಿಂದಿದ್ದಳು. ಆಮೇಲೆ ಮತ್ತೊಮ್ಮೆ ಅರ್ಜುನನು ಕೃಷ್ಣಸಹಾಯದಿಂದ ಖಾಂಡವವನದಲ್ಲಿ ಅಗ್ನಿಯನ್ನು ತೃಪ್ತಿಗೊಳಿಸಿದನು. ಕೇವಲ ಸಂಕಲ್ಪಮಾತ್ರವೇ ಸಹಾಯವಾಗಿ ಉಳ್ಳ ಶ್ರೀಮಹಾವಿಷ್ಣುವಿಗೆ, ದೈತ್ಯವಧದಲ್ಲಿ ಭಾರವೇನೂ ತೋರದಂತೆ, ಕೃಷ್ಣಸಹಾಯವುಳ್ಳ ಅರ್ಜುನನಿಗೆ ಯಾವ ಕಾರ್ಯವೂ ಅಸಾಧ್ಯವಾಗಿ ತೋರುತ್ತಿರಲಿಲ್ಲ. ಆಗ ಅಗ್ನಿಯು ಅರ್ಜುನನಲ್ಲಿ ಪ್ರೀತನಾಗಿ ಅವನಿಗೆ ಗಾಂಡೀವವೆಂಬ ದಿವ್ಯ ಧನುಸ್ಸನ್ನೂ, ಅಕ್ಷಯಬಾಣಗಳುಳ್ಳ ಎರಡು ಬತ್ತಳಿಕೆಗಳನ್ನೂ, ಕಪಿಧ್ವಜವುಳ್ಳ ಒಂದು ರಥವನ್ನೂ ಕೊ

ಟ್ಟನು. ಇದೇ ಸಮಯದಲ್ಲಿ ಅರ್ಜುನನು ಮಯನನ್ನು ಅಗ್ನಿ ಭಯ ದಿಂದ ತಪ್ಪಿಸಿ ಕಾಪಾಡಿದುದರಿಂದ, ಅಸುರಶಿಲ್ಪಿಯಾದ ಆ ಮಯನು ಸಮಸ್ತ ರತ್ನಶೋಭಿತವಾದ ಒಂದು ದಿವ್ಯಸಭೆಯನ್ನು ನಿರ್ಮಿಸಿಕೊಟ್ಟನು. ಆ ಸಭೆಯನ್ನು ನೋಡಿದೊಡನೆ ದುರ್ಬುದ್ಧಿಯುಳ್ಳ ದುರ್ಯೋಧನನಿಗೆ, ಅದನ್ನು ಹೇಗಾದರೂ ಪಾಂಡವರಿಂದ ಕಸುಕೊಳ್ಳಬೇಕೆಂಬ ಆಸೆ ಹುಟ್ಟಿತು. ಇದಕ್ಕಾಗಿ ಅವನು ಶಕುನಿಯ ಮೂಲಕವಾಗಿ ಜೂಜನ್ನಾರಂಭಿಸಿ, ಧರ್ಮ ರಾಜನನ್ನು ಮೋಸಗೊಳಿಸಿ, ಅದರಲ್ಲಿ ಪಾಂಡವರಿಗೆ ಹನ್ನೆರಡುವರ್ಷಗಳ ವನವಾಸವನ್ನೂ ಅದರಿಂದಾಚೆಗೆ ಒಂದು ವರ್ಷಕಾಲದ ಅಜ್ಞಾತವಾಸ ವನ್ನೂ ನಿರ್ಣಯಿಸಿ, ಅವರನ್ನು ರಾಜ್ಯದಿಂದ ಹೊರಡಿಸಿಬಿಟ್ಟನು. ಪಾಂಡ ವರು ಅದಕ್ಕೂ ಸಮ್ಮತಿಸಿ, ಆ ಕಷ್ಟಗಳನ್ನೆಲ್ಲ ದಾಟಿ, ಹದಿನಾಲ್ಕನೆಯ ವರ್ಷದಲ್ಲಿ ಹಿಂತಿರುಗಿ ಬಂದು, ತಮ್ಮ ರಾಜ್ಯಭಾಗವನ್ನು ತಮಗೆ ಕೊಡ ಬೇಕೆಂದು ಎಷ್ಟೋ ದೈನ್ಯದಿಂದ ಕೇಳಿದರೂ, ಅವರಿಗೆ ಅದು ಲಭಿಸಲಿಲ್ಲ. ಕೊನೆಗೆ ಯುದ್ಧವು ಆರಂಭವಾಯಿತು. ಆ ಯುದ್ಧದಲ್ಲಿ ಪಾಂಡವರು ತಮಗೆ ಇದಿರಾಗಿ ನಿಂತ ಅನೇಕರಾಜರನ್ನೂ, ಕೊನೆಗೆ ದುರ್ಯೋಧನ ನನ್ನೂ ಕೊಂದು, ಬಹಳ ಮಟ್ಟಿಗೆ ಜನನಷ್ಟವಾಗಿದ್ದ ರಾಜ್ಯವನ್ನು ವಶಪ ಡಿಸಿಕೊಂಡರು. ಆಮೇಲೆ ಧರ್ಮರಾಜಾದಿಗಳು ಅಶ್ವಮೇಧವೇ ಮೊದ ಲಾದ ಹಲವು ಯಾಗಗಳನ್ನು ನಡೆಸಿದರು. ಆಮೇಲೆ ಸ್ವಲ್ಪ ಕಾಲಕ್ಕೆ ಕುಲ ವೃದ್ಧರಾದ ಧೃತರಾಷ್ಟ್ರ ವಿದುರರಿಬ್ಬರೂ ಕಾಲಾಧೀನರಾಗಲು, ಅವರಿಗೂ ಇನ್ನೂ ಇತರರಾಜರಿಗೂ ಪಾಂಡವರೇ ಅಪರಕ್ರಿಯೆಗಳನ್ನೆಲ್ಲ ನಡೆಸಿದರು. ಆಮೇಲೆ ಶ್ರೀಕೃಷ್ಣನೂ ತನ್ನ ನಿಜಸ್ಥಾನವಾದ ವೈಕುಂಠಕ್ಕೆ ಹೋಗಿ ನೆಲೆ ಗೊಳಲು, ಪಾಂಡವರು ಅವನ ಸ್ತ್ರೀಯರನ್ನು ರಕ್ಷಿಸುತಿದ್ದು, ಕೊನೆಗೆ ತಾವೂ ಮಹಾಪ್ರಸ್ಥಾನಿಕವನ್ನು ನಡೆಸಿ, ಸ್ವರ್ಗಪದವಿಯನ್ನು ಹೊಂದಿ ದರು. ಜನಮೇಜಯರಾಜಾ! ಇದೇ ನಿನ್ನ ತಾತಂದಿರಾದ ಪಾಂಡವರ ಚರಿತ್ರಸಂಗ್ರಹವು. ಪಾಂಡವಕೌರವರಲ್ಲಿ ವಿರೋಧವುಂಟಾಗಿ ಮೊದಲು ಅವರಿಗೆ ರಾಜ್ಯವು ತಪ್ಪಿಹೋದುದು, ಆಮೇಲೆ ಜಯಪ್ರಾಪ್ತಿ ಇವೆಲ್ಲ ಈ ರೀತಿಯಾಗಿ ನಡೆಯಿತು" ಎಂದನು.

ಇದು ಅರುವತ್ತೊಂದನೆಯ ಅಧ್ಯಾಯವು.

## ಭಾರತ ಪ್ರಶಂಸೆ. ಭಾರತ ಶ್ರವಣಪಠನಾದಿಗಳಿಂದಾಗುವ ಫಲಗಳು.

ಆಮೇಲೆ ಜನಮೇಜಯರಾಜನು ವೈಶಂಪಾಯನನನ್ನು ಕುರಿತು "ಬ್ರಹ್ಮಣೋತ್ತಮಾ! ಕೌರವರ ಚರಿತ್ರವನ್ನೊಳಕೊಂಡ ಮಹಾಭಾರತದ ಕಥೆಯನ್ನೇನೋ ನಾನು ಬಹಳ ಸಂಗ್ರಹವಾಗಿ ನಿನ್ನಿಂದ ಕೇಳಿದುದಾಯಿತು. ವಿಚಿತ್ರವಿಷಯಗಳನ್ನೊಳಕೊಂಡ ಆ ಚರಿತ್ರವನ್ನು ಇನ್ನೂ ವಿವರವಾಗಿ ನಿನ್ನಿಂದ ಕೇಳಿ ತಿಳಿಯಬೇಕೆಂದು ನನಗೆ ಬಹಳ ಆಸೆ ಹುಟ್ಟಿದೆ. ಆದುದರಿಂದ ತಿರುಗಿ ನೀನು ಅದೇ ಕಥೆಯನ್ನು ಸವಿಸ್ತರವಾಗಿ ನಮಗೆ ತಿಳಿಸಬೇಕು. ನಮ್ಮ ಪೂರ್ವಿಕರ ಪುಣ್ಯಚರಿತ್ರವನ್ನು ಎಷ್ಟೆಷ್ಟು ಕೇಳಿದರೂ ನನ್ನ ಮನಸ್ಸಿಗೆ ತೃಪ್ತಿಯಿಲ್ಲದಂತಿದೆ. ಇದಲ್ಲದೆ ಈ ಚರಿತ್ರಾಂಶಗಳಲ್ಲಿ ನನಗೆ ಅನೇಕಸಂದೇಹಗಳೂ ಹುಟ್ಟಿವೆ. ಹೇಗೆಂದರೆ, ಪಾಂಡವರಾದರೋ ಧರ್ಮಗಳೆಲ್ಲವನ್ನೂ ಚೆನ್ನಾಗಿ ಬಲ್ಲವರೆಂದು ಹೆಸರುಗೊಂಡವರು. ಅಂತವರು ತಾವು ಕೊಲ್ಲಬಾರದವರನ್ನೆಲ್ಲ ಅನೇಕವಾಗಿ ಯುದ್ಧದಲ್ಲಿ ಕೊಂದರಲ್ಲವೆ? ಇದಕ್ಕೆ ಕಾರಣವು ಅಲ್ಪವಾಗಿರಲಾರದು. ಏನೋ ಪ್ರಬಲಕಾರಣವಿರಬೇಕು. ಆದಲ್ಲದೆ, ಆ ಪಾಂಡವರೋ ನಿರಪರಾಧಿಗಳು. ಪುರುಷಶ್ರೇಷ್ಠರು. ಮಹಾಪರಾಕ್ರಮಿಗಳು. ಹೀಗಿರುವಾಗಲೂ, ದುಷ್ಟಸ್ವಭಾವವುಳ್ಳ ದುರ್ಯೋಧನಾದಿಗಳು ತಮಗೆ ಕೊಟ್ಟ ಕಷ್ಟಗಳನ್ನೆಲ್ಲ ಸುಮ್ಮನೆ ಸಹಿಸಿಕೊಂಡಿದ್ದುದೇಕೆ? ಆ ಭೀಮನಾದರೂ ಸಾಮಾನ್ಯನಲ್ಲ. ಅವನು ಹತ್ತುಸಾವಿರ ಆನೆಗಳ ಬಲವುಳ್ಳವನೆಂದೂ, ಅಪಾರ ಭುಜಶಕ್ತಿಯುಳ್ಳವನೆಂದೂ ಕೇಳಿರುವೆನು. ಅಂತವನು ಕೌರವರಿಂದ ಅನೇಕಕ್ಲೇಶಗಳಿಗೆ ಗುರಿಮಾಡಲ್ಪಟ್ಟಾಗಲೂ, ತನ್ನ ಕೋಪವನ್ನು ಅಡಗಿಸಿಟ್ಟುಕೊಂಡಿದ್ದುದು ಹೇಗೆ? ಕೌರವರು ಮಹಾಪತಿವ್ರತೆಯಾದ ದ್ರೌಪದಿಗೆ ಮಾನಭಂಗಪಡಿಸಿದಾಗ, ಅವಳು ತನ್ನ ದೃಷ್ಟಿಯಿಂದಲೇ ಅವರನ್ನು ದಹಿಸತಕ್ಕ ಪ್ರಭಾವವುಳ್ಳವಳಾಗಿದ್ದರೂ ಆ ದುರಾತ್ಮರನ್ನು ಅವಳು ತನ್ನ ಕೋಪಾಗ್ನಿಯಿಂದ ದಹಿಸದೆ ಬಿಟ್ಟುದೇಕೆ? ಮಾದ್ರೀಪುತ್ರರಾದ ನಕುಲಸಹದೇವರಾದರೂ ಕೌರವರಿಂದ ಅಷ್ಟು ಕಷ್ಟಕ್ಕೆ ಗುರಿಮಾಡಲ್ಪಟ್ಟಾಗ, ದ್ಯೂತವ್ಯಸನದಲ್ಲಿ ಬಿದ್ದ ಧರ್ಮರಾಜನನ್ನೇ ಅನು

ವರ್ತಿಸಿಹೋಗುತ್ತ ಸುಮ್ಮನಿದ್ದ ಕಾರಣವೇನು? ಮಹಾಧರ್ಮರಾಜನ ಪುತ್ರನಾಗಿ, ಧರ್ಮಗಳನ್ನೆಲ್ಲ ತಿಳಿದವನಾಗಿ, ಧಾರ್ಮಿಕರಲ್ಲಿ ಶ್ರೇಷ್ಠನೆನಿಸಿಕೊಂಡ ಯುಧಿಷ್ಠಿರನಾದರೂ, ತಾನು ಅನುಭವಿಸಬಾರದ ಕಷ್ಟಗಳನ್ನೆಲ್ಲ ಅನುಭವಿಸಿಯೂ, ತಾಳ್ಮೆಯಿಂದ ಸಹಿಸಿಕೊಂಡಿದ್ದುದೇಕೆ? ಕೃಷ್ಣನನ್ನೇ ಸಾರಥಿಯಾಗಿ ಪಡೆದ ಆ ಅರ್ಜುನನು, ಏಕಾಕಿಯಾಗಿಯೇ ಬಾಣಗಳನ್ನು ಪ್ರಯೋಗಿಸಿ ಎಷ್ಟುಮಂದಿ ಶತ್ರುಗಳನ್ನಾದರೂ ಕೊಲ್ಲಬಲ್ಲನು. ಅಂತವನು ಆ ಕಷ್ಟಗಳನ್ನೆಲ್ಲ ಸಹಿಸಿಕೊಂಡಿದ್ದುದು ಹೇಗೆ? ಇವೆಲ್ಲ ನನಗೆ ಬಹಳ ಆಶ್ಚರ್ಯಕರಗಳಾದ ಸಂಗತಿಗಳಾಗಿವೆ. ಆದುದರಿಂದ ಈ ನನ್ನ ಸಂದೇಹಗಳೆಲ್ಲ ತೀರುವಹಾಗೆ ನೀನು ಹಿಂದೆ ನಡೆದ ವಿಚಾರಗಳನ್ನೆಲ್ಲ ನಡೆದುದು ನಡೆದ ಹಾಗೆ ತಿಳಿಸಬೇಕು. ಮಹಾರಥರಾದ ಅವರು ಮಾಡಿದ ಒಂದೊಂದು ಕಾರ್ಯವನ್ನೂ ವಿವರಿಸಬೇಕು" ಎಂದನು

ಅದಕ್ಕೆ ವೈಶಂಪಾಯನನು "ಓ ಮಹಾರಾಜಾ! ಸಾವಧಾನವಾಗಿ ಕೇಳು. ಆ ಕಥಾವಿಷಯವು ಬಹಳ ವಿಪುಲವಾದುದು. ಪವಿತ್ರವಾದ ಆ ಭಾರತವೆಂಬ ಉಪಾಖ್ಯಾನಕ್ಕೆ ಶ್ರೀಕೃಷ್ಣದ್ವೈಪಾಯನನು ಹೇಳಿದ ಕಥಾನುಕ್ರಮವನ್ನು ಹಿಡಿದೇ ನಾನೂ ನಿನಗೆ ತಿಳಿಸುವೆನು. ಆ ವ್ಯಾಸಮುನಿಯ ಮತಾನುಸಾರವಾಗಿಯೇ ಅದನ್ನು ನಿನಗೆ ನಾನು ಸಂಪೂರ್ಣವಾಗಿ ತಿಳಿಸುವೆನು ಕೇಳು. ಅಪಾರತೇಜಸ್ವಿಯೂ, ಸತ್ಯವತೀಪುತ್ರನೂ ಆದ ಆ ಮಹರ್ಷಿಯು, ಪುಣ್ಯಾತ್ಮರಾದ ಆ ಪಾಂಡವರ ಚರಿತ್ರವನ್ನು ಕುರಿತು ನೂರುಸಾವಿರ ಗ್ರಂಥಗಳನ್ನು (ಶ್ಲೋಕಗಳನ್ನು) ಹೇಳಿರುವನು. ಉತ್ತಮವಾದ ಆ ಭಾರತವೆಂಬ ಇತಿಹಾಸವು ಅದರೊಳಗಣ ಉಪಾಖ್ಯಾನಗಳೊಡನೆ ಕೇಳುವುದಕ್ಕೂ, ಮನಸ್ಸಿನಲ್ಲಿ ಧಾರಣಮಾಡುವುದಕ್ಕೂ ಯೋಗ್ಯವಾದುದು. ಆದರೂ ನಾನು ಅವನ್ನೆಲ್ಲ ಸಂಗ್ರಹಿಸಿ ಹೇಳುವೆನು. ಆ ಭಾರತದಲ್ಲಿ ಎರಡುಸಾವಿರ ಅಧ್ಯಾಯಗಳೂ, ನೂರು ಪರ್ವಗಳೂ, ಲಕ್ಷ ಶ್ಲೋಕಗಳೂ ಇವೆ. ಇವನ್ನೆಲ್ಲ ವ್ಯಾಸಮುನಿಯು ಹದಿನೆಂಟು ಪರ್ವಗಳನ್ನಾಗಿ ವಿಭಾಗಿಸಿರುವನು. ಇದನ್ನು ಕೇಳುವವರೂ, ಹೇಳುವವರೂ ಬ್ರಹ್ಮಲೋಕದಲ್ಲಿ ದೇವಸಮಾನರಾಗಿ ಬೆಳಗುವರು.

ಇದು ವೇದಗಳಿಗೆ ಸಮಾನವಾದುದು. ಅತಿ ಪವಿತ್ರವೂ ಅತ್ಯುತ್ತಮವೂ ಆದುದು. ಕೇಳತಕ್ಕ ವಿಷಯಗಳಲ್ಲಿ ಇದಕ್ಕಿಂತಲೂ ಮೇಲಾದುದಿಲ್ಲ. ಋಷಿಗಳಿಂದ ಮಂತ್ರಕ್ಕೆ ಸಮಾನವಾಗಿ ಆದರಿಸಲ್ಪಡತಕ್ಕುದು. ಇದರಲ್ಲಿ ಅರ್ಥಕಾಮಗಳೆಂಬ ಪುರುಷಾರ್ಥಗಳೂ, ಮೋಕ್ಷಕ್ಕೆ ಅನುಕೂಲವಾದ ಬುದ್ಧಿವಾದಗಳೂ ಸಾಕಲ್ಯವಾಗಿ ನಿರೂಪಿಸಲ್ಪಡುವುವು. ಕೃಷ್ಣದ್ವೈಪಾಯನಪ್ರೋಕ್ತವಾದ ವೇದವೆನಿಸಿಕೊಂಡ ಈ ಭಾರತವನ್ನು ವಿದ್ವಾಂಸನಾದವನು, ಉದಾರಮನಸ್ಕರೂ, ದಾನಶೀಲರೂ, ಸತ್ಯಸಂಧರೂ, ಆಸ್ತಿಕರೂ ಆದ ಸಾಧುಗಳಿಗೆ ಹೇಳುವುದರಿಂದ ಅಭೀಷ್ಟಗಳನ್ನೆಲ್ಲ ಪಡೆಯಬಹುದು. ಅತಿ ಕ್ರೂರಪಾತಕವನ್ನು ಮಾಡಿದವರೂಕೂಡ ಈ ಇತಿಹಾಸವನ್ನು ಕೇಳುವುದರಿಂದ ಪಾಪವಿಮುಕ್ತರಾಗುವರು. ಗರ್ಭಹತ್ಯೆಯನ್ನು ಮಾಡಿದವರೂ ಇದನ್ನು ಕೇಳಿ ರಾಹುವಿಮುಕ್ತನಾದ ಚಂದ್ರನಂತೆ ಪಾಪವಿಮುಕ್ತರಾಗಿ ಶೋಭಿಸುವರು. ಈ ಇತಿಹಾಸಕ್ಕೆ "ಜಯ"ವೆಂದೇ ಹೆಸರು. ಆದುದರಿಂದ ಜಯಾಕಾಂಕ್ಷಿಗಳು ಇದನ್ನು ಕೇಳಬೇಕಾದುದವಶ್ಯವು. ಕ್ಷತ್ರಿಯನಾದವನು ಇದನ್ನು ಕೇಳುವುದರಿಂದ, ಶತ್ರುಗಳನ್ನು ಜಯಿಸಿ, ಭೂಮಿಯನ್ನು ವಶಪಡಿಸಿಕೊಳ್ಳುವನು. ಇದು ಸಂತಾನವಿಲ್ಲದವರಿಗೆ ಸಂತಾನವನ್ನು ಕೊಡುವುದು. ಎಲ್ಲಾ ಮಂಗಳಗಳನ್ನೂ ಕೊಡತಕ್ಕುದು. ರಾಜಪತ್ನಿಯರೂ, ಯುವರಾಜರೂ ಅವಶ್ಯವಾಗಿ ಇದನ್ನು ಬಾರಿಬಾರಿಗೂ ಕೇಳುತ್ತಿರಬೇಕು. ರಾಜಪತ್ನಿಯು ಇದನ್ನು ಕೇಳುವುದರಿಂದ ವೀರನಾದ ಕುಮಾರನನ್ನು ಪಡೆದು ವೀರಮಾತೆಯೆನಿಸುವಳು. ಮಹಾರಾಜನ ಕೈಹಿಡಿಯತಕ್ಕ ಕುಮಾರಿಯನ್ನು ಪಡೆಯುವಳು. ವ್ಯಾಸಪ್ರೋಕ್ತವಾದ ಮಹಾಭಾರತವೆಂಬುದು ಪವಿತ್ರವಾದ ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಮೋಕ್ಷಶಾಸ್ತ್ರಗಳೆನಿಸಿವೆ. ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳ ವಿಚಾರವಾಗಿ ಈ ಮಹಾಭಾರತದಲ್ಲಿ ಹೇಳಲ್ಪಟ್ಟಿರುವ ವಿಷಯವೇ ಇತರ ಗ್ರಂಥಗಳಲ್ಲಿಯೂ ಇವೆಯಲ್ಲದೆ ಇದರಲ್ಲಿಲ್ಲದುದು ಬೇರೆಲ್ಲಿಯೂ ಇರಲಾರದು. ಈ ಪುಣ್ಯಕಥೆಯು ಬ್ರಾಹ್ಮಣರಿಂದ ಬ್ರಾಹ್ಮಣರಿಗೆ ಉಪದೇಶಿಸಲ್ಪಡುತ್ತ ಬಂದಿರುವುದು. ಇತರರೆಲ್ಲರೂ ಇದನ್ನು ಕೇಳಿ ಆನಂದಿಸುತ್ತಿರುವರು. ಇದನ್ನು ಕೇಳುವುದರಿಂದ ಪುತ್ರರು ಪಿತೃಶುಶ್ರೂ

ಷೆಯಲ್ಲಿಯೂ, ಭೃತ್ಯರು ಸ್ವಾಮಿಕಾರ್ಯಗಳಲ್ಲಿಯೂ ಅಕ್ಕರೆಯುಳ್ಳವರಾಗುವರು. ಈ ಭರತವಂಶಚರಿತ್ರವನ್ನು ಕೇಳುವವರಿಗೆ ಈ ಲೋಕದಲ್ಲಿ ವ್ಯಾಧಿಭಯುವೇ ಇಲ್ಲವೆಂದಮೇಲೆ ಅಂತವರಿಗೆ ಪಾರಲೌಕಿಕವಾದ ಭೀತಿಯಿಲ್ಲವೆಂಬುದನ್ನು ಹೇಳಬೇಕಾದುದೇನು? ಈ ಪುಣ್ಯಕಥೆಯನ್ನು ಕೇಳುವವರು ಮನೋವಾಕ್ಕಾಯಗಳಿಂದ ಮಾಡಿದ ಎಲ್ಲಾ ಪಾಪಗಳಿಂದಲೂ ವಿಮುಕ್ತರಾಗುವರು. ಧನವನ್ನೂ, ಕೀರ್ತಿಯನ್ನೂ, ದೀರ್ಘಾಯುಸ್ಯವನ್ನೂ, ಪುಣ್ಯಫಲವನ್ನೂ, ಸ್ವರ್ಗಾದಿ ಸದ್ಗತಿಗಳನ್ನೂ ಕೊಡತಕ್ಕ ಈ ಇತಿಹಾಸವನ್ನು ವ್ಯಾಸಮುನಿಯು, ಲೋಕದಲ್ಲಿ ಪುಣ್ಯವನ್ನು ವೃದ್ಧಿಗೊಳಿಸಬೇಕೆಂದೂ, ಮಹಾತ್ಮರಾದ ಪಾಂಡವರ, ಮತ್ತು ಸಂಪತ್ತಿನಲ್ಲಿಯೂ, ಪರಾಕ್ರಮದಲ್ಲಿಯೂ, ವಿದ್ಯೆಯಲ್ಲಿಯೂ, ಕಾರ್ಯಗಳಲ್ಲಿಯೂ ಪ್ರಖ್ಯಾತರಾದ ಇತರವೀರಕ್ಷತ್ರಿಯರ ಪ್ರಭಾವವನ್ನೂ, ಕೀರ್ತಿಯನ್ನೂ ಹೊರಪಡಿಸಬೇಕೆಂದೇ ಉದ್ದೇಶಿಸಿ ರಚಿಸಿರುವನು. ಯಾವ ಮನುಷ್ಯನು ಈ ಪವಿತ್ರವಾದ ಭಾರತವನ್ನು ಪರಿಶುದ್ಧರಾದ ಬ್ರಾಹ್ಮಣರಿಂದ ಕೇಳುವನೋ ಅವನು ಶಾಶ್ವತವಾದ ಪುಣ್ಯಕ್ಕೆ ಭಾಗಿಯಾಗುವನು. ಯಾವನು ಶುದ್ಧನಾಗಿ ಈ ಕೌರವವಂಶದ ಚರಿತ್ರವನ್ನು ಪಠಿಸುವನೋ, ಅವನು ಲೋಕಪೂಜ್ಯನಾಗಿ ಉತ್ತಮವಾದ ವಂಶಾಭಿವೃದ್ಧಿಯನ್ನು ಪಡೆಯುವನು. ಯಾವ ಬ್ರಾಹ್ಮಣನು ವರ್ಷಕಾಲದ ನಾಲ್ಕು ತಿಂಗಳಲ್ಲಿ ನಿಯಮನಿಷ್ಠನಾಗಿ ಈ ಭಾರತವನ್ನು ಬಿಡದೆ ಪಠಿಸುವನೋ, ಅವನು ಸಮಸ್ತಪಾಪಗಳಿಂದ ಮುಕ್ತನಾಗುವನು. ಭಾರತವನ್ನು ಚೆನ್ನಾಗಿ ಓದಿದವನು ವೇದವೇದಾಂಗಗಳನ್ನೆಲ್ಲ ಓದಿ ಅವರಲ್ಲಿ ಪಾರಂಗತನಾದಷ್ಟು ಜ್ಞಾನವಂತನಾಗುವನು. ಪಾಪವಿದೂರರೂ, ಪುಣ್ಯಪುರುಷರೂ ಆದ ಅನೇಕದೇವರ್ಷಿಗಳ, ರಾಜರ್ಷಿಗಳ, ಮತ್ತು ಬ್ರಹ್ಮರ್ಷಿಗಳ ಚರಿತ್ರಗಳೆಲ್ಲ ಈ ಮಹಾಭಾರತದಲ್ಲಿ ಹೇಳಲ್ಪಡುವುವು. ದೇವದೇವನೂ, ಸರ್ವೇಶ್ವರನೂ ಎನಿಸಿದ ಭಗವಂತನಾದ ಶ್ರೀಮಹಾವಿಷ್ಣುವೂ ಇದರಲ್ಲಿ ಕೀರ್ತಿಸಲ್ಪಡುವನು.* ಲಕ್ಷ್ಮಿ(ಪಾರ್ವತಿ)ಯ ಮಹಿಮೆಯೂ, ಆರುಮಂದಿ ತಾಯಿ

* ವಿಷ್ಣುವನ್ನು ಹೇಳಿದೊಡನೆ ದೇವಿಯೆಂದು ಹೇಳಿರುವುದರಿಂದ ಲಕ್ಷ್ಮಿಯೆಂದೂ, ದೇವಿಯೆಂದು ಹೇಳಿದೊಡನೆ ಕುಮಾರಸ್ವಾಮಿಯ ಹೆಸರನ್ನು ಹೇಳಿರುವುದರಿಂದ ಪಾರ್ವತಿಯೆಂದೂ ಇಲ್ಲಿ ಅರ್ಥಭೇದಗಳನ್ನು ಹೇಳಬಹುದು.

ಯರಿಗೆ ಮಗನೆನಿಸಿಕೊಂಡ ಕುಮಾರಸ್ವಾಮಿಯ ಉತ್ಪತ್ತಿವೃತ್ತಾಂತವೂ ಈ ಭಾರತದಲ್ಲಿ ಅಡಗಿರುವುವು. ಗೋಬ್ರಾಹ್ಮಣರ ಮಹತ್ವವೂ ಇದರಲ್ಲಿ ಪ್ರತಿಪಾದಿಸಲ್ಪಡುವುವು. ಭಾರತವೆಂಬುದು ಸಮಸ್ತವೇದಾರ್ಥಗಳ ಸಂಗ್ರಹವಾದುದರಿಂದ, ಧರ್ಮಬುದ್ಧಿಯುಳ್ಳವರೆಲ್ಲರೂ ಇದನ್ನು ಕೇಳಬೇಕಾದುದವಶ್ಯವು. ಪರ್ವಕಾಲಗಳಲ್ಲಿ ಈ ಭಾರತವನ್ನೋದಿಸತಕ್ಕವರು ಸಮಸ್ತಪಾಪಗಳನ್ನು ನೀಗಿ, ಸ್ವರ್ಗವನ್ನು ಜಯಿಸಿ, ಕೊನೆಗೆ ಶಾಶ್ವತವಾದ ಬ್ರಹ್ಮವನ್ನು ಸೇರುವರು. ಶ್ರಾದ್ಧಕಾಲದಲ್ಲಿ ಈ ಭಾರತದ ಒಂದು ಶ್ಲೋಕದ ಒಂದು ಪಾದವನ್ನಾದರೂ ಯಾವನು ನಿಮಂತ್ರಿತ ಬ್ರಾಹ್ಮಣರಮುಂದೆ ಪಠಿಸುವನೋ, ಅವನು ಮಾಡಿದ ಶ್ರಾದ್ಧವು ಅಕ್ಷಯವಾದ ಫಲವನ್ನು ಕೊಟ್ಟು, ಅವನ ಪಿತೃಗಳಿಗೆ ತೃಪ್ತಿಕರವಾಗುವುದು. ತಿಳಿದಾಗಲಿ, ತಿಳಿಯದೆಯಾಗಲಿ, ಒಬ್ಬ ಮನುಷ್ಯನು ಇಂದ್ರಿಯಗಳಿಂದಲೋ, ಮನಸ್ಸಿನಿಂದಲೋ, ಆಯಾದಿನಗಳಲ್ಲಿ ಮಾಡಿದ ಪಾಪಗಳೆಲ್ಲ ಈ ಭಾರತಶ್ರವಣದಿಂದ ನೀಗಿಹೋಗುವುವು. ಭರತವಂಶದವರ ಮಹತ್ತಾದ ಜನ್ಮವೃತ್ತಾಂತವಾಮುದರಿಂದಲೇ ಇದಕ್ಕೆ ಮಹಾಭಾರತವೆಂಬ ಹೆಸರಾಗಿದೆ, ಈ ಹೆಸರಿನಲ್ಲಿರುವ ಈ ನಿರುಕ್ತವನ್ನು ಕೇಳಿದವನೂಕೂಡ ಪಾಪವಿಮುಕ್ತನಾಗುವನು. ಭರತವಂಶದವರ ಅದ್ಭುತವಾದ ಈ ಇತಿಹಾಸವು ಕೀರ್ತನಮಾತ್ರದಿಂದಲೇ ಮಹಾಪಾತಕಗಳಿಂದ ಮನುಷ್ಯರನ್ನು ಬಿಡಿಸುವುದು. ಮಹಾತ್ಮನಾದ ವ್ಯಾಸಮುನಿಯು ಮೂರುಸಂವತ್ಸರಗಳ ಕಾಲದವರೆಗೆ ನಿದ್ರೆಯಿಲ್ಲದೆ, ಶುಚಿಯಾಗಿದ್ದು, ಈ ಭಾರತಗ್ರಂಥವನ್ನು ಆದ್ಯಂತವಾಗಿ ರಚಿಸಿದನು. ಆ ವ್ಯಾಸಮಹರ್ಷಿಯು ತಪಸ್ಸಿಗೆ ಯೋಗ್ಯವಾದ ನಿಯಮಗಳನ್ನು ಹಿಡಿದೇ ಈ ಗ್ರಂಥವನ್ನು ರಚಿಸಿದುದರಿಂದ, ಇದನ್ನು ಪಠಿಸುವ ಬ್ರಾಹ್ಮಣನೂ ಶುಚಿಯಾಗಿ ನಿಯಮದಿಂದಲೇ ಪಠಿಸಬೇಕು. ಈ ವಿಚಿತ್ರವಾದ ಭಾರತಕಥೆಯನ್ನು ಯಾವ ಬ್ರಾಹ್ಮಣನು ಇತರರಿಗೆ ಹೇಳಿ, ಅದನ್ನು ಬ್ರಾಹ್ಮಣನಾಗಲಿ, ಬೇರೆ ಯಾವನಾಗಲಿ, ಶ್ರದ್ಧೆಯಿಂದ ಕೇಳಿದರೆ, ಹಿಂದೆ ಅವನು ಯಾವತರದ ನಡತೆಯುಳ್ಳದ್ದವನಾದರೂ, ಅವನ ಪಾಪಪುಣ್ಯಕೃತ್ಯಗಳಿಗಾಗಿ ಅವರನ್ನು ಕುರಿತು ಚಿಂತಿಸಬೇಕಾದುದಿಲ್ಲ. ಏಕೆಂದರೆ, ಮೋಕ್ಷಸುಖಕ್ಕೆ ನಿರೋಧಕಗಳಾದ ಅವನ ಕರ್ಮಸಂಬಂಧಗಳೆಲ್ಲ ಈ ಭಾರತಶ್ರವಣಮಾತ್ರದಿಂದ ಬಿಟ್ಟು

ಹೋಗುವುವು. ಧರ್ಮಾಕಾಂಕ್ಷಿಯಾದ ಮನುಷ್ಯನು ಈ ಭಾರತವನ್ನು ತಪ್ಪದೆ ಆಮೂಲಾಗ್ರವಾಗಿ ಕೇಳಬೇಕು. ಇದರಿಂದ ಅವನಿಗೆ ಇಹಲೋಕದಲ್ಲಿ ಕೋರಿದ ಕೋರಿಕೆಗಳೆಲ್ಲ ಅನುಕೂಲಿಸಿ ಬರುವುವು. ಈ ಭಾರತವೆಂಬ ಇತಿಹಾಸವನ್ನೋದುವುದರಿಂದ ಮನುಷ್ಯನಿಗೆ ಉಂಟಾಗತಕ್ಕ ಆನಂದವು ಅವನಿಗೆ ಸ್ವರ್ಗದಲ್ಲಿಯೂ ಲಭಿಸದು. ಅದ್ಭುತವಾದ ಈ ಇತಿಹಾಸವನ್ನು ಕೇಳುವವನೂ, ಇತರರಿಗೆ ಹೇಳುವವನೂ, ಅದರಿಂದ ಅಪಾರ ಪುಣ್ಯಕ್ಕೆ ಭಾಗಿಯಾಗಿ, ಅನೇಕ ರಾಜಸೂಯಗಳನ್ನೂ, ಅಶ್ವಮೇಧಗಳನ್ನೂ ನಡೆಸಿದ ಫಲವನ್ನು ಹೊಂದುವನು. ಅನಂತವಾದ ಸಮುದ್ರವೂ, ಮಹಾಪರ್ವತವೆನಿಸಿಕೊಂಡ ಮೇರುವೂ, ರತ್ನಗಳಿಗೆ ಆಕರವೆಂದು ಹೇಳಿಸಿಕೊಂಡಂತೆ ಈ ಮಹಾಭಾರತವೂ ರತ್ನಗಳಿಗೆ (ರತ್ನದಂತಹ ವಿಷಯಗಳಿಗೆ) ಸಿಧಿಯೆನಿಸಿದೆ. ಈ ಭಾರತವೆಂಬುದು ಸಮಸ್ತ ವೇದಗಳಿಗೂ ಸಮಾನವಾದುದು. ಪವಿತ್ರಗಳೊಳಗೆಲ್ಲ ಮೇಲಾಗಿ ಪವಿತ್ರವೆನಿಸಿದುದು. ರಮ್ಯಾರ್ಥಗಳುಳ್ಳುದು. ಕಿವಿಗಿಂಪಾದುದು. ಮನಸ್ಸನ್ನು ಶುದ್ಧಿಗೊಳಿಸತಕ್ಕುದು. ಸದಾಚಾರವನ್ನು ವೃದ್ಧಿಗೊಳಿಸತಕ್ಕುದು. ಆದುದರಿಂದ ಪ್ರತಿಯೊಬ್ಬರೂ ಇದನ್ನು ತಪ್ಪದೆ ಅನುಸಂಧಿಸಬೇಕು. ಓ ರಾಜೇಂದ್ರಾ! ಈ ಭಾರತಗ್ರಂಥವನ್ನೋದಿಸಿ, ಓದಿದವರಿಗೆ ಧನದಾನಮಾಡತಕ್ಕವನು, ಸಮುದ್ರಾಂತವಾದ ಭೂಮಿಯನ್ನೆಲ್ಲ ದಾನಮಾಡಿದ ಫಲಕ್ಕೆ ಭಾಗಿಯಾಗುವನು. ಈ ಕಥೆಯು ಮನಸ್ಸಿಗೆ ಬಹಳ ಹರ್ಷಪ್ರದವಾದುದು. ಈ ಕಥೆಯನ್ನು ನಾನು ನಿನಗೆ ಆದ್ಯಂತವಾಗಿ ಹೇಳುವೆನು. ಪವಿತ್ರವೂ, ಜಯಪ್ರದವೂ ಆದ ಈ ಕಥೆಯನ್ನು ಕೇಳುವುದರಿಂದ ಮೇಲ್ಮೆಯುಂಟು" ಎಂದನು.

ಇದು ಅರುವತ್ತೆರಡನೆಯ ಅಧ್ಯಾಯವು.

---

## ಪೂರುವಂಶದ ವಿವರಣವು.

ಓ ಜನಮೇಜಯರಾಜಾ! ಅಮಿತತೇಜಸ್ಸುಳ್ಳ ನಿನ್ನ ಕೂಟಸ್ಥರಾದ ಆ ರಾಜರೆಲ್ಲರೂ ಪೂರುವಿನ ಸಂತತಿಯವರು. ಅಂತಹ ರಾಜರ ಸಂಬಂಧದಿಂದ ಮಹಾಭಾಗ್ಯವನ್ನು ಪಡೆದ ಆ ವಂಶದ ಪರಂಪರೆಯನ್ನೂ,

ಅಲ್ಲಿನ ರಾಜರ ಹೆಸರನ್ನೂ ಕೇಳು. ಅವ್ಯಕ್ತವೆನಿಸಿದ ಪರಬ್ರಹ್ಮದಿಂದ ಶಾಶ್ವತನಾದ ಬ್ರಹ್ಮದೇವನು ಹುಟ್ಟಿದನು. ಅವನಿಂದ ಮರೀಚಿ ಮತ್ತು ದಕ್ಷನೆಂಬ ಇಬ್ಬರು ಪ್ರಜಾಪತಿಗಳು ಹುಟ್ಟಿದರು. ಬ್ರಹ್ಮನು ತನ್ನ ಹೆಬ್ಬೆರಳಿನಿಂದ ದಕ್ಷನನ್ನೂ, ಕಣ್ಣುಗಳಿಂದ ಮರೀಚಿಯನ್ನೂ ಸೃಷ್ಟಿಸಿದನು. ಮರೀಚಿಯ ಮಗನಾದ ಕಶ್ಯಪನಿಗೂ, ದಕ್ಷನ ಮಗಳಾದ ಅದಿತಿಗೂ ವಿವಾಹವಾಗಿ ಆ ದಂಪತಿಗಳಲ್ಲಿ ಸೂರ್ಯನು ಹುಟ್ಟಿದನು. ಸೂರ್ಯನಿಂದ ವೈವಸ್ವತ ಮನುವು ಹುಟ್ಟಿದನು. ಈ ಮನುವಿನ ಮಗಳು ಇಳೆ. ಆ ಇಳೆಯಲ್ಲಿ ಪುರೂರವಸ್ಸು ಹುಟ್ಟಿ, ಅವನಿಗೆ ಆಯುವೆಂಬ ಮಗನಾದನು. ಆಯುವಿನಿಂದ ನಹುಷನೂ, ನಹುಷನಿಂದ ಯಯಾತಿಯೂ ಹುಟ್ಟಿದರು. ಯಯಾತಿಗೆ ಇಬ್ಬರು ಹೆಂಡತಿಯರು. ಅವರಲ್ಲಿ ಒಬ್ಬಳು ಶುಕ್ರನ ಮಗಳಾದ ದೇವಯಾನಿ; ಮತ್ತೊಬ್ಬಳು ವೃಷಪರ್ವನ ಮಗಳಾದ ಶರ್ಮಿಷ್ಠೆ. ಆ ಶರ್ಮಿಷ್ಠೆಯಿಂದಲೇ ನಿಮ್ಮ ಈ ಪೂರುವಂಶವು ಬೆಳೆಯಿತು. ಹೇಗೆಂದರೆ, ಯಯಾತಿಯು ಪತ್ನಿಯಾದ ದೇವಯಾನಿಯಲ್ಲಿ ಯದುವೆಂದೂ, ದುರ್ವಸುವೆಂದೂ ಇಬ್ಬರು ಮಕ್ಕಳಾದರು. ಶರ್ಮಿಷ್ಠೆಯಲ್ಲಿ ದ್ರುಹ್ಯು, ಅನು, ಮತ್ತು ಪೂರುವೆಂಬ ಮೂವರು ಪುತ್ರರು ಹುಟ್ಟಿದರು. ಈ ಮಕ್ಕಳಲ್ಲಿ ಯದುವಿನಿಂದಯಾದವರೂ, ಪುರುವಿನಿಂದ ಪೌರವರೂ ಹುಟ್ಟಿದರು. ಪುರುವಿಗೆ ಕೌಸಲ್ಯೆಯೆಂಬ ಭಾರ್ಯೆಯಿದ್ದಳು. ಅವಳಲ್ಲಿ ಜನಮೇಜಯನೆಂಬ ಪುತ್ರನು ಹುಟ್ಟಿ, ಮೂರು ಸಾರಿ ಅಶ್ವಮೇಧಗಳನ್ನೂ, ವಿಶ್ವಜತ್ತೆಂಬ ಮಹಾಯಾಗವನ್ನೂ ಮಾಡಿ, ಆಮೇಲೆ ವನಕ್ಕೆ ಹೋದನು. ಆ ಜನಮೇಜಯನಿಗೆ ಮಗಧರಾಜನ ಮಗಳಾದ ಸುನಂದೆಯೆಂಬವಳೊಡನೆ ವಿವಾಹವಾಗಿ, ಅವಳಲ್ಲಿ ಪ್ರಾಚೀನ್ವಂತನೆಂಬ ಕುಮಾರನು ಹುಟ್ಟಿದನು. ಈ ರಾಜಕುಮಾರನು, ಸೂರ್ಯನು ಉದಯಿಸುವ ಸ್ಥಳದವರೆಗೆ ಪೂರ್ವದಿಕ್ಕನ್ನೆಲ್ಲ ಜಯಿಸಿ ಸ್ವಾಧೀನಪಡಿಸಿಕೊಂಡುದರಿಂದಲೇ ಅವನಿಗೆ ಪ್ರಾಚೀನ್ವಂತನೆಂಬ ಹೆಸರು ಪ್ರಸಿದ್ಧವಾಯಿತು. ಇವನು ಯದುವಂಶದ ಅಶ್ಮಕಿಯೆಂಬವಳನ್ನು ಮದುವೆಯಾಗಿ, ಅವಳಲ್ಲಿ ಶಯ್ಯಾತಿ (ಸಂಯಾತಿ) ಎಂಬ ಮಗನನ್ನು ಪಡೆದನು. ಇವನಿಗೆ ತ್ರಿಶಂಕುಪುತ್ರಿಯಾದ ವರಾಂಗಿಯೊಡನೆ ವಿವಾಹವಾಯಿತು. ಅವಳಲ್ಲಿ ಅಹಂಯಾತಿಯೆಂಬವನು ಹುಟ್ಟಿದನು. ಇವನಿಗೆ ಕೃತ

ವೀರ್ಯನ ಮಗಳಾದ ಭಾನುಮತಿಯೊಡನೆ ವಿವಾಹವಾಗಿ, ಸಾರ್ವಭೌಮ ನೆಂಬ ಮಗನಾದನು. ಈ ಸಾರ್ವಭೌಮನು ಒಮ್ಮೆ ಕೇಕಯದೇಶಕ್ಕೆ ಹೋಗಿ, ಆ ರಾಜನ ಮಗಳಾದ ಸುಂದರಿಯೆಂಬವಳನ್ನು ತನ್ನ ಪರಾಕ್ರಮ ದಿಂದ ಜಯಿಸಿ ತಂದು ಅವಳನ್ನು ವಿವಾಹವಾದನು. ಇವಳಲ್ಲಿ ಜಯತ್ಸೇ ನನೆಂಬವನು ಹುಟ್ಟಿ, ವಿದರ್ಭಪುತ್ರಿಯಾದ ಸುಶ್ರವೆಯೆಂಬವಳನ್ನು ವಿವಾಹ ವಾದನು. ಆ ಸುಶ್ರವೆಯಲ್ಲಿ ಅಪರಾಚೀನನು ಹುಟ್ಟಿದನು. ಅವನೂ ಮ ತ್ತೊಬ್ಬ ವಿದರ್ಭಪುತ್ರಿಯಾದ ಮರ್ಯಾದೆಯೆಂಬವಳನ್ನು ವಿವಾಹವಾಗಿ, ಅವಳಲ್ಲಿ ಅರಿಹನೆಂಬ ಪುತ್ರನನ್ನು ಪಡೆದನು. ಈ ಅರಿಹನಿಗೆ ಆಂಗಿ ಯೆಂಬ ಪತ್ನಿಯಲ್ಲಿ ಮಹಾಭೌಮನೆಂಬವನು ಹುಟ್ಟಿದನು. ಈ ಮಹಾ ಭೌಮನು ಪ್ರಸೇನಜಿತ್ತಿನ ಮಗಳಾದ ಸುಯಜ್ಞೆಯೆಂಬವಳನ್ನು ಮದುವೆ ಯಾಗಿ, ಅಯುತಾನಾಯಿಯೆಂಬ ಪುತ್ರನನ್ನು ಪಡೆದನು. ಈತನು ಪುರು ಷಮೇಧವೆಂಬ ನರಯಾಗವನ್ನಾರಂಭಿಸಿ ಹತ್ತುಸಾವಿರಮಂದಿ ಮನುಷ್ಯ ರನ್ನು ಹಿಡಿದುತಂದುದರಿಂದ, ಇವನಿಗೆ ಅಯುತಾನಾಯಿಯೆಂಬ ಹೆಸರು ಬಂದಿತು. ಇವನು ಪೃಥುಶ್ರವನ ಮಗಳಾದ ಭಾಸೆಯೆಂಬವಳನ್ನು ವಿವಾ ಹವಾಗಿ ಅಕ್ರೋಧನನೆಂಬ ಪುತ್ರನನ್ನು ಪಡೆದನು. ಈ ಅಕ್ರೋಧನನಿಗೆ ಕಂಡುವೆಂಬ ಕಳಿಂಗರಾಜಕುಮಾರಿಯು ವಿವಾಹಿತಳಾದಳು. ಅವಳಲ್ಲಿ ದೇವಾತಿಥಿಯೆಂಬವನು ಹುಟ್ಟಿದನು. ಈ ದೇವಾತಿಥಿಗೆ ವಿದರ್ಭರಾಜ ಪುತ್ರಿಯಾದ ಮರ್ಯಾದೆಯೆಂಬವಳಲ್ಲಿ ಋಚನೆಂಬವನು ಹುಟ್ಟಿದನು. ಈ ಋಚನೆಂಬವನಿಗೆ ವಾಮದೇವಿಯೆಂಬ ಅಂಗರಾಜಪುತ್ರಿಯೊಡನೆ ವಿವಾಹ ವಾಗಿ ಋಕ್ಷನೆಂಬ ಪುತ್ರನು ಹುಟ್ಟಿದನು. ಋಕ್ಷನಿಗೆ ತಕ್ಷಕನ ಮಗಳಾದ ಜ್ವಲಂತಿಯೆಂಬವಳಲ್ಲಿ ಅಂತ್ಯನಾರನೆಂಬವನು ಜನಿಸಿದನು. ಈ ಅಂತ್ಯ ನಾರನು ಸರಸ್ವತೀನದಿಯ ತೀರದಲ್ಲಿ ಹನ್ನೆರಡು ವರ್ಷಗಳವರೆಗೆ ನಡೆ ಸುವ ಸತ್ರಯಾಗವನ್ನು ನಡೆಸುತಿದ್ದನು. ಆ ಯಾಗವು ಮುಗಿಯುವ ಕಾಲದಲ್ಲಿ ಸರಸ್ವತೀನದಿಯು ತಾನೇ ಬಂದು ಅವನನ್ನು ವರಿಸಿದಳು. ಆ ಸರಸ್ವತಿಯಲ್ಲಿ ತ್ರಸ್ನುವೆಂಬ ಮಗನಾದನು. ತ್ರಸ್ನುವಿಗೆ ಕಾಳಿಂದಿಯಲ್ಲಿ ಇವಿಲನೆಂಬ ಮಗನಾದನು. ಈ ಇವಿಲನಿಗೆ ರಥಂತರಿಯೆಂಬವಳಲ್ಲಿ ದು ಷ್ಯಂತನೇ ಮೊದಲಾದ ಐದುಮಂದಿ ಪುತ್ರರಾದರು. ದುಷ್ಯಂತನು ಭಗೀ

ರಥನ ಮಗಳಾದ ಲಾಕ್ಷಿಯೆಂಬವಳನ್ನು ವಿವಾಹವಾಗಿ ಅವಳಲ್ಲಿ ಜನಮೇಜಯನೆಂಬವನನ್ನು ಪಡೆದನು. ಆಮೇಲೆ ಆ ದುಷ್ಯಂತನೇ ವಿಶ್ವಾಮಿತ್ರನ ಮಗಳಾದ ಶಕುಂತಲೆಯೆಂಬವಳನ್ನು ವಿವಾಹವಾದನು. ಅವಳಲ್ಲಿ ದುಷ್ಯಂತನಿಗೆ ಭರತನೆಂಬ ಮಗನಾದನು

ಓ ಜನಮೇಜಯರಾಜಾ! ಈ ಭರತನ ವಿಷಯವಾಗಿ ಪ್ರಸಿದ್ಧವಾದ ಎರಡು ಶ್ಲೋಕಗಳುಂಟು. ಅದು ಅಶರೀರವಾಣಿಯಾಗಿ ಕೇಳಿಬಂದ ಶ್ಲೋಕಗಳು. ಆ ಶ್ಲೋಕಗಳಾವುವೆಂದರೆ;—

**"ಮಾತಾಭಸ್ತ್ರಾ, ಪಿತುಃ ಪುತ್ರೋ ಯಸ್ಮಾಜ್ಜಾತಸ್ಸ ಏವ ಸಃ |**
**ಭರಸ್ವ ಪುತ್ರಂ ದುಷ್ಯಂತಂ ಸತ್ಯಮಾಹ ಶಕುಂತಲಾ!**
**ರೇತೋಧಾ: ಪುತ್ರ ಉನ್ನಯತಿ ನರದೇವ ಯಮಕ್ಷಯಾತ್**
**ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ."**

(ತಾಯಿಯಾದವಳು ಬರೀ ಚರ್ಮದ ಚೀಲವೇ ಹೊರತು, ಮಗನೆಂಬವನು ತಂದೆಗೇ ಸೇರಿದವನು. ತಂದೆಯೇ ಮಗನಾಗಿ ಹುಟ್ಟುವನು. ಆದುದರಿಂದ ರಾಜಾ! ನಿನ್ನ ಮಗನೇ ಇವನು. ಶಕುಂತಲೆಯು ಮಾತು ಸತ್ಯವು. ಮಗನಾದವನು ತನ್ನ ಜನ್ಮಕ್ಕಾಗಿ ಬೀಜವನ್ನು ಬಿತ್ತಿದವನನ್ನು (ತಂದೆಯನ್ನು) ಯಮಲೋಕದಿಂದ ತಪ್ಪಿಸುವನು. ನೀನೇ ಈ ಪುತ್ರನಿಗಾಗಿ ಗರ್ಭವನ್ನಿಟ್ಟವನು. ಶಕುಂತಲೆಯ ಮಾತು ನಿಜವು. ಇವನನ್ನು ನೀನು ಭರಿಸು) ಎಂದು ದುಷ್ಯಂತನಿಗೆ ಕೇಳುವಂತೆ, ಅಶರೀರ ವಾಕ್ಕು ನುಡಿಯಿತು ಹೀಗೆ "ಭರಿಸು" ಎಂಬ ಅಶರೀರವಾಕ್ಕಿನಮೇಲೆಯೇ ಅವನಿಗೆ ಭರತನೆಂಬ ಹೆಸರಾಯಿತು. ಈ ಭರತನು ಕಾಶೀರಾಜನಾದ ಸರ್ವಸೇನನೆಂಬವನ ಮಗಳಾದ ಸುನಂದೆಯನ್ನು ವರಿಸಿ ಅವಳಲ್ಲಿ ಭೂಮನ್ಯುವೆಂಬ ಮಗನನ್ನು ಪಡೆದನು. ಭೂಮನ್ಯುವಿಗೆ ಯದುವಂಶದ ಸುವರ್ಣೆಯೆಂಬ ಪತ್ನಿಯಲ್ಲಿ ಸುಹೋತ್ರನೆಂಬ ಮಗನಾದನು. ಸುಹೋತ್ರನಿಗೆ ಇಕ್ಷ್ವಾಕುವಂಶದ ಜಯಂತೆಯೆಂಬಳಲ್ಲಿ ಹಸ್ತಿ ಎಂಬವನು ಹುಟ್ಟಿದನು.

ಓ ಜನಮೇಜಯರಾಜಾ! ಈ ನಿಮ್ಮ ನಗರವು ಆ ರಾಜನಿಂದ ನಿರ್ಮಿಸಲ್ಪಟ್ಟುದರಿಂದಲೇ ಇದಕ್ಕೆ ಹಸ್ತಿನಾಪುರವೆಂಬ ಹೆಸರಾಯಿತು.

ಆ ಹಸ್ತಿಗೆ ತ್ರಿಗರ್ತರಾಜನ ಮಗಳಾದ ಯಶೋದೆಯೊಡನೆ ವಿವಾಹವಾಗಿ, ಅವಳಲ್ಲಿ ವಿಕುಂಜನೆಂಬ ಮಗನಾದನು. ಆ ವಿಕುಂಜನೆಂಬವನಿಗೆ ದಾಶಾರ್ಣಕುಲದ ಸುಂದರಿಯೆಂಬವಳಲ್ಲಿ ಅಜಮೀಢನೆಂಬ ಪುತ್ರನಾದನು. ಅಜಮೀಢನಿಗೆ ಕೈಕೇಯಿ, ನಾಗೆ, ಗಾಂಧಾರಿ, ವಿಮಲೆ, ಋಕ್ಷೆಯೆಂಬ ಐದುಮಂದಿ ಭಾರ್ಯೆಯರಾಗಿ, ಅವರಲ್ಲಿ ಎರಡುಸಾವಿರದ ನಾನೂರು ಮಂದಿ ಮಕ್ಕಳಾದರು. ಈ ರಾಜರಿಂದ ಬೇರೆಬೇರೆ ಎಷ್ಟೋ ಕ್ಷತ್ರಿಯವಂಶಗಳು ಹುಟ್ಟಿದುವು. ಆ ಐದುಮಂದಿ ಪತ್ನಿಯರಲ್ಲಿ ಸಂವರಣನೆಂಬವನು ಋಕ್ಷೆಯಲ್ಲಿ ಹುಟ್ಟಿದನು. ಇವನಿಂದ ದೊಡ್ಡ ವಂಶವು ಅಭಿವೃದ್ಧಿಯಾಯಿತು. ಆ ಸಂವರಣನಿಗೆ ಸೂರ್ಯಕುಮಾರಿಯಾದ ತಪತಿಯೆಂಬವಳಲ್ಲಿ ಕುರು ಎಂಬವನು ಜನಿಸಿದನು ಆ ಕುರುವಿಗೆ ಯದುವಂಶದ ಶುಭಾಂಗಿ ಎಂಬವಳಲ್ಲಿ ವಿಡೂರಥನೆಂಬವನು ಹುಟ್ಟಿದನು. ಆ ವಿಡೂರಥನಿಗೆ ಮಗಧರಾಜಪುತ್ರಿಯಾದ ಹಂಸಪ್ರಿಯೆಯೆಂಬವಳಲ್ಲಿ ಅನಶ್ವಂತನೆಂಬವನು ಹುಟ್ಟಿದನು. ಅನಶ್ವಂತನಿಗೆ ಬೇರೊಬ್ಬ ಮಗಧಕುಮಾರಿಯಾದ ಅಮೃತೆಯೆಂಬವಳೊಡನೆ ವಿವಾಹವಾಗಿ, ಅವಳಲ್ಲಿ ಪರೀಕ್ಷಿತ್ತೆಂಬ ಕುಮಾರನು ಹುಟ್ಟಿದನು. ಪರೀಕ್ಷಿತ್ತಿಗೆ ಬಾಹುಕಪುತ್ರಿಯಾದ ವೇಷೆಯೆಂಬವಳಲ್ಲ ಭೀಮಸೇನನೆಂಬವನು ಹುಟ್ಟಿದನು. ಭೀಮಸೇನನಿಗೆ ಕೇಕಯಪುತ್ರಿಯಾದ ಸುಕುಮಾರಿಯೆಂಬಳಲ್ಲಿ ಪರಿಶ್ರವನೆಂಬವನು ಜನಿಸಿದನು. ಆ ಪರಿಶ್ರವನನ್ನೇ ಪ್ರತೀಪನೆಂದೂ ಹೇಳುವರು. ಆ ಪ್ರತೀಪನಿಗೆ ಶಿಬಿಚಕ್ರವರ್ತಿಯ ಮಗಳಾದ ನಂದಿನಿಯೊಡನೆ ವಿವಾಹವಾಗಿ, ಆ ದಂಪತಿಗಳಲ್ಲಿ ದೇವಾಪಿ, ಶಂತನು, ಬಾಹ್ಲೀಕರೆಂಬ ಮೂವರು ಪುತ್ರರಾದರು. ದೇವಾಪಿಯು ಬಾಲ್ಯದಲ್ಲಿಯೇ ವಿರಕ್ತನಾಗಿ ಅಡವಿಗೆ ಹೋದನು ಶಂತನುವು ಭೂಮಿಯನ್ನು ಪಾಲಿಸುತಿದ್ದನು. ಈ ಶಂತನುವಿನ ವಿಷಯವಾಗಿಯೂ ಒಂದು ಗಾಥೆ (ಶ್ಲೋಕ) ಯುಂಟು. ಮುದುಕನಾದ ಯಾವನನ್ನು ಈತನು ಕೈಯಿಂದ ಮುಟ್ಟಿದರೆ, ಅವರು ಯೌವನವಂತರಾಗಿ ಸುಖಿಸುವರು. ಇದರಿಂದಲೇ ಇವನಿಗೆ “ಶಂ+ತನು” ಎಂದರೆ ಸುಖವನ್ನು ಉಂಟುಮಾಡತಕ್ಕವನೆಂಬ ಹೆಸರಾಯಿತು. ಈ ಶಂತನುವಿಗೆ ಭಗೀರಥಪುತ್ರಿಯಾದ ಗಂಗೆ

ಯೊಡನೆ ವಿವಾಹವಾಗಿ, ಅವಳಲ್ಲಿ ದೇವವ್ರತನೆಂಬ ಮಗನಾದನು. ಆ ದೇವವ್ರತನೇ ಭೀಷ್ಮನೆಂದೂ ಕರೆಯಲ್ಪಡುವನು. ಆ ಭೀಷ್ಮನು ತನ್ನ ತಂದೆಯ ಪ್ರೀತಿಗಾಗಿ ಸತ್ಯವತಿಯೆಂಬವಳನ್ನು ತನಗೆ ತಾಯಿಯನ್ನಾಗಿ (ಎಂದರೆ, ತನ್ನ ತಂದೆಗೆ ಪತ್ನಿಯನ್ನಾಗಿ) ಮಾಡಿದನು. ಈಕೆಗೆ ಕಾಳಿಯೆಂದೂ ನಾಮಾಂತರವುಂಟು. ಇವಳು ಮೊದಲು ಕನ್ಯಾವಸ್ಥೆಯಲ್ಲಿರುವಾಗ ಅವಳಲ್ಲಿ ಪರಾಶರನಿಗೆ ಹುಟ್ಟಿದವನೇ ಕೃಷ್ಣದ್ವೈಪಾಯನನು (ವ್ಯಾಸನು). ಅವಳು ದೊಡ್ಡವಳಾದಮೇಲೆ ಶಂತನುವಿಗೆ ವಿವಾಹಿತಳಾದಳು. ಅವಳಿಗೆ ಶಂತನುವಿನಿಂದ ಚಿತ್ರಾಂಗದ, ವಿಚಿತ್ರವೀರ್ಯರೆಂಬ ಪುತ್ರರಿಬ್ಬರಾದರು. ಚಿತ್ರಾಂಗದನು ರಾಜ್ಯಕ್ಕೆ ಬಂದೊಡನೆ ಒಬ್ಬ ಗಂಧರ್ವನಿಂದ ಹತನಾಗಲು, ವಿಚಿತ್ರವೀರ್ಯನು ರಾಜ್ಯಕ್ಕೆ ಬಂದನು. ಈ ವಿಚಿತ್ರವೀರ್ಯನು ಕಾಶೀ ರಾಜನ ಮಕ್ಕಳಾದ ಅಂಬಿಕೆ, ಅಂಬಾಲಿಕೆಯೆಂಬಿಬ್ಬರು ಕನ್ಯೆಯರನ್ನು ವಿವಾಹವಾದನು. ಅವನಿಗೆ ಸಂತಾನವೇ ಆಗದಿದ್ದು, ಕೊನೆಗೆ ಅವನು ಅಪುತ್ರವಂತನಾಗಿಯೇ ಸ್ವರ್ಗಸ್ಥನಾದನು. ಆಗ ಸತ್ಯವತಿಯು, ಶಂತನು ವಂಶವು ಅಷ್ಟಕ್ಕೇ ನಿಂತುಹೋಗುವುದಲ್ಲಾ ಎಂದು ಚಿಂತಿಸುತ್ತ, ಕೃಷ್ಣ ದ್ವೈಪಾಯನನನ್ನು (ತನ್ನ ಮಗನನ್ನು) ಸ್ಮರಿಸಲು, ಆ ಮುನಿಯು ಬಂದು, ತಾಯಿಯ ಮುಂದೆ ಕೈಮುಗಿದು ನಿಂತು, "ತನ್ನಿಂದಾಗಬೇಕಾದ ಕಾರ್ಯ ವೇನೆಂದು" ಪ್ರಾರ್ಥಿಸಿದನು. ಆಗ ಸತ್ಯವತಿಯು "ನಿನ್ನ ಸಹೋದರನು ಸಂತಾನವಿಲ್ಲದೆಯೇ ಸ್ವರ್ಗಸ್ಥನಾದನು. ಅವನಿಗಾಗಿ ನೀನು ಸಂತತಿಯನ್ನುಂಟುಮಾಡಬೇಕು" ಎಂದಳು

ಅದಕ್ಕೆ ವ್ಯಾಸನು ಸಮ್ಮತಿಸಿ, ಧೃತರಾಷ್ಟ್ರ ಪಾಂಡು ವಿದುರರೆಂಬ ಮೂವರು ಮಕ್ಕಳನ್ನು ಹುಟ್ಟಿಸಿದನು. ಈ ವ್ಯಾಸನ ಅನುಗ್ರಹದಿಂದ ಧೃತರಾಷ್ಟ್ರನಿಗೆ ನೂರು ಮಕ್ಕಳಾದರು. ಆ ನೂರರಲ್ಲಿ ದುರ್ಯೋಧನ, ದುಶ್ಶಾಸನ, ವಿಕರ್ಣ, ಚಿತ್ರಸೇನರೆಂಬವರು ಪ್ರಧಾನರು. ಪಾಂಡುವಿಗೆ ಕುಂತಿ ಮತ್ತು ಮಾದ್ರಿಯೆಂಬ ಇಬ್ಬರು ಹೆಂಡತಿಯರಿದ್ದರು. ಆ ಪಾಂಡುವು ಒಮ್ಮೆ ಬೇಟೆಗೆ ಹೋದಾಗ, ಒಬ್ಬ ಋಷಿಯು ಜಿಂಕೆಯ ರೂಪವನ್ನು ತಾಳಿ, ಹೆಣ್ಣುಜಿಂಕೆಯೊಡನೆ ಕ್ರೀಡಿಸುತ್ತಿರಲು, ಅದನ್ನು ಬಾಣ

ದಿಂದ ಹೊಡೆದುಬಿಟ್ಟನು. ಆಗ ಜಿಂಕೆಯು ಪಾಂಡುವನ್ನು ಕುರಿತು "ಕ್ರೂರಾ! ಮೃಗರೂಪದಿಂದ ಕ್ರೀಡಿಸುತ್ತಿದ್ದ ನನ್ನನ್ನು ಆ ನನ್ನ ರತಿ ಪ್ರಯೋಜನವು ತೀರುವುದಕ್ಕೆ ಮೊದಲೇ ನೀನು ಬಾಣದಿಂದ ಹೊಡೆದೆ ಯಲ್ಲವೇ? ನಿನಗೂ ಇಂತಹ ಸ್ಥಿತಿಯು ಶೀಘ್ರದಲ್ಲಿಯೇ ಸಂಭವಿಸಲಿ" ಎಂದು ಶಾಪವನ್ನು ಕೊಟ್ಟಿತು. ಇದನ್ನು ಕೇಳಿ ಪಾಂಡುವು ದುಃಖಿತ ನಾಗಿ, ಆ ಶಾಪಭಯದಿಂದ ತಾನು ಪತ್ನಿಯಲ್ಲಿ ರಮಿಸುವುದನ್ನೇ ಬಿಟ್ಟು ಬಿಟ್ಟನು. ಆಮೇಲೆ ಅವನು ಒಮ್ಮೆ ತನ್ನ ಪತ್ನಿಯಾದ ಕುಂತಿಯನ್ನು ನೋಡಿ "ಪ್ರಿಯೇ! ನನ್ನ ಬುದ್ಧಿಮೋಹದಿಂದ ನನಗೆ ಈ ಅವಸ್ಥೆಯುಂ ಟಾಯಿತು. ಸಂತತಿಯಿಲ್ಲದವರಿಗೆ ಪುಣ್ಯಲೋಕಗಳಿಲ್ಲವೆಂದು ಪುರಾಣ ಗಳಲ್ಲಿ ಹೇಳಿದುದನ್ನು ನಾನು ಕೇಳಿರುವೆನು. ಆದುದರಿಂದ ನೀನು ನನ ಗಾಗಿ ಪುತ್ರಸಂತಾನವನ್ನು ಮಾಡಿಕೊಳ್ಳಲು ಯತ್ನಿಸು" ಎಂದನು. ಅದ ರಮೇಲೆ ಕುಂತಿಯು ಯಮನ ಅನುಗ್ರಹದಿಂದ ಯುಧಿಷ್ಠಿರನನ್ನೂ, ವಾ ಯುವಿನಿಂದ ಭೀಮನನ್ನೂ, ಇಂದ್ರನಿಂದ ಅರ್ಜುನನನ್ನೂ, ತನ್ನಲ್ಲಿ ಹುಟ್ಟಿ ಸಿಕೊಂಡಳು. ಆಗ ಪಾಂಡುವು ಕುಂತಿಯನ್ನು ಕುರಿತು "ದೇವೀ! ನಿನ್ನ ಸವತಿಯಾದ ಮಾದ್ರಿಯು ಬಹಳ ಸಾಧುಸ್ವಭಾವದವಳು. ಆದರೆ ತನಗೆ ಮಕ್ಕಳಿಲ್ಲದಿದ್ದರೆ ಲಜ್ಜೆಯಿಂದ ಕೊರಗುವಳು. ಅವಳಿಗೂ ಸಂತ ತಿಯುಂಟಾಗುವಹಾಗೆ ಮಾಡು" ಎಂದನು. ಅದರಮೇಲೆ ಕುಂತಿಯು, ಅಶ್ವಿನೀದೇವತೆಗಳ ಮೂಲಕವಾಗಿ ಆ ಮಾದ್ರಿಯಲ್ಲಿ ನಕುಲಸಹದೇವ ರೆಂಬ ಪುತ್ರರಿಬ್ಬರು ಹುಟ್ಟುವಂತೆ ಮಾಡಿದಳು.

ಹೀಗಿರುತ್ತ ಒಮ್ಮೆ ಪಾಂಡುವು, ತನ್ನ ಕಿರಿಯಹೆಂಡತಿಯಾದ ಮಾ ದ್ರಿಯು ಚೆನ್ನಾಗಿ ದೇಹಾಲಂಕಾರಗಳನ್ನು ಮಾಡಿಕೊಂಡಿದ್ದುದನ್ನು ನೋ ಡಿದಾಗ ಅವನಿಗೆ ಕಾಮಾತುರವು ಹುಟ್ಟಿ, ಅವಳೊಡನೆ ರಮಿಸಬೇಕೆಂಬ ಆಸೆ ಹುಟ್ಟಿತು. ಅವನು ಅವಳನ್ನು ಸ್ಪರ್ಶಿಸಿದೊಡನೆ ಮೃತಿಹೊಂದಿದನು. ಆಗ ಮಾದ್ರಿಯು ಕುಂತಿಯನ್ನು ನೋಡಿ "ಅಮ್ಮಾ! ನೀನು ಹಿರಿಯವಳು. ಪೂಜ್ಯಳು. ಮಕ್ಕಳನ್ನು ಎಚ್ಚರಿಕೆಯಿಂದ ರಕ್ಷಿಸುತ್ತಿರು" ಎಂದು ಹೇಳಿ ತಾನು ಪತಿಯೊಡನೆ ಚಿತೆಯನ್ನೇರಿ ಸಹಗಮನಮಾಡಿದಳು.

ಆಮೇಲೆ ಪಾಂಡುವಿದ್ದ ಅರಣ್ಯದಲ್ಲಿ ವಾಸಮಾಡುತಿದ್ದ ಮಹರ್ಷಿಗಳೆಲ್ಲರೂ ಸೇರಿ, ಪಂಚಪಾಂಡವರನ್ನೂ, ಕುಂತಿಯನ್ನೂ ಹಸ್ತಿನಾವತಿಗೆ ಕರೆತಂದು, ಧೃತರಾಷ್ಟ್ರನಿಗೂ, ವಿದುರನಿಗೂ, ಭೀಷ್ಮನಿಗೂ ಪಾಂಡುವಿನ ಮರಣವೃತ್ತಾಂತವನ್ನು ತಿಳಿಸಿದರು. ಪಾಂಡವರು ಧೃತರಾಷ್ಟ್ರನ ಪೋಷಣೆಯಲ್ಲಿರುತಿದ್ದಾಗ, ಧೃತರಾಷ್ಟ್ರನ ಮಕ್ಕಳಿಗೆ ಅವರಲ್ಲಿ ಅಸೂಯೆ ಹುಟ್ಟಿ, ಅವರನ್ನು ಅರಗಿನಮನೆಯಲ್ಲಿ ಸುಡುವುದಕ್ಕೆ ಯತ್ನಿಸಿದರು. ಆದರೆ ವಿದುರನು ಅವರನ್ನು ತಪ್ಪಿಸಿದನು. ಆಮೇಲೆ ಭೀಮನು ಹಿಡಿಂಬನನ್ನು ಕೊಂದು ಹಿಡಿಂಬೆಯೆಂಬ ಅವನ ತಂಗಿಯನ್ನು ವಿವಾಹವಾದನು. ಅವಳಲ್ಲಿ ಘಟೋತ್ಕಚನೆಂಬ ಮಗನು ಹುಟ್ಟಿದನು. ಆಮೇಲೆ ಪಾಂಡವರು ಏಕಚಕ್ರಪುರಕ್ಕೆ ಹೋದರು. ಅಲ್ಲಿಂದ ಪಾಂಚಾಲದೇಶಕ್ಕೆ ಹೋಗಿ ಅಲ್ಲಿ ದ್ರೌಪದಿಯನ್ನು ವಿವಾಹವಾದರು. ಆಮೇಲೆ ಅವರು ಕೌರವರಿಂದ ಅರ್ಧರಾಜ್ಯವನ್ನು ಪಡೆದು, ಇಂದ್ರಪ್ರಸ್ಥದಲ್ಲಿ ವಾಸಮಾಡುತಿದ್ದರು. ಆ ಐವರಿಗೂ ದ್ರೌಪದಿಯಲ್ಲಿ ಐಮುಮಂದಿ ಮಕ್ಕಳಾದರು. ಯುಧಿಷ್ಠಿರನ ಮಗನು ಪ್ರತಿವಿಂಧ್ಯನು. ಭೀಮನ ಮಗನು ಸುತಸೋಮನು. ಅರ್ಜುನನ ಮಗನು ಶ್ರುತಕೀರ್ತಿ. ನಕುಲನ ಮಗನು ಶತಾನೀಕನು. ಸಹದೇವನ ಮಗನು ಶ್ರುತಸೇನನು. ಇದಲ್ಲದೆ ಯುಧಿಷ್ಠಿರನಿಗೆ ಶೈಬ್ಯಕುಮಾರಿಯಾದ ದೇವಕಿಯೆಂಬವಳೊಡನೆ ವಿವಾಹವಾಗಿ, ಅವಳಲ್ಲಿ ಯೌಧೇಯನೆಂಬ ಮಗನು ಹುಟ್ಟಿದನು. ಭೀಮಸೇನನು ಕಾಶೀರಾಜಪುತ್ರಿಯಾದ ಜಲಂಧರೆಯೆಂಬವಳನ್ನು ಸ್ವಯಂವರದಲ್ಲಿ ವಿವಾಹವಾಗಿ, ಅವಳಲ್ಲಿ ಸರ್ವತ್ರಾತನೆಂಬ ಮಗನನ್ನು ಪಡೆದನು. ಅರ್ಜುನನು ದ್ವಾರಕೆಯಲ್ಲಿ ಕೃಷ್ಣನ ಸಹೋದರಿಯಾದ ಸುಭದ್ರೆಯನ್ನು ವರಿಸಿ ಅವಳಲ್ಲಿ ಅಭಿಮನ್ಯುವೆಂಬ ಮಗನನ್ನು ಪಡೆದನು. ನಕುಲನಿಗೆ ಚೇದಿರಾಜನ ಪುತ್ರಿಯಾದ ರೇಣುಮತಿಯಲ್ಲಿ ನಿರಮಿತ್ರನೆಂಬ ಮಗನಾದನು. ಸಹದೇವನಿಗೆ ಮದ್ರರಾಜಪುತ್ರಿಯಾದ ವಿಜಯೆಯೆಂಬವಳೊಡನೆ ಸ್ವಯಂವರದಲ್ಲಿ ವಿವಾಹವಾಗಿ ಅವಳಲ್ಲಿ ಸುಹೋತ್ರನೆಂಬ ಮಗನಾದನು. ಇದಕ್ಕೆ ಮೊದಲೇ ಭೀಮನು ಹಿಡಿಂಬೆಯೆಂಬವಳಲ್ಲಿ ಘಟೋತ್ಕಚನೆಂಬ ಮಗನನ್ನು ಪಡೆದಂತೆ, ಅರ್ಜುನನೂಕೂಡ ಉಲೂಪಿಯೆಂಬ ನಾಗಕನ್ಯೆಯಲ್ಲಿ ಇಳಾವಂತನೆಂಬ ಪುತ್ರನನ್ನೂ, ಆಮೇಲೆ

ಮಣಿಪುರ (ಮಣಲೂರು) ರಾಜನ ಮಗಳಾದ ಚಿತ್ರಾಂಗದೆಯಲ್ಲಿ ಬಭ್ರುವಾಹನನೆಂಬ ಪುತ್ರನನ್ನೂ ಪಡೆದನು. ಹೀಗೆ ಪಾಂಡವರಿಗೆ ಮೊತ್ತದಲ್ಲಿ ಹದಿಮೂರು ಮಂದಿ ಮಕ್ಕಳಾದರು. ಅರ್ಜುನನಿಗೆ ಸುಭದ್ರೆಯಲ್ಲಿ ಹುಟ್ಟಿದ ಅಭಿಮನ್ಯುವಿಗೆ ವಿರಾಟಪುತ್ರಿಯಾದ ಉತ್ತರೆಯೊಡನೆ ವಿವಾಹವಾಯಿತು. ಅಭಿಮನ್ಯುವಿಗೆ ಆ ಉತ್ತರೆಯಲ್ಲಿ ಹುಟ್ಟಿದ ಮಗುವು ಮೃತಶಿಶುವಾಗಿಯೇ ಹುಟ್ಟಿತು. ಆಗ ಕೃಷ್ಣನು ಕುಂತಿಯನ್ನು ಕರೆದು, ಆ ಮೃತಶಿಶುವನ್ನು ಅವಳ ಮಡಿಲಲ್ಲಿ ಇರಿಸಿಕೊಳ್ಳುವಂತೆ ಹೇಳಿ "ಈ ಆರುತಿಂಗಳ ಗರ್ಭವನ್ನು, ನನ್ನ ಪಾದಸ್ಪರ್ಶದಿಂದ ಬದುಕಿಸುವೆನು. ಇವನು ಅಭಿಮನ್ಯುವಿಗೇ ಹುಟ್ಟಿದನೆಂಬ ಸತ್ಯಬಲದಿಂದ ಭೂಮಿಯು ಇವನನ್ನು ಧರಿಸಿರಲಿ", ಎಂದು ಹೇಳಿ, ಕುಂತಿಯು ತೊಡೆಯಲ್ಲಿದ್ದ ಮಗುವನ್ನು ಕೃಷ್ಣನು ತನ್ನ ಕಾಲಿಂದ ಮುಟ್ಟಿದೊಡನೆ ಆ ಶಿಶುವು ಬದುಕಿಕೊಂಡಿತು. ಕೌರವಕುಲವೆಲ್ಲವೂ ಕುರುಕ್ಷೇತ್ರಯುದ್ಧದಲ್ಲಿ ಪರಿಕ್ಷೀಣವಾದಮೇಲೆ ಉತ್ತರೆಯಲ್ಲಿದ್ದ ಈ ಗರ್ಭವು ಹುಟ್ಟಿದುದರಿಂದ ಆ ಮಗುವಿಗೆ ಅಜ್ಜಿಯಾದ ಸುಭದ್ರೆಯು "**ಪರೀಕ್ಷಿತ್**" ಎಂದೇ ನಾಮಕರಣವನ್ನು ಮಾಡಿದಳು

ಓ ಜನಮೇಜಯರಾಜಾ! ಆ ಪರೀಕ್ಷಿತ್ತಿನಿಂದ ಹುಟ್ಟಿದವನೇ ನೀನು! ನಿನಗೆ ವಪುಷ್ಟಮೆಯಲ್ಲಿ ಶತಾನೀಕನೆಂದೂ, ಶಂಕುಕರ್ಣನೆಂದೂ ಮಕ್ಕಳಿಬ್ಬರಿರುವರು. ಅವರಲ್ಲಿ ಶತಾನೀಕನಿಗೆ ವಿದೇಹರಾಜಪುತ್ರಿಯೊಡನೆ ಮದುವೆಯಾಗಿ ಅವಳಲ್ಲಿ ಅಶ್ವಮೇದಧತ್ತನೆಂಬ ಪುತ್ರನಾದನು. ರಾಜೇಂದ್ರಾ! ಇದು ನಿಮ್ಮ ಪೂರುವಂಶದ ಮತ್ತು ಪಾಂಡವಕುಲದ ವಂಶಪರಂಪರೆಯು. ಈ ಪೂರುವಂಶವನ್ನು ಕೇಳಿದವರು ಪಾಪವಿಮುಕ್ತರಾಗುವರು.

ಇದು ಅರುವತ್ತುಮೂರನೆಯ ಅಧ್ಯಾಯವು.



—— { ಉಪರಿಚರವಸು ಚರಿತ್ರವು. ಇಂದ್ರಧ್ವಜೋತ್ಸವ ವೃತ್ತಾಂತವು. ಸತ್ಯವತೀ ವ್ಯಾಸ ಧೃತರಾಷ್ಟ್ರಾದಿಗಳ ಜನ್ಮ ವೃತ್ತಾಂತಗಳು. } ——

ಓ ಜನಮೇಜಯರಾಜಾ! ಹಿಂದೆ ಉಪರಿಚರನೆಂಬ ರಾಜನೊಬ್ಬನಿದ್ದನು. ಅವನು ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿದ್ದುದಲ್ಲದೆ, ವೇದಾಧ್ಯಯನಪರನೂ, ಶುಚಿಯೂ ಆಗಿದ್ದನು. ಆದರೆ ಅವನಿಗೆ ಬೇಟೆಯಲ್ಲಿ ಪ್ರೀತಿಯು ಹೆಚ್ಚು. ಕೌರವಕುಲದಲ್ಲಿ ಹುಟ್ಟಿದ ಆ ಉಪರಿಚರವಸುವು ಇಂದ್ರನ ಹೇಳಿಕೆಯಮೇರೆಗೆ ರಮಣೀಯವಾದ ಚೇದಿದೇಶವನ್ನು ತನ್ನವಶಪಡಿಸಿಕೊಂಡನು. ಈ ರಾಜನು ಆಯುಧಗಳನ್ನೆಲ್ಲ ಬಿಟ್ಟು ಆಶ್ರಮದಲ್ಲಿಯೇ ವಾಸಮಾಡುತ್ತ ತಪೋನಿರತನಾಗಿರಲು, ರಾಜನು ತನ್ನ ತಪಸ್ಸಿನಿಂದ ಇಂದ್ರಪದವಿಗೆ ಬರಲು ಅರ್ಹನಾಗಿರುವನೆಂದು ಇಂದ್ರಾದಿದೇವತೆಗಳು ಹೆದರಿ, ಅವರೆಲ್ಲರೂ ತಾವಾಗಿಯೇ ಆ ರಾಜನಲ್ಲಿಗೆ ಬಂದು ಒಳ್ಳೇ ಮೃದುಮಧುರವಾಕ್ಯಗಳಿಂದ ಅವನ ತಪಸ್ಸನ್ನು ಬಿಡಿಸುವುದಕ್ಕಾಗಿ ಹೀಗೆಂದು ಹೇಳುವರು. "ರಾಜಾ! ಭೂಮಿಯಲ್ಲಿ ಧರ್ಮವು ಕೆಟ್ಟುಹೋಗಬಾರದು. ನೀನು ಧರ್ಮವನ್ನು ನೆಲೆಗೊಳಿಸುತ್ತಿರುವುದರಿಂದಲ್ಲವೇ ಆ ಧರ್ಮವು ಜಗತ್ತನ್ನೆಲ್ಲ ಭರಿಸುತ್ತಿರುವುದು?" ಎಂದರು. ಆಮೇಲೆ ಇಂದ್ರನು ಅವನ ಮುಂದೆ ಬಂದು "ಮಹಾರಾಜಾ! ನಾನು ದೇವತೆಗಳನ್ನು ಪಾಲಿಸತಕ್ಕವನು. ಅದರಂತೆ ನೀನೂ ಭೂಲೋಕದಲ್ಲಿ ಧರ್ಮಕ್ಕೆ ಹಾನಿಬಾರದಂತೆ ಎಚ್ಚರಿಕೆಯಿಂದ ಪ್ರಜೆಗಳನ್ನು ಪಾಲಿಸ. ನೀನು ಮೊದಲು ಭೂಮಿಯಲ್ಲಿ ಧರ್ಮವನ್ನುನೆಲೆಗೊಳಿಸಿದರೆ, ಆಮೇಲೆ ಪುಣ್ಯಲೋಕಗಳು ನಿನಗೆ ತಾನಾಗಿ ಲಭಿಸುವವು. ನಾನು ಸ್ವರ್ಗದಲ್ಲಿಯೂ, ನೀನು ಭೂಮಿಯಲ್ಲಿಯೂ ಇರುವೆವಾದರೂ, ನಮ್ಮಿಬ್ಬರಿಗೆ ಸ್ನೇಹಸಂಬಂಧವುಂಟು. ನನಗೆ ನೀನು ಪ್ರಿಯಮಿತ್ರನಾಗಿರುವೆ. ಓ ರಾಜೇಂದ್ರಾ! ಹಸುವಿಗೆ ಕೆಚ್ಚಲು ಹೇಗೋ ಹಾಗೆ, ಭೂಮಿಯೆಂಬ ಧೇನುವಿಗೆ ಕೆಚ್ಚಲಿನಂತಿರುವ ಫಲವತ್ತಾದ ದೇಶವೊಂದನ್ನು ನೀನು ನಿನ್ನ ವಾಸಸ್ಥಾನವಾಗಿ ಮಾಡಿಕೊಂಡು ಅಲ್ಲಿ ಸುಖವಾಗಿರು" ಎಂದನು.

ಓ ರಾಜಾ! ಆ ಚೇದಿದೇಶವು ಪಶುಗಳಿಗೆ ಅನುಕೂಲವಾದುದು. ಧನಧಾನ್ಯಗಳಿಂದ ಸಮೃದ್ಧವಾದುದು. ಅದು ಪುಣ್ಯಕ್ಷೇತ್ರವೆನಿಸಿದೆ. ಸುಖವಾಗಿ ನೀನು ಅದನ್ನು ರಕ್ಷಿಸಬಹುದು. ಕ್ರೂರಜಂತುಗಳಿಲ್ಲದೆ ಸದಾ ಶಾಂತವಾಗ, ಭೋಗಾರ್ಹಗಳಾದ ಭೂಸಾರಗುಣಗಳಿಂದ ಕೂಡಿರುವುದು ಮತ್ತು ಆ ದೇಶವು ಯಾವಾಗಲೂ ಧನ ಕನಕ ರತ್ನಗಳಿಂದ ತುಂಬಿ ವಿಶೇಷವಾದ ಅರ್ಥಸಂಪತ್ತಿಯುಳ್ಳದು. ಹೀಗೆ ಸರ್ವಸಂಪತ್ಸಮೃದ್ಧವಾದ ಚೇದಿದೇಶದಲ್ಲಿ ವಾಸಮಾಡುತ್ತಿರು. ಈ ದೇಶದ ಗ್ರಾಮಗಳಲ್ಲಿರುವ ಜನರೆಲ್ಲರೂ ಧರ್ಮನಿರತರು. ಸುಲಭಸಂತೋಷಿಗಳು, ಬಹಳ ಯೋಗ್ಯರು. ಈ ದೇಶದ ಜನರು ಕೇವಲ ವಿನೋದಕ್ಕಾಗಿಯಾದರೂ ಅಸತ್ಯವನ್ನು ನುಡಿಯುವವರಲ್ಲ. ಇನ್ನು ಇವರಲ್ಲಿ ಮೋಸಬುದ್ಧಿಯಿಲ್ಲವೆಂಬುದನ್ನು ಹೇಳಬೇಕಾದುದೇನು? ತಂದೆಯಿರುವಾಗ ಮಕ್ಕಳು ಈ ದೇಶದಲ್ಲಿ ವಿಭಾಗಕ್ಕಾಗಿ ಹೋರಾಡುವವರಲ್ಲ. ತಂದೆಯನ್ನು ಭಾಗಕ್ಕಾಗಿ ಪೀಡಿಸುವವರೂ ಅಲ್ಲ. ಪುತ್ರರು ಹಿರಿಯರಿಗೆ ಸದಾ ಸೇವೆಮಾಡುವುದರಲ್ಲಿಯೇ ಆಸಕ್ತರಾಗಿರುವರು. ಬಡವಾದ ಎತ್ತುಗಳಮೇಲೆ ಈ ದೇಶದವರು ನೊಗಗಳನ್ನು ಏರಿಸುವವರಲ್ಲ ಅಂತವುಗಳನ್ನು ಸುಖವಾಗಿಟ್ಟು ಪೋಷಣೆಮಾಡುವರು ಇಲ್ಲಿ ಎಲ್ಲಾ ವರ್ಣದವರೂ ತಮ್ಮತಮ್ಮ ಧರ್ಮದಲ್ಲಿಯೇ ನೆಲೆಗೊಂಡಿರುವರು. ಓ ರಾಜಾ! ಮೂರು ಲೋಕಗಳಲ್ಲಿಯೂ ನಿನಗೆ ತಿಳಿಯದ ಸಂಗತಿಯಿಲ್ಲ. ನಿನ್ನ ಗುಣಕ್ಕೆ ನಾನು ಮೆಚ್ಚಿದೆನು. ಆಕಾಶದಲ್ಲಿ ಸಂಚರಿಸುವುದಕ್ಕೆ ಅನುಕೂಲಿಸುವಂತೆ ಸ್ಫಟಿಕಮಯವಾದ ವಿಮಾನವೊಂದನ್ನು ನಿನಗೆ ನಾನು ಕೊಡುವೆನು. ದೇವತೆಗಳಿಗೆಮಾತ್ರವೇ ಲಭ್ಯವಾದ ಆ ದಿವ್ಯವಿಮಾನವು ಇದೋ! ಈಗಲೇ ನಿನ್ನಲ್ಲಿಗೆ ಬರುವುದು ಮನುಷ್ಯವರ್ಗದಲ್ಲಿ ಅಂತಹ ವಿಮಾನವನ್ನೇರುವ ಭಾಗ್ಯವು ನಿನಗೊಬ್ಬನಿಗೇ ಎಂದು ತಿಳಿ. ನೀನು ಆ ವಿಮಾನವನ್ನೇರಿ ಮನುಷ್ಯರೂಪದಿಂದಿರುವ ದೇವತೆಯಂತೆ ಯಾವಾಗಲೂ ಆಕಾಶದಲ್ಲಿ ಸಂಚರಿಸು. ಮತ್ತು ಇದೋ! ನಿನಗೆ ವಿಜಯಪ್ರದವಾದ ಪದ್ಮಮಾಲಿಕೆಯೊಂದನ್ನು ಕೊಡುವೆನು. ಇದರ ಹೂಗಳು ಎಂದಿಗೂ ಬಾಡುವುದಿಲ್ಲ. ಇದನ್ನು ನೀನು ಯುದ್ಧಕಾಲದಲ್ಲಿ ಧರಿಸಿದರೆ, ನಿನಗೆ ಯಾವ ಆಯುಧಗಳಿಂದಲೂ ಗಾಯವಿಲ್ಲದಂತೆ ಇದು ಕಾಪಾಡುವು

ದು. ರಾಜೇಂದ್ರಾ! ಇಂದ್ರಮಾಲೆಯೆಂದು ಪ್ರಸಿದ್ಧಿಹೊಂದಿ, ಸಮಸ್ತಸೌಭಾಗ್ಯಪ್ರದವೆನಿಸಿ, ಎಣೆಯಿಲ್ಲದ ಈ ಮಾಲೆಯೇ ನಿನಗೆ ಈ ಲೋಕದಲ್ಲಿ ಅಸಾಧಾರಣಲಕ್ಷಣವಾಗಿರುವುದು" ಎಂದನು.

ಹೀಗೆಂದು ಹೇಳಿ ಇಂದ್ರನು, ಅವನಿಗೆ ಬೇರೊಂದು ಪ್ರಿಯವಸ್ತುವನ್ನೂ ಕೊಡಬೇಕೆಂದು ಯೋಚಿಸಿ, ಶಿಷ್ಟರನ್ನು ಕಾಪಾಡತಕ್ಕ ಒಂದು ವೇಣುದಂಡವನ್ನು (ಬಿದಿರುಕೋಲನ್ನು) ಅವನ ಕೈಗೆ ಕೊಟ್ಟನು. ಹೀಗೆ ಇಂದ್ರನು, ಆ ಉಪರಿಚರನನ್ನು ಯಾವ ವಿಧದಿಂದಲಾದರೂ ಸಂತೋಷಪಡಿಸಿ ಅವನ ತಪಸ್ಸನ್ನು ಬಿಡಿಸಬೇಕೆಂದು ಇಷ್ಟೆಲ್ಲಾ ಪ್ರಯತ್ನಗಳನ್ನು ಮಾಡಿದಮೇಲೆ, ಕೊನೆಗೆ ರಾಜನು ಇಂದ್ರನ ಮಾತಿಗೆ ಸಮ್ಮತಿಸಿ ತನ್ನ ತಪಸ್ಸಿನಿಂದ ನಿವೃತ್ತನಾದನು. ದೇವೇಂದ್ರನೂ ಕೃತಾರ್ಥನಾಗಿ ದೇವತೆಗಳೊಡನೆ ಸ್ವರ್ಗಕ್ಕೆ ಹಿಂತಿರುಗಿದನು.

ಇಂದ್ರಧ್ವಜೋತ್ಸವ ವೃತ್ತಾಂತವು.

ಓ ಜನಮೇಜಯರಾಜಾ! ಆಮೇಲೆ ಆ ರಾಜನು ಚೇದಿದೇಶಕ್ಕೆ ಪ್ರಭುವಾಗಿ, ಇಂದ್ರನು ತನಗೆ ಕೊಟ್ಟ ಮಾಲೆಯನ್ನು ಯಾವಾಗಲೂ ಆಭರಣದಂತೆ ಧರಿಸಿ, ಅವನು ಕೊಟ್ಟ ವಿಮಾನವನ್ನೇರಿ ನಿಜನಗರಕ್ಕೆ ಹೋದನು. ಆಮೇಲೆ ಇಂದ್ರನ ಸಂತೋಷಾರ್ಥವಾಗಿ ರಾಜನು ಅವನು ಕೊಟ್ಟ ವೇಣುದಂಡಕ್ಕೆ ಪುರಪ್ರವೇಶವೆಂಬ ಒಂದು ಮಹೋತ್ಸವವನ್ನು ಮಾಡಿಸಿದನು. ಓ ರಾಜಾ! ಅಂದಿನಿಂದಾರಂಭಿಸಿ ಈಗಲೂಕೂಡ ಎಲ್ಲಾ ರಾಜಶ್ರೇಷ್ಠರೂ ಆ ಉಪರಿಚರನು ನಡೆಸಿದಂತೆಯೇ ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ ಕೋಲಿಗೆ ನಗರಪ್ರವೇಶೋತ್ಸವವೆಂಬ ಒಂದು ಹಬ್ಬವನ್ನು ದೊಡ್ಡಯಾಗರೂಪವಾಗಿ ನಡೆಸುವರು ಈ ಉತ್ಸವವಾದ ಮರುದಿನದಲ್ಲಿ ಆ ಕೋಲನ್ನು ಪೆಟ್ಟಿಗೆಯಂತೆ ಬಟ್ಟೆಯಲ್ಲಿ ಮಾಡಿದ ಬುಟ್ಟಿಗಳಲ್ಲಿಟ್ಟು, ಹೂ, ಗಂಧ, ಆಭರಣ ಮೊದಲಾದುವುಗಳಿಂದ ಅಲಂಕರಿಸಿ ರಾಜರು ಅದನ್ನು ನಾಟುವರು. ಹೀಗೆ ಪುಷ್ಪಮಾಲಿಕೆಗಳಿಂದ ಸುತ್ತಿದ ಆ ಕೋಲು ಮೂವತ್ತೆರಡು ಗೇಣುಗಳ ಉದ್ದವಿರುವುದು. ಆ ಕೋಲಿಗೆ ಸರಿಗೆಯ ಬಟ್ಟೆಗಳನ್ನು ಸುತ್ತಿ ಅಲಂಕರಿಸಿ, ಆ ಕಾಲದಲ್ಲಿ ಅನೇಕಬ್ರಾಹ್ಮಣರಿಗೆ ಅನ್ನಪಾನಗ

ಳಿಂದಲೂ, ವಸ್ತ್ರದಾನಗಳಿಂದಲೂ ತೃಪ್ತಿಯನ್ನುಂಟುಮಾಡುವರು. ಅವರಿಂದ ಪುಣ್ಯಾಹವಾಚನಗಳನ್ನು ಮಾಡಿಸುವರು. ಆರು ಗಜಗಳ ಎತ್ತರಕ್ಕೆರುವಂತೆ ಅದನ್ನು ಒಂದು ಹಳ್ಳದಲ್ಲಿ ನಾಟುವರು. ಈ ಸಮಯದಲ್ಲಿ ಶಂಖ, ಭೇರಿ, ಮೃದಂಗಾದಿಮಂಗಳವಾದ್ಯಗಳು ನುಡಿಸಲ್ಪಡುವುವು. ಓ ರಾಜಾ! ದೇವೇಂದ್ರನು ತಾನೇ ಆ ಕೋಲಿನ ರೂಪದಿಂದ ಪೂಜಿಸಲ್ಪಡುವನು. ಮಹಾತ್ಮನಾದ ಉಪರಿಚರವಸುವಿನಲ್ಲಿ ತನಗಿರುವ ಪ್ರೀತಿಯಿಂದ ದೇವೇಂದ್ರನು ತಾನಾಗಿಯೇ ಬಂದು ಆ ದಂಡದಲ್ಲಿ ನೆಲೆಸಿ ಪೂಜೆಗಳನ್ನು ಕೈಕೊಳ್ಳುವನು. ಮಣಿಭದ್ರನೇ ಮೊದಲಾದ ಯಕ್ಷರೂ ಆಗ ದೇವತೆಗಳೊಡನೆ ಪೂಜಿಸಲ್ಪಡುವರು. ಈ ಕಾಲದಲ್ಲಿ ಪುರಜನರೂ, ಗ್ರಾಮದವರೂ, ವಸ್ತ್ರಾಭರಣಗಳಿಂದಲೂ, ಪುಷ್ಪಚಂದನಾದಿಗಳಿಂದಲೂ ಅಲಂಕರಿಸಿಕೊಂಡು, ತಮ್ಮತಮ್ಮ ಇಷ್ಟಮಿತ್ರರೊಡನೆ ಅಲ್ಲಿ ಬಂದು ಸೇರುವರು. ಜನಗಳೆಲ್ಲರೂ ಬಡಬಗ್ಗರಿಗೂ, ಯಾಚಕರಿಗೂ ನಾನಾವಿಧದಾನಗಳನ್ನು ಮಾಡುವರು. ರಾಜಾಜ್ಞೆಯಂತೆ ಆಗ ಜನರೆಲ್ಲರೂ ಅನೇಕಚರ್ಮದ ತಿತ್ತಿಗಳಿಂದ ಒಬ್ಬರಮೇಲೊಬ್ಬರು ವಿನೋದದಿಂದ ನೀರನ್ನು ಎರೆಚಾಡುವರು. ಮತ್ತು ರಾಜನಲ್ಲಿ ಬಹು ಸಲಿಗೆಯಿಂದ ಮಾತಾಡುತ್ತ ಅವನನ್ನು ವಿನೋದಗೊಳಿಸುವರು. ಮತ್ತು ಆ ಕಾಲದಲ್ಲಿ ಸೂತರು, ಮಾಗಧರು, ನಟರು, ನರ್ತಕರು, ಗಾಯಕರು, ಮೊದಲಾದವರೆಲ್ಲರೂ ಬಹಳ ಸಂತೋಷದಿಂದ ತಮ್ಮತಮ್ಮ ಕಲೆಗಳನ್ನು ತೋರಿಸಿ ಸಂತೋಷಗೊಳಿಸುವರು. ಹೀಗೆ ಆ ವಸುರಾಜನು ತನ್ನ ಅಂತಃಪುರಸ್ತ್ರೀಯರೊಡನೆಯೂ, ಮಂತ್ರಿಗಳೊಡನೆಯೂ ಸೇರಿ, ಸರ್ವಾಭರಣಭೂಷಿತನಾಗಿ, ಒಳ್ಳೇ ಜಾತಿಯ ಇಂಗುಲಿಕವನ್ನು ಮೈಗೆ ಲೇಪಿಸಿಕೊಂಡು ಅತಿಸಂತೋಷದಿಂದಿದ್ದನು ರಾಜನು ಈ ಉತ್ಸವವನ್ನು ಎಷ್ಟು ವೈಭವದಿಂದ ನಡೆಸಿದನೋ, ಹಾಗೆಯೇ ಅವನ ದೇಶದ ಎಲ್ಲಾ ಭಾಗಗಳಲ್ಲಿಯೂ ಜನರು ಅಲ್ಲಲ್ಲಿ ಈ ಉತ್ಸವವನ್ನು ಕೊಂಡಾಡಿದರು. ಈ ರಾಜನು ನಡೆಸಿದ ಪೂಜೆಗೆ ದೇವೇಂದ್ರನೂ ಬಹಳ ಸಂತೋಷಗೊಂಡು, ಹರಿಗಳೆಂಬ ಕುದುರೆಗಳಮೇಲೆ ಹೂಡಿದುದಾಗಿಯೂ, ಆಕಾಶದಲ್ಲಿ ಸಂಚರಿಸತಕ್ಕುದಾಗಿಯೂ ಇರುವ ತನ್ನ ವಿಮಾನದಮೇಲೆ ತನ್ನ ಪತ್ನಿಯಾದ ಶಚೀದೇವಿಯೊಡನೆ ಕುಳಿತು, ಅಪ್ಸರಸ್ಸಮೂಹಗಳಿಂದ ಪರಿವೃತನಾಗಿ,

ರಾಜಶ್ರೇಷ್ಠನಾದ ಆ ವಸುವಿನಲ್ಲಿಗೆ ಬಂದು, ಅಲ್ಲಿದ್ದವರೆಲ್ಲರೂ ಕೇಳುವಂತೆ ಹೀಗೆಂದು ಹೇಳುವನು. "ಈ ಚೇದಿರಾಜನಂತೆ ಬೇರೆ ರಾಜರೇ ಆಗಲಿ, ಇತರ ಜನರೇ ಆಗಲಿ, ಇಂತಹ ಉತ್ಸವವನ್ನು ಮಾಡಿ, ನನ್ನನ್ನು ಪೂಜಿಸಿದಪಕ್ಷದಲ್ಲಿ, ಅವರಿಗೂ, ಅವರ ದೇಶದ ಮೊತ್ತಕ್ಕೂ ಸಂಪತ್ತೂ, ಜಯವೂ ಉಂಟಾಗಲಿ! ಅವರ ದೇಶವೆಲ್ಲವೂ ಸಮೃದ್ಧವಾಗಿ, ಅಲ್ಲಿನವರಿಗೆ ನಿತ್ಯಸಂತೋಷವಿರಲಿ! ಆ ದೇಶದಲ್ಲಿ ನಾನಾಬಗೆಯ ಪೈರುಪಚ್ಚೆಗಳೆಲ್ಲವೂ ಪೂರ್ಣವಾಗಿದ್ದು, ಅಲ್ಲಿನ ಜನರಿಗೆ ಭೂತ ಪ್ರೇತ ಪಿಶಾಚಾದಿಗಳಿಂದ ಯಾವ ಹಾನಿಯೂ ಇಲ್ಲದಿರಲಿ!" ಎಂದನು.

ಹೀಗೆ ದೇವೇಂದ್ರನು ತಾನಾಗಿ ಬಂದು ಆ ವಸುರಾಜನನ್ನು ಗೌರವಿಸಿ, ತನ್ನ ಸ್ಥಳಕ್ಕೆ ಹಿಂತಿರುಗಿಹೋದನು. ಲೋಕದಲ್ಲಿ ಯಾವ ಜನರು ಈ ಇಂದ್ರೋತ್ಸವವನ್ನು ನಡೆಸಿ, ಆ ಕಾಲದಲ್ಲಿ ಧನ ಕನಕ ರತ್ನಾದಿಗಳನ್ನು ದಾನಮಾಡುವರೋ, ಅವರು ಉಪರಿಚರರಾಜನಂತೆಯೇ ಪೂಜ್ಯರಾಗುವರು. ಹೀಗೆ ಆ ವಸುರಾಜನು ಇಂದ್ರೋತ್ಸವವನ್ನು ನಡೆಸಿ, ಆಗ ಕೇಳಿದವರಿಗೆ ಕೇಳಿದುದನ್ನೆಲ್ಲ ಕೊಟ್ಟು, ಇಂದ್ರನಿಂದಲೂ ಪೂಜಿತನಾಗಿ, ಆ ಚೇದಿದೇಶದಲ್ಲಿದ್ದಂತೆಯೇ ಅಖಂಡವಾದ ಸಮಸ್ತಭೂಮಿಯನ್ನೂ ಧರ್ಮದಿಂದ ಪಾಲಿಸುತಿದ್ದನು. ಅಲ್ಲದೆ, ಇಂದ್ರನಲ್ಲಿ ತನಗಿದ್ದ ಭಕ್ತಿಯಿಂದ ಆ ಮಹೋತ್ಸವವನ್ನು ತಪ್ಪದೆ ಪ್ರತಿವರ್ಷವೂ ನಡೆಸುತಿದ್ದನು

ಈ ರಾಜನಿಗೆ ಐದುಮಂದಿ ಮಕ್ಕಳಾದರು. ಅವರೆಲ್ಲರೂ ಅಸಾಧಾರಣ ವೀರ್ಯವುಳ್ಳವರು. ಮಹಾ ತೇಜಸ್ವಿಗಳೆನಿಸಿದ್ದರು. ರಾಜನು ಈ ಐದುಮಂದಿ ಪುತ್ರರನ್ನೂ ಬೇರೆಬೇರೆ ರಾಜ್ಯಗಳಲ್ಲಿರಿಸಿ ಪಟ್ಟಾಭಿಷೇಕವನ್ನು ನಡೆಸಿದನು. ಮಗಧರಾಜರಲ್ಲಿ ಹೆಸರುಗೊಂಡ ಮಹಾರಥನಾದ ಬೃಹದ್ರಥನು, ಪ್ರತ್ಯಗ್ರಹನು, ಮಣಿವಾಹನನೆಂಬ ನಾಮಾಂತರವುಳ್ಳ ಕುಶಾಂಬನು, ಮತ್ಸಿಲ್ಲನು, ಅಪಾರತೇಜಸ್ವಿಯಾದ ವಸು, ಇವರೇ ಆ ವಸುರಾಜನ ಐದುಮಂದಿ ಪುತ್ರರು. ಈ ರಾಜಕುಮಾರರು ತಮ್ಮತಮ್ಮ ಹೆಸರಿನಿಂದಲೇ ರಾಜ್ಯಗಳನ್ನೂ, ಪಟ್ಟಣಗಳನ್ನೂ ಸ್ಥಾಪಿಸಿದರು. ಇವರಿಂದ ಬೇರೆಬೇರೆ ರಾಜವಂಶಗಳೂ ಉಂಟಾಗಿ, ಬಹುಕಾಲದವರೆಗೆ ಅನುಸ್ಯೂತವಾಗಿ

ನಡೆಯಿತು. ಅವರೂ ಚಿರಕಾಲದವರೆಗೆ ರಾಜ್ಯವನ್ನಾಳುತಿದ್ದರು. ಮಹಾತ್ಮನಾದ ವಸುರಾಜನು ಆಗಾಗ ಸ್ಫಟಿಕವಿಮಾನವನ್ನೇರಿ, ಆಕಾಶದಲ್ಲಿ ಸಂಚರಿಸುವನು. ಒಮ್ಮೊಮ್ಮೆ ಇಂದ್ರಪ್ರಾಸಾದಕ್ಕೂ ಏರುವನು. ಆಗ ಅಪ್ಸರಸ್ಸುಗಳೆಲ್ಲರೂ ಬಂದು ಇವನನ್ನು ಸೇವಿಸುವರು. ಹೀಗೆ ಅವನು ಮೇಲೆ ಆಕಾಶಮಾರ್ಗದಿಂದ ಸಂಚರಿಸುತಿದ್ದುದರಿಂದಲೇ ಅವನಿಗೆ **ಉಪರಿಚರ**ನೆಂಬ ಹೆಸರಾಯಿತು. ಈ ರಾಜನ ಪಟ್ಟಣಕ್ಕೆ ಸಮೀಪವಾಗಿ ಶುಕ್ತಿಮತಿಯೆಂಬ ನದಿಯೊಂದು ಪ್ರವಹಿಸುತ್ತಿರುವುದು. ಪೂರ್ವದಲ್ಲಿ ಈ ನದೀಪ್ರವಾಹಕ್ಕೆ ಕೋಲಾಹಲವೆಂಬ ಪರ್ವತವೊಂದು ಚೈತನ್ಯಯುಕ್ತನಾದ ಪುರಷಾಕೃತಿಯಿಂದ ಬಂದು, ಕಾಮದಿಂದ ಆ ನದಿಯನ್ನಡ್ಡಗಟ್ಟಿ ನಿಂತಿತಂತೆ! ಆಗ ರಾಜನು ಆ ಪರ್ವತವನ್ನು ಕಾಲಿಂದ ಚಿಮ್ಮಲು, ಆ ಸ್ಥಳದಲ್ಲಿ ಪರ್ವತವು ರಂಧ್ರಬಿದ್ದು, ಆ ಮಾರ್ಗವಾಗಿ ನದಿಯು ಹರಿದುಹೋಯಿತಂತೆ! ಆ ಪರ್ವತಸಂಬಂಧದಿಂದ ಆ ನದಿಯಲ್ಲಿ ಒಂದು ಗಂಡು, ಒಂದು ಹೆಣ್ಣು ಹೀಗೆ ಎರಡು ಮಕ್ಕಳು ಹುಟ್ಟಿದುವು. ಆಗ ಆ ನದಿಯು ತನ್ನನ್ನು ಕೋಲಾಹಲನಿಂದ ಬಿಡಿಸಿದುದಕ್ಕಾಗಿ ಸಂತೋಷಗೊಂಡು, ಆ ಮಕ್ಕಳೆರಡನ್ನೂ ವಸುರಾಜನಿಗೇ ಒಪ್ಪಿಸಿ "ರಾಜೇಂದ್ರಾ! ಇದೋ! ಈ ಕನ್ಯೆಯನ್ನು ನೀನು ನಿನ್ನ ಪಟ್ಟಮಹಿಷಿಯನ್ನಾಗಿಯೂ, ಈ ಗಂಡು ಮಗುವನ್ನು ನಿನಗೆ ಸೇನಾಪತಿಯನ್ನಾಗಿಯೂ ಪ್ರತಿಗ್ರಹಿಸು" ಎಂದಳು. ಅದರಂತೆಯೇ ರಾಜನು ಗಿರಿಕೆಯೆಂಬ ಆ ಕನ್ಯೆಯನ್ನು ತನಗೆ ಪ್ರಧಾನಪತ್ನಿಯನ್ನಾಗಿಯೂ, ಆ ಕುಮಾರನನ್ನು ತನಗೆ ಸೇನಾಪತಿಯನ್ನಾಗಿಯೂ ಮಾಡಿಟ್ಟುಕೊಂಡನು. ಆಮೇಲೆ ಆ ಗಿರಿಕೆಯೆಂಬವಳು ಒಮ್ಮೆ ಋತುಸ್ನಾನಮಾಡಿ ಶುಚಿಯಾಗಿ ಬಂದು, ತನಗೆ ಸಂತಾನದಲ್ಲಿರುವ ಕೋರಿಕೆಯನ್ನು ರಾಜನಲ್ಲಿ ವಿಜ್ಞಾಪಿಸಿಕೊಂಡಳು. ಆದರೆ, ಆ ದಿನವೇ ಆ ರಾಜನ ಪಿತೃಗಳು ಆತುರದಿಂದ ಆ ರಾಜನ ಬಳಿಗೆ ಬಂದು, ಅವನನ್ನು ಕುರಿತು ಪ್ರೇಮದಿಂದ "ನೀನು ಕಾಡಿನಲ್ಲಿ ಹೆಚ್ಚುತ್ತಿರುವ ದುಷ್ಟಮೃಗಗಳನ್ನು ಕೊಂದು ಬಾ! ಈಗಲೇ ಹೊರಡು" ಎಂದರು. ಆಗ ರಾಜನು ಪಿತೃಗಳ ಆಜ್ಞೆಯನ್ನು ಮೀರಲಾರದೆ, ಆ ಗಿರಿಕೆಯನ್ನು ಬಿಟ್ಟು ಬೇಟೆಗಾಗಿ ಹೊರಟುಬಿಟ್ಟನು. ಆದರೆ, ತನ್ನ ಪತ್ನಿಯಾದ ಗಿರಿಕೆಯು ಪ್ರಾರ್ಥನೆಯಮೇಲೆ, ಅವನಿಗೆ ಕಾಮೋ

ದ್ರೇಕವು ಅಂಕುರಿಸಿತು. ಅವಳನ್ನು ಸ್ಮರಿಸುತ್ತಿದ್ದಹಾಗೆಯೇ ಬೇಟೆಯಾಡ ತೊಡಗಿದನು. ಹೀಗೆ ಬೇಟೆಯಾಡುತ್ತಿರುವಾಗ ದಾರಿಯಲ್ಲಿ ಒಂದು ರಮ್ಯ ವಾದ ವನವು ಕಾಣಿಸಿತು. ಇವನಿಗಾದರೋ, ಅತ್ಯಂತ ರೂಪವತಿಯಾಗಿ ಸಾಕ್ಷಾಲ್ಲಕ್ಷ್ಮೀದೇವಿಯಂತಿದ್ದ ತನ್ನ ಪತ್ನಿಯ ಚಿಂತೆಯು ಮೇಲೆಮೇಲೆ ಅಧಿಕವಾಗುತ್ತ ಬಂದಿತು. ಅವಳನ್ನು ನೆನೆಸಿಕೊಂಡೇ ಆ ವನವನ್ನೂ ನೋಡಿದನು. ಆ ವನದ ಸೊಗಸನ್ನು ಕೇಳಬೇಕೇ? ಅಸುಗೆ, ಸಂಪಗೆ, ಮಾವು, ಅದಿಮುಕ್ತೆ, ಹಲಸು, ಹೊನ್ನೆ, ಪಗಡೆ, ಪಾದರಿ, ಕರ್ಣಿಕಾರ, ಚಂದನ, ತೆಂಗು, ಮತ್ತಿ, ಮೊದಲಾಗಿ ರುಚಿಯಾದ ಫಲಗಳಿಂದಲೂ, ಸುಗಂಧಪುಷ್ಪಗಳಿಂದಲೂ ತುಂಬಿದ ಮರಗಿಡಗಳು ಅಲ್ಲಿ ಸಮೃದ್ಧವಾಗಿರು ವುವು. ಅಲ್ಲಲ್ಲಿ ಕೋಗಿಲೆಗಳೂ, ಭ್ರಮರಗಳೂ ಕಿವಿಗಿಂಪಾಗಿ ಕೂಗುತ್ತಿ ರುವುವು. ಈ ವನವನ್ನು ಅವನು ಆಸೆಯಿಂದ ನೋಡಿದನು. ಇದರಮೇಲೆ ಅದು ವಸಂತಕಾಲವಾಗಿಯೂ ಇದ್ದಿತು. ಚೈತ್ರರಥವೆಂಬ ಕುಬೇರನ ಉದ್ಯಾನಕ್ಕೆ ಸಮಾನವಾಗಿದ್ದ ಆ ವನಸನ್ನಿವೇಶವನ್ನು ನೋಡಿದಮೇಲೆ, ಅವನ ಮನಸ್ಸಿನಲ್ಲಿದ್ದ ಕಾಮವು ಮತ್ತಷ್ಟು ಉದ್ರೇಕಹೊಂದಿತು. ಗಿರಿಕೆಯ ಚಿಂತೆಯು ಪ್ರಬಲವಾಯಿತು. ಆದರೆ ಅವಳನ್ನು ಪ್ರತ್ಯಕ್ಷವಾಗಿ ಕಾಣದೆ, ಕಾಮತಾಪದಿಂದ ಕುದಿಯುತ್ತ, ಮುಂದೆಹೋಗುವಾಗ, ಅಲ್ಲಿ ಹೂಗಳಿಂದ ಲೂ, ಚಿಗುರುಗಳಿಂದಲೂ ತುಂಬಿ ರಮಣೀಯವಾದ ಅಶೋಕವೃಕ್ಷವೊಂ ದು ಕಾಣಿಸಿತು. ರಾಜನು ಆ ಮರದಡಿಯಲ್ಲಿ ವಿಶ್ರಾಂತಿಗಾಗಿ ಕುಳಿತನು. ಅವನು ಸುಖಾಸೀನನಾಗಿ ಮರದ ನೆರಳಲ್ಲಿ ಕುಳಿತಿರುವಾಗ, ಮಕರಂದವಾ ಸನೆಯಿಂದಲೂ, ಪುಷ್ಪಗಂಧದಿಂದಲೂ ಕೂಡಿದ ತಂಗಾಳಿಯು ಇವನ ಮೇಲೆ ಬೀಸಿ, ಇವನಿಗೆ ಮತ್ತಷ್ಟು ಆನಂದವಾಯಿತು ಪತ್ನಿಯ ಸ್ಮರಣೆ ಬಂದಹಾಗೆಲ್ಲ ಅವನಿಗೆ ಕಾಮಾಗ್ನಿಯೂ ಮಿತಿಮೀರಿತು. ಇವನಿಗೆ ಒಳ್ಳೇ ಯೌವನಕಾಲವೂ ಆಗಿದ್ದುದರಿಂದ ರೇತಸ್ಸು ಸ್ಖಲನವಾಯಿತು. ಅವನು ತನ್ನ ರೇತಸ್ಸನ್ನು ವ್ಯರ್ಥವಾಗಿಸಬಾರದೆಂದು ಯೋಚಿಸಿ, ಅದನ್ನು ಒಂದು ಮರದ ಎಲೆಯಲ್ಲಿ ಗ್ರಹಿಸಿ, ಅದಕ್ಕೆ ತನ್ನ ಉಂಗುರದಿಂದ ಮುದ್ರೆಯ ನ್ನು ಹಾಕಿ (ರಕ್ಷಣೆಯನ್ನು ಮಾಡಿ) ಅಶೋಕವೃಕ್ಷದ ಕೆಂಪಾದ ಚಿಗುರುಗ ಳಿಂದಲೂ, ಪುಷ್ಪಗಳಿಂದಲೂ ಸುತ್ತಿ ಕಟ್ಟಿಟ್ಟನು. ಧರ್ಮಸೂಕ್ಷ್ಮವನ್ನು

ಬಲ್ಲವನೂ, ಸಮರ್ಥನೂ ಆದ ಆ ರಾಜನು, ತನ್ನ ಪತ್ನಿಯ ಋತುಸ್ನಾನವೂ, ತನ್ನ ರೇತಸ್ಸೂ ವ್ಯರ್ಥವಾಗಿಹೋಗಬಾರದೆಂದು ತನ್ನಲ್ಲಿ ತಾನೇ ಬಾರಿಬಾರಿಗೂ ವಿಚಾರಮಾಡಿ ತನ್ನ ವೀರ್ಯವು ಎಂತಹ ಸಂದರ್ಭದಲ್ಲಿಯೂ ಹೀಗೆ ವಿಫಲವಾಗತಕ್ಕುದಲ್ಲವೆಂಬುದನ್ನೂ ತಿಳಿದು, ಅದನ್ನು ತನ್ನ ಪಟ್ಟಮಹಿಷಿಗೆ ಕಳುಹಿಸಿಕೊಡಲು ಅದೇ ಸಕಾಲವೆಂದೂ ಯೋಚಿಸಿ, ಅಲ್ಲಿಯೇ ಗರ್ಭಾಧಾನವೆಂಬ ಪುತ್ರೋತ್ಪತ್ತಿ ನಿಮಿತ್ತಗಳಾದ ಮಂತ್ರಗಳನ್ನು ಜಪಿಸಿ, ಅಲ್ಲಿದ್ದ ಒಂದು ಗಿಡುಗವನ್ನು ನೋಡಿ ಹೀಗೆಂದು ಹೇಳುವನು. "ರಮ್ಯವಾದ ಓ ಪಕ್ಷಿಯೇ! ನನಗಾಗಿ ನೀನು ಈ ಶುಕ್ಲವನ್ನು ತೆಗೆದುಕೊಂಡುಹೋಗಿ, ನನ್ನ ಮನೆಯಲ್ಲಿರುವ ಗಿರಿಕೆಯೆಂಬ ಪತ್ನಿಯ ವಶಕ್ಕೆ ಕೊಡಬೇಕು. ಅವಳಿಗೆ ಇದು ಋತುಕಾಲವಾದುದರಿಂದ ಆ ಕಾಲವು ಮೀರದಂತೆ ಇದನ್ನು ಅವಳಿಗೆ ಸಲ್ಲಿಸು" ಎಂದನು

ಆ ಗಿಡುಗಪಕ್ಷಿಯು ಸಹಜವಾಗಿಯೇ ಮಹಾ ವೇಗವುಳ್ಳುದಾದುದರಿಂದ, ಆ ಉಂಡೆಯನ್ನು ಕಾಲಿಂದ ಹಿಡಿದುಕೊಂಡು ಆಕಾಶಮಾರ್ಗವಾಗಿ ಹಾರಿಹೋಗುತ್ತಿತ್ತು. ಇದನ್ನು ನೋಡಿ ಮತ್ತೊಂದು ಗಿಡಗವು ಅದೇನೋ ಒಂದು ಮಾಂಸದಉಂಡೆಯೆಂದು ತಿಳಿದು ಅದನ್ನು ಕಿತ್ತುಕೊಳ್ಳುವುದಕ್ಕಾಗಿ ಇದಿರಿಸಿ ನಿಂತಿತು. ಎರಡಕ್ಕೂ ಆಕಾಶದಲ್ಲಿಯೇ ಯುದ್ಧವು ಆರಂಭಿಸಿತು. ಒಂದನ್ನೊಂದು ಕೊಕ್ಕಿನಿಂದ ಕುಕ್ಕುತ್ತಿರುವಾಗ, ಈ ಹೋರಾಟದಲ್ಲಿ ಆ ಉಂಡೆಯು ಯಮುನಾನದಿಯ ಪ್ರವಾಹದಲ್ಲಿ ಬಿದ್ದುಹೋಯಿತು. ಅದೇ ಯಮುನಾನದಿಯ ಮಡುವಿನಲ್ಲಿ ಅದ್ರಿಕೆಯೆಂಬ ಅಪ್ಸರಸಿಯೊಬ್ಬಳು ಬ್ರಹ್ಮಶಾಪದಿಂದ ಮೀನಾಗಿ ಸಂಚರಿಸುತಿದ್ದಳು. ಆಕಾಶದಿಂದ ಆ ಪಿಂಡವು ನೀರಿಗೆ ಬಿದ್ದೊಡನೆ, ಮೀನಾಗಿದ್ದ ಆ ಅದ್ರಿಕೆಯು ಬೇಗನೆ ಬಂದು, ಅದನ್ನು ಬಾಯಿಂದ ಕಚ್ಚಿಕೊಂಡು ನುಂಗಿಬಿಟ್ಟಿತು. ಹತ್ತು ತಿಂಗಳವರೆಗೆ ಆ ಮೀನಿನ ಹೊಟ್ಟೆಯಲ್ಲಿ ಆ ವೀರ್ಯವು ಬೆಳೆಯುತ್ತಿತ್ತು. ಹತ್ತನೆಯ ತಿಂಗಳಲ್ಲಿ ಆ ಮೀನು ಬೇಡರ ಬಲೆಗೆ ಸಿಕ್ಕಿಹೋಯಿತು. ಅದನ್ನು ಹಿಡಿದ ಬೆಸ್ತರಿಗೆ ಆ ಮೀನನ ಹೊಟ್ಟೆಯಲ್ಲಿ ಮನುಷ್ಯಜಾತಿಯ ಒಂದು ಹೆಣ್ಣೂ, ಒಂದು ಗಂಡು ಎರಡೂ ಸಿಕ್ಕಿದುವು. ಅವರು ಆಶ್ಚರ್ಯದಿಂದ ರಾಜನಲ್ಲಿಗೆ

ಬಂದು "ಮಹಾರಾಜಾ! ಒಂದು ಮೀನಿನ ಹೊಟ್ಟೆಯಲ್ಲಿ ಎರಡು ಮನುಷ್ಯವ್ಯಕ್ತಿಗಳು ಸಿಕ್ಕಿವೆ" ಎಂದು ತಿಳಿಸಿದರು. ಒಡನೆಯೇ ಆ ಉಪರಿಚರರಾಜನು ಗಂಡುಮಗುವನ್ನು ತಾನು ಸ್ವೀಕರಿಸಿದನು. ರಾಜಾ! ಅವನೇ ಧಾರ್ಮಿಕನೂ, ಸತ್ಯಸಂಧನೂ ಆದ ಮತ್ಸ್ಯರಾಜನು. ಇವನಿಂದ ಆ ಮೀನಿಗೂ ಶಾಪವಿಮೋಚನವಾಗಿ, ಅದು ತನ್ನ ಪೂರ್ವದ ಅಪ್ಸರೋರೂಪವನ್ನು ಹೊಂದಿತು. ಬ್ರಹ್ಮನು ಆ ಅಪ್ಸರಸಿಗೆ ಶಾಪವನ್ನು ಕೊಟ್ಟಾಗಲೇ "ನೀನು ತಿರ್ಯಗ್ಜಾತಿಯಲ್ಲಿದ್ದು ಮನುಷ್ಯಶಿಶುಗಳೆರಡನ್ನು ಪ್ರಸವಿಸಿದಮೇಲೆ ನಿನಗೆ ಶಾಪವಿಮೋಚನ" ವೆಂದು ತಿಳಿಸಿದ್ದನು. ಆದರಂತೆಯೇ ಈಗ ಅವಳಿಗೆ ಬೆಸ್ತರ ಕೈಯಿಂದ ಮರಣವಾದಮೇಲೆ ಮೊದಲಿನಂತೆ ಅಪ್ಸರೋರೂಪವುಂಟಾಯಿತು. ಅವಳು ಶಾಪಮುಕ್ತಳಾದೊಡನೆ ದಿವ್ಯರೂಪವನ್ನು ಹೊಂದಿ, ಸಿದ್ಧಚಾರಣಾದಿಗಳು ಸಂಚರಿಸತಕ್ಕ ಆಕಾಶಮಾರ್ಗವಾಗಿಹಾರಿಹೋದಳು.

ಮೀನಿನ ಹೊಟ್ಟೆಯಲ್ಲಿ ಹುಟ್ಟಿದ ಆ ಹೆಣ್ಣುಶಿಶುವು, ಕೇವಲ ಮತ್ಸ್ಯಗಂಧವುಳ್ಳುದಾಗಿಯೇ ಇದ್ದುದರಿಂದ, ಉಪರಿಚರರಾಜನು ಅದನ್ನು ಒಬ್ಬ ಬೆಸ್ತನಿಗೇ ಕೊಟ್ಟು "ಇವಳನ್ನು ನೀನು ನಿನ್ನ ಮಗಳಂತೆ ಭಾವಿಸಿ ಪೋಷಿಸು" ಎಂದು ಒಪ್ಪಿಸಿಬಿಟ್ಟನು. ಓ ಜನಮೇಜಯರಾಜಾ! ಅವಳೇ ಸತ್ಯವತಿ. ಆ ಕನ್ಯೆಯು ಬೆಸ್ತನ ಮನೆಯಲ್ಲಿದ್ದರೂ, ರೂಪದಲ್ಲಿಯೂ, ಎಲ್ಲಾ ಗುಣಗಳಲ್ಲಿಯೂ, ಶೀಲದಲ್ಲಿಯೂ ಮೇಲೆನಿಸಿಕೊಂಡಿದ್ದಳು. ಆದರೆ ಬೆಸ್ತನ ಮನೆಯಲ್ಲಿ ಕೆಲವು ಕಾಲದವರೆಗೆ ಬೆಳೆಯುತಿದ್ದ ಅವಳಿಗೆ "ಮತ್ಸ್ಯಗಂಧಿ"ಯೆಂಬ ಹೆಸರೇ ಕೆಲವುದಿನಗಳವರೆಗೆ ಪ್ರಸಿದ್ಧವಾಗಿದ್ದಿತು. ಈ ಕನ್ಯೆಯು ತನ್ನ ಸಾಕುತಂದೆಯ ಸಹಾಯಕ್ಕಾಗಿ ಅವನು ದೋಣಿಯನ್ನು ನಡೆಸುವಾಗ ತಾನೂ ಅವನ ಸಂಗಡ ಹೋಗಿ ಹೇಳಿದ ಕೆಲಸವನ್ನು ಮಾಡುತಿದ್ದಳು. ಒಮ್ಮೊಮ್ಮೆ ತಾನೇ ದೋಣಿಯನ್ನು ನಡೆಸುವಳು. ಅವಳು ಒಮ್ಮೆ ತಾನಾಗಿಯೇ ದೋಣಿಯನ್ನು ನಡೆಸಿಕೊಂಡು ಹೋಗುತ್ತಿದ್ದಾಗ, ತೀರ್ಥಯಾತ್ರೆಗಾಗಿ ಅದೇ ದೋಣಿಯಲ್ಲಿ ಪ್ರಯಾಣಮಾಡಲು ಬಂದ ಪರಾಶರಮುನಿಯು ಅವಳನ್ನು ನೋಡಿದನು. ದೇವತೆಗಳೂ ಕಾಮಿಸತಕ್ಕ ರೂಪವುಳ್ಳ ಆ ಕನ್ಯೆಯನ್ನು ನೋಡಿದೊಡನೆ, ಕೇವಲ ಜಿತೇಂದ್ರಿಯ

ನಾದ ಆ ಮುನಿಗೂ ಮನಸ್ಸು ಕದಲಿತು. ಆಗ ಆ ಮಹರ್ಷಿಯು ಆ ಕನ್ಯೆಯು ಯಾರವಳೆಂಬುದನ್ನು ತನ್ನಲ್ಲಿ ತಾನೇ ಯೋಚಿಸಿ ಧ್ಯಾನದೃಷ್ಟಿಯಿಂದ ತಿಳಿದುಕೊಂಡು ಮಾತಾಡಿಸುವನು. "ಎಲೌ ಕನ್ಯೆ! ಈ ದೋಣಿಯನ್ನು ನಡೆಸತಕ್ಕವನೆಲ್ಲಿ ಹೋಗಿರುವನು?" ಎಂದನು. ಅದಕ್ಕವಳು "ಸ್ವಾಮಿಾ! ನನ್ನ ತಂದೆಗೆ ಬೇರೆ ಗಂಡುಮಕ್ಕಳಿಲ್ಲ. ನಾನೇ ಅವನಿಗೆ ಪ್ರಿಯಪುತ್ರಿ. ಅವನಿಗೆ ಬೇಕಾದ ಸಹಾಯಮಾಡತಕ್ಕವಳೂ ನಾನೇ! ಅವನಿಗಾಗಿ ನಾನೇ ಈಗ ಈ ದೋಣಿಯನ್ನು ನಡೆಸುವೆನು. ಸಾವಿರ ಜನಗಳು ಸೇರಿದಮೇಲೆ ನಾನು ಇದನ್ನು ಬಿಡುವೆನು" ಎಂದಳು. ಅದಕ್ಕೆ ಪರಾಶರನು "ವಸುಪುತ್ರೀ! ಒಳ್ಳೆಯದು. ಬೇರೆ ಜನಗಳು ಯಾರೂ ಬಾರದಿದ್ದರೂ ನಾನೊಬ್ಬನಿರುವೆನು. ನಿನಗೆ ಬರಬೇಕಾದ ಅರ್ಧ ಸಾವಿರ ಕಲಶಗಳು (ಹೊನ್ನು) ಬಂದರೆ ಸಾಕಲ್ಲವೆ? ಉಳಿದುದೇನಿದ್ದರೂ ನಾನೊಬ್ಬನೇ ಅದನ್ನು ಕೊಟ್ಟುಬಿಡುವೆನು. ಸಾವಕಾಶವೇಕೆ? ದೋಣಿಯನ್ನು ಬೇಗನೆ ಬಿಡು" ಎಂದನು. ಅದಕ್ಕೆ ಆಕೆಯೂ ಸಮ್ಮತಿಸಿ, ದೋಣಿಯನ್ನು ನಡೆಸಲಾರಂಭಿಸಿದಳು. ಹೀಗೆ ದೋಣಿಯಲ್ಲಿ ಹೋಗುತ್ತಿರುವಾಗ ಪರಾಶರನು. ಆಗಾಗ ತನ್ನನ್ನೇ ನೋಡುತ್ತಿರುವುದನ್ನು ಕಂಡು ಆ ಕನ್ಯೆಯು "ಮಹಾತ್ಮಾ! ಹೀಗೆ ನನ್ನನ್ನೇಕೆ ನೋಡುತ್ತಿರುವೆ? ಬೆಸ್ತನ ಮಗಳಾಗಿ, ಮತ್ಸ್ಯಗಂಧಿಯೆನಿಸಿದ ನನ್ನನ್ನು "ವಸುಪುತ್ರಿ"ಯೆಂದೇಕೆ ಕರೆಯುವೆ? ಇಲ್ಲಿ ಹೀಗೆ ಕಷ್ಟಜೀವನಮಾಡುತ್ತಿರುವ ನನ್ನ ಜನ್ಮವೃತ್ತಾಂತವನ್ನೇನಾದರೂ ನೀನು ಬಲ್ಲೆಯಾ? ಹಾಗಿದ್ದರೆ ಹೇಳು" ಎಂದಳು. ಆಗ ಪರಾಶರನು "ಸುಕುಮಾರೀ! ನಿನ್ನ ರೂಪವನ್ನು ಕಂಡೊಡನೆ ನಿನ್ನ ಪ್ರೀತಿಯನ್ನು ಸಂಪಾದಿಸಬೇಕೆಂದು ನನಗೆ ಆಸೆ ಹುಟ್ಟಿತು. ಆಗಲೇ ನಾನು ನನ್ನ ದಿವ್ಯಜ್ಞಾನದಿಂದ ನಿನ್ನ ಪೂರ್ವೋತ್ತರಗಳನ್ನು ತಿಳಿದುಕೊಂಡೆನು. ನಿನಗೂ ಅದನ್ನು ತಿಳಿಸುವೆನು ಕೇಳು. ಬರ್ಹಿಷತ್ತುಗಳೆಂಬ ಕೆಲವು ಪಿತೃದೇವತೆಗಳುಂಟು. ಅವರು ಅಮೃತಪಾನವನ್ನು ಮಾಡಿದವರು. ಅವರೇ ನಿನ್ನನ್ನು ತಮ್ಮ ಮನಸ್ಸಿನಿಂದ ಹುಟ್ಟಿಸಿದವರು. ದೇವಲೋಕದಲ್ಲಿ ಅಚ್ಛೋದವೆಂಬುದೊಂದು ಸರೋವರವುಂಟು. ಆ ದಿವ್ಯಸರಸ್ಸಿನಲ್ಲಿ ನೀನು ಹುಟ್ಟಿದವಳಾದುದರಿಂದ, ನಿನಗೂ ಅಚ್ಛೋದೆಯೆಂದೇ ಹೆಸರಿದ್ದಿತು. ನೀನು ನಿನ್ನ

ಪಿತೃಗಳ ಮುಖವನ್ನೇ ಕಂಡವಳಲ್ಲ. ನೀನು ಆ ಪಿತೃಗಳ ಸಂಬಂಧವೇ ಇಲ್ಲದಂತೆ ಅದ್ರಿಜೆಯೆಂಬ ಅಪ್ಸರಸಿಯೊಡನೆ ವಿಮಾನದಲ್ಲಿ ಕುಳಿತು ಆಕಾಶ ದಲ್ಲಿಯೇ ವಿನೋದವಾಗಿ ಸಂಚರಿಸುತಿದ್ದವಳು. ಅದರಂತೆಯೇ ಮನು ಪುತ್ರನಾದ ವಸುವೆಂಬ ರಾಜನೂ ವಿಮಾನಾರೂಢನಾಗಿ ಆಕಾಶದಲ್ಲಿ ಸುತ್ತುತ್ತಿದ್ದನು. ನೀನು ನಿನ್ನ ಪಿತೃಗಳ ಸಂಕಲ್ಪದಿಂದ ಹುಟ್ಟಿದವಳು. ಪಿತೃಗಳಾರೆಂದು ತಿಳಿಯದ ನೀನು ಆ ವಸುರಾಜನನ್ನೇ ತಂದೆಯೆಂಬ ಭಾವದಿಂದ ನೋಡಿದೆ. ನಿಜವಾದ ಪಿತೃಗಳನ್ನು ಅತಿಕ್ರಮಿಸಿ, ಬೇರೊ ಬ್ಬನನ್ನು ತಂದೆಯೆಂದು ಕೋರಿದ ನಿನ್ನ ದುರ್ಭಾವನೆಯಿಂದ, ಕಾಮ ಗಮನ ಶಕ್ತಿಯುಳ್ಳವಳಾಗಿದ್ದ ನಿನಗೆ ಆ ಯೋಗಶಕ್ತಿಯು ನಷ್ಟವಾ ಯಿತು. ಆಗಲೇ ನೀನು ವಿಮಾನದಿಂದ ಕೆಳಗೆ ಬಿದ್ದೆ. ನೀನು ವಿಮಾ ನದಿಂದ ಜಾರಿ ಬೀಳುತ್ತಿರುವಾಗ, ನಿನಗೆ ಸಮೀಪವಾಗಿ ಮೂರು ವಿಮಾನಗಳು ಹೋಗುತ್ತಿರುವುದನ್ನು ನೀನು ಕಂಡೆ. ಎಲೌ ಶುಭಾಂಗೀ! ಆ ವಿಮಾನದಲ್ಲಿದ್ದವರೇ ನಿನ್ನ ನಿಜವಾದ ಪಿತೃಗಳು. ಅವರಾದರೋ ಅತಿ ಸೂಕ್ಷ್ಮವಾದ ಆಕಾರವುಳ್ಳವರು. ಕಿಟಕಿಗಳಿಂದ ಬೀಳುವ ಬಿಸಿಲಿನಿಂದ ಕಾಣುವ ಸಣ್ಣ ಧೂಳಿನಷ್ಟೇ (ತ್ರಸರೇಣುವಷ್ಟೇ) ಪ್ರಮಾಣವುಳ್ಳವರು. ಅವ ರ ದೇಹದಲ್ಲಿ ಅವಯವ ವಿಭಾಗಗಳು ಕೂಡ ಸ್ಪಷ್ಟವಾಗಿ ಕಾಣಿಸಲಾರವು. ತ ಮ್ಮೊಳಗೇ ತಾವು ಹುದುಗಿಕೊಂಡಂತೆ ಅತಿ ಸೂಕ್ಷ್ಮಾಕಾರವುಳ್ಳ ಅವರನ್ನು ಕಂಡೊಡನೆ, ತಲೆಕೆಳಗಾಗಿ ಬೀಳುತಿದ್ದ ನೀನು ಮಹಾದುಃಖದಿಂದ "ಹಾ ತಂದೇ!" ಎಂದು ಕೂಗಿದೆ. ಆಗ ಅವರು "ಭಯಪಡಬೇಡ"ವೆಂದು ನಿನಗೆ ಅಭಯವನ್ನು ಕೊಡಲು, ನೀನು ಅಲ್ಲಿಂದ ಕೆಳಗೆ ಬೀಳದೆ ಆಕಾಶದಲ್ಲಿ ಯೇ ನಿಂತೆ! ನೀನು ಅವರಲ್ಲಿ ದೈನ್ಯವನ್ನು ತೋರಿಸಿದಮೇಲೆ, ಅವರು ನಿನ್ನಲ್ಲಿ ಪ್ರಸನ್ನರಾದರು. ನಿನ್ನ ತಪ್ಪಿತದಿಂದ ನೀನು ಯೋಗಶಕ್ತಿಯನ್ನು ಕಳೆದುಕೊಂಡಿರುವುದನ್ನು ನೋಡಿ ಆ ಪಿತೃಗಳು ನಿನ್ನನ್ನು ಕುರಿತು "ಎಲೆ ಕುಮಾರೀ! ನಿನ್ನ ದೋಷದಿಂದಲೇ ನಿನಗೆ ಈ ಗತಿಯುಂಟಾಯಿ ತು. ನಿನ್ನ ಯೋಗಶಕ್ತಿಯು ಹೋಗಿ ನೀನು ಹೀಗೆ ಬೀಳುತ್ತಿರುವೆ. ದೇವತೆ ಗಳು ತಮ್ಮ ಪುಣ್ಯಪಾಪಕರ್ಮಗಳಿಗೆ ಆಗಾಗಲೇ ಆಯಾಶರೀರದಲ್ಲಿಯೇ ಫಲವನ್ನನುಭವಿಸುವರು. ಮನುಷ್ಯರಿಗಾದರೋ ಅವರು ಆಯಾ ಶರೀರದಲ್ಲಿ

ಮಾಡಿದ ಸತ್ಕರ್ಮ ದುಷ್ಕರ್ಮಗಳ ಫಲವು, ಆಯಾ ಶರೀರವಿದ್ದಾಗ ಅವರ ಅನುಭವಕ್ಕೆ ಬಾರದು. ಶರೀರಾವಸಾನವಲ್ಲಿ ಬೇರೆ ಶರೀರವನ್ನೆತ್ತಿದ ಮೇಲೆಯೇ ಅವರ ಶುಭಾಶುಭ ಫಲಗಳನ್ನು ಅನುಭವಿಸುವರು. ದೇವತೆಗಳಾಗಿರುವಾಗ ಅವರ ಕರ್ಮಗಳು ಆಗಾಗಲೇ ಫಲಿಸುವುವು. ಮನುಷ್ಯರಿಗೆ ಸತ್ತಮೇಲೆಯೇ ಆ ಫಲವು ಅನುಭವಿಸಲ್ಪಡುವುದು. ಆದುದರಿಂದ ನೀನು ಈಗ ಅಧೋಗತಿಗೆ ಬೀಳುತ್ತಿರುವೆ. ನೀನು ಕೆಳಕ್ಕೆ ಬಿದ್ದಮೇಲೆ ಜನ್ಮಾಂತರವಲ್ಲಿ ಇದರ ಫಲವನ್ನು ಅನುಭವಿಸುವೆ. ತಂದೆಯನ್ನಗಲಿದ ನೀನು ವಸುವೆಂಬ ರಾಜನನ್ನು ಪಿತೃವನ್ನಾಗಿ ಬಯಸಿದೆ. ಆದುದರಿಂದ ನೀನು ಆ ರಾಜನ ಪುತ್ರಿಯಾಗಿ ಮತ್ಸ್ಯಯೋನಿಯಲ್ಲಿ ಜನಿಸುವೆ. ಗಂಗಾಯಮುನೆಗಳ ಸಂಗಮದಲ್ಲಿ ಅದ್ರಿಜೆಯೆಂಬ ನಿನ್ನ ಸಖಿಯೂ ಈಗಾಗಲೇ ಮತ್ಸ್ಯರೂಪದಿಂದ ಹುಟ್ಟಿರುವಳು. ನೀನು ಅವಳ ಗರ್ಭದಲ್ಲಿ ವಸುರಾಜನ ಬೀಜದಿಂದ ಜನಿಸುವೆ. ನಿನಗೆ ಪರಾಶರನೆಂಬವನಿಂದ ಪುತ್ರನೊಬ್ಬನು ಜನಿಸಿ, ಅವನು ಬ್ರಹ್ಮರ್ಷಿಯೆನಿಸಿಕೊಂಡು, ವೇದವನ್ನು ನಾಲ್ಕು ಶಾಖೆಗಳನ್ನಾಗಿ ವಿಭಾಗಿಸುವನು. ಮಹಾಭಿಷಕ್ಕೆಂಬವನ ಮಗನಾದ ಶಂತನುವಿನಿಂದ, ನೀನು ವೀರರೂ, ವಿಖ್ಯಾತರೂ, ಕೀರ್ತಿವರ್ಧಕರೂ ಆದ ಚಿತ್ರಾಂಗದ ವಿಚಿತ್ರವೀರ್ಯರೆಂಬ ಬೇರೆ ಇಬ್ಬರು ಪುತ್ರರನ್ನೂ ಪಡೆಯುವೆ. ಈ ಮಕ್ಕಳನ್ನು ಹಡೆದಮೇಲೆ ತಿರುಗಿ ನೀನು ನಿನ್ನ ಲೋಕವನ್ನು ಸೇರಬಹುದು. ನೀನು ನಿನ್ನ ಪಿತೃಗಳಲ್ಲಿ ನಡೆಸಿದ ತಪ್ಪಿತದಿಂದ ಈ ಕುತ್ಸಿತಜನ್ಮವನ್ನು ನೀನು ಅನುಭವಿಸಿಯೇ ತೀರಬೇಕು. ಇಪ್ಪತ್ತೆಂಟನೆಯ ಮಹಾಯುಗವಾದ ದ್ವಾಪರದಲ್ಲಿ ನಿನಗೆ ಈ ಜನ್ಮವುಂಟಾಗುವುದು" ಎಂದರು.

ಎಲೆ ಭದ್ರೆ! ನಿನ್ನ ಪೂರ್ವಜನ್ಮಚರಿತ್ರೆಯು ಈ ವಿಧವಾದುದು. ಅದರಂತೆ ಈಗ ನೀನು ಸತ್ಯವತಿಯಾಗಿಯೇ ಹುಟ್ಟಿರುವೆ ಅದ್ರಿಕೆಯೆಂಬ ನಿನ್ನ ಸಖಿಯು ಬ್ರಹ್ಮಶಾಪದಿಂದ ಮೀನಾಗಿದ್ದು, ನಿನ್ನನ್ನು ಪ್ರಸವಿಸಿದ ಮೇಲೆ ಶಾಪವಿಮುಕ್ತಳಾಗಿ ಸ್ವಸ್ಥಾನವನ್ನು ಸೇರಿದಳು. ಅಚ್ಛೋದೆಯೆಂಬ ಕನ್ಯೆಯಾಗಿದ್ದ ನೀನು ಆ ಲಪ್ಸರಸಿಯಲ್ಲಿ ವಸುರಾಜನ ವೀರ್ಯದಿಂದ ಹುಟ್ಟಿರುವೆ. ವಸುಪುತ್ರಿಯಾದ ನಿನಗೆ ಶುಭವಾಗಲಿ. ಎಲೆ ಕಲ್ಯಾಣೀ!

ಈಗ ನಾನು ನಿನ್ನಿಂದ ವಂಶಾಭಿವೃದ್ಧಿಕರನಾದ ಪುತ್ರನನ್ನು ಕೋರುವೆನು. ನನ್ನನ್ನು ವರಿಸು" ಎಂದನು.

ಆಗ ಆ ಬೆಸ್ತರ ಹುಡುಗಿಗೆ, ತನ್ನ ಪೂರ್ವಜನ್ಮವಿಚಾರವು ಮನಸ್ಸಿಗೆ ಬಂದು, ಆಶ್ಚರ್ಯದಿಂದ ಮೈಯಲ್ಲಿ ರೋಮಾಂಚವೆದ್ದಿತು. ಆಗ ಅವಳು ಪರಾಶರನನ್ನು ಕುರಿತು "ಓ ಮಹಾತ್ಮಾ! ಅದೋ! ಅಲ್ಲಿ ನೋಡು. ನದಿಗೆ ಆಚೆಯ ದಡದಲ್ಲಿ ಎಷ್ಟೋ ಮಂದಿ ಋಷಿಗಳಿರುವರು. ಅವರೆಲ್ಲರೂ ನೋಡುತ್ತಿರುವಾಗ ನಾವಿಬ್ಬರೂ ಸೇರುವುದು ಹೇಗೆ?" ಎಂದಳು. ಈ ಮಾತನ್ನು ಕೇಳಿದೊಡನೆ ಪರಾಶರನು ತನ್ನ ಯೋಗಪ್ರಭಾವದಿಂದ ದೊಡ್ಡ ಮಂಜನ್ನು ಸೃಷ್ಟಿಸಿದನು. ಆ ಮಂಜಿನಿಂದ ಆ ಪ್ರದೇಶವೆಲ್ಲ ಕತ್ತಲೆ ಕವಿದಂತಾಯಿತು. ಇದನ್ನು ನೋಡಿ ಆ ಕನ್ಯೆಗೆ ಆಶ್ಚರ್ಯವಾಯಿತು. ಆಗಲೂ ಅವಳು ನಾಚಿಕೆಯಿಂದ ಆ ಮಹರ್ಷಿಯನ್ನು ಕುರಿತು "ಮಹಾತ್ಮಾ! ನಾನು ಯಾವಾಗಲೂ ತಂದೆಯ ಕೈಕೆಳಗಿರತಕ್ಕ ಹುಡುಗಿ! ಈಗ ನಾನು ನಿನ್ನೊಡನೆ ಸಂಬಂಧಮಾಡಿದರೆ ನನ್ನ ಕನ್ಯಾತ್ವವು ಕೆಡುವುದಲ್ಲವೇ? ನನ್ನ ಕನ್ಯಾತ್ವವನ್ನು ಕೆಡಿಸಿಕೊಂಡಮೇಲೆ ನನ್ನ ಮುಂದಿನ ಬದುಕು ಹೇಗೆ? ಓ ಬ್ರಾಹ್ಮಣೋತ್ತಮಾ! ನೀನು ಮಹರ್ಷಿ! ಒಳ್ಳೇ ಜ್ಞಾನವಂತನು. ಕನ್ಯಾತ್ವವನ್ನು ಕೆಡಿಸಿಕೊಂಡಮೇಲೆ ನಾನು ತಿರುಗಿ ಮನೆಗೆ ಹೇಗೆ ಹೋಗಲಿ! ಆದುದರಿಂದ ನಿನ್ನ ಕೋರಿಕೆಯಂತೆ ನಡೆಯಲು ನನಗೆ ಧೈರ್ಯವಿಲ್ಲ! ಇದನ್ನೆಲ್ಲ ನೀನೇ ಚೆನ್ನಾಗಿ ಪರ್ಯಾಲೋಚಿಸಿ, ಮುಂದೇನುಮಾಡಬೇಕೋ ಹಾಗೆ ನಡೆಸು" ಎಂದಳು.

ಅದಕ್ಕಾ ಪರಾಶರನು ತಿರುಗಿ ಪ್ರೀತಿಪೂರ್ವಕವಾಗಿ ಅವಳನ್ನು ಕುರಿತು "ಎಲೆ ಕನ್ಯೆ! ನೀನು ಅದಕ್ಕೊ ಹೆದರಬೇಕಾದುದಿಲ್ಲ. ನೀನು ನನ್ನ ಕೋರಿಕೆಯನ್ನು ತೀರಿಸಿದಮೇಲೆಯೂ ತಿರುಗಿ ಕನ್ಯೆಯೇ ಆಗುವೆ. ಎಲೆ ಭೀರು! ನಿನಗೆ ಬೇಕಾದ ವರವೇನಿದ್ದರೂ ಕೇಳು ಕೊಡುವೆನು. ನನ್ನ ಅನುಗ್ರಹವು ಇದುವರೆಗೆ ಯಾರಲ್ಲಿಯೂ ವ್ಯರ್ಥವಾದುದಿಲ್ಲ" ಎಂದನು. ಆಗ ಬೆಸ್ತರ ಹುಡುಗಿಯು, ತನ್ನ ದೇಹಕ್ಕೆ ಸುವಾಸನೆಯುಂಟಾಗುವಂತೆ ವರವನ್ನು ಕೇಳಿಕೊಂಡಳು. ಪರಾಶರಮುನಿಯು ಅವಳ ಇಷ್ಟದಂತೆಯೇ

ಆಗಲೆಂದು ಅನುಗ್ರಹಿಸಲು ಅವಳಲ್ಲಿ ಉತ್ತಮಜಾತಿಯ ಸ್ತ್ರೀಯರಲ್ಲಿ ಕಾಣತಕ್ಕ ಸುಗಂಧವೂ ಗುಣಶೀಲಾದಿಗಳೆಲ್ಲವೂ ತಲೆದೋರಿದುವು. ಅವಳು ಸಂತೋಷದಿಂದ ಬಂದು ಆ ಮಹರ್ಷಿಯನ್ನಪ್ಪಿಕೊಂಡಳು. ಆ ಮಹರ್ಷಿಯ ವರಪ್ರಭಾವದಿಂದ ಅವಳಿಗೆ ಭೂಮಿಯಲ್ಲಿ "ಗಂಧವತಿ"ಯೆಂದೇ ಹೆಸರು ಪ್ರಖ್ಯಾತವಾಯಿತು. ಒಂದು ಯೋಜನದೂರದಲ್ಲಿದ್ದವರಿಗೆಕೂಡ ಇವಳ ದೇಹದ ಸುಗಂಧವು ಮೂಗಿಗೆ ತಟ್ಟುತಿದ್ದುದರಿಂದ, ಅವಳು "ಯೋಜನಗಂಧಿ"ಯೆಂಬ ನಾಮಾಂತರದಿಂದಲೂ ಕರೆಯಲ್ಪಡುತಿದ್ದಳು. ಹೀಗೆ ಸತ್ಯವತಿಯು ಪರಾಶರನ ವರದಿಂದ ತುಷ್ಟಳಾಗಿ, ಅವನೊಡನೆ ರಮಿಸಿ, ಕೂಡಲೇ ಗರ್ಭವತಿಯೂ ಆದಳು. ಕೂಡಲೇ ಪ್ರಸವವೂ ಆಯಿತು. ಯಮುನಾದ್ವೀಪದಲ್ಲಿಯೇ ಆ ಪರಾಶರಪುತ್ರನಾದ ವ್ಯಾಸಮುನಿಯು ಜನಿಸಿದನು. ಆ ಕುಮಾರನು ಹುಟ್ಟಿದೊಡನೆ ತಪಸ್ಸಿನಲ್ಲಿ ಮನಸ್ಸನ್ನು ನೆಲೆಗೊಳಿಸಿ, ತಾಯಿಯ ಅನುಮತಿಯನ್ನು ಕೇಳಿ, "ಅಮ್ಮಾ! ನಾನು ತಪಸ್ಸಿಗಾಗಿ ಹೊರಡುವೆನು. ನಿನಗೆ ನನ್ನಿಂದ ಕಾರ್ಯವೇನಾದರೂ ಇದ್ದಾಗ ನನ್ನನ್ನು ನೆನೆಸು. ಒಡನೆಯೇ ಕಾಣಿಸಿಕೊಂಡು ನಿನಗೆ ಬೇಕಾದ ಕಾರ್ಯವನ್ನು ನಡೆಸಿಕೊಡುವೆನು" ಎಂದನು.

ಓ ಜನಮೇಜಯ ರಾಜಾ! ಹೀಗೆ ವ್ಯಾಸನು ಪರಾಶರನಿಗೆ ಸತ್ಯವತಿಯಲ್ಲಿ ಜನಿಸಿದವನಾದುದರಿಂದ, ಅವನಿಗೆ ದ್ವೈಪಾಯನನೆಂದು ಹೆಸರಾಯಿತು. ಅವನು ಸರ್ವಜ್ಞನಾದುದರಿಂದ ಒಂದೊಂದು ಯುಗಕ್ಕೂ ಭೂಮಿಯಲ್ಲಿ ಧರ್ಮದ ಒಂದೊಂದು ಪಾದವು ತಗ್ಗುತ್ತಬರುವುದನ್ನೂ, ಮನುಷ್ಯರ ಆಯುಸ್ಸೂ, ಬಲವೂ ಹಾಗೆಯೇ ಆಯಾಯುಗಧರ್ಮಕ್ಕೆ ತಕ್ಕಂತೆ ಕ್ಷೀಣಿಸುತ್ತ ಬರುತ್ತಿರುವುದನ್ನೂ ಯೋಚಿಸಿ, ವೇದಗಳನ್ನೂ, ಬ್ರಾಹ್ಮಣರನ್ನೂ ಅನುಗ್ರಹಿಸುವುದಕ್ಕಾಗಿ, ವೇದಗಳನ್ನು ನಾಲ್ಕು ಶಾಖೆಗಳನ್ನಾಗಿ ವಿಭಾಗಿಸಿಟ್ಟುದುದರಿಂದ ಅವನಿಗೆ ವ್ಯಾಸನೆಂಬ ಹೆಸರಾಯಿತು. ಆ ವ್ಯಾಸನಾದರೋ ಸರ್ವಸಮರ್ಥನು, ಸರ್ವಜ್ಞನು, ಸರ್ವವರಪ್ರದನು. ಆದುದರಿಂದ ಅವನು ತನ್ನ ಶಿಷ್ಯರಾದ ಸುಮಂತು, ಜೈಮಿನಿ, ಪೈಲರೆಂಬವರಿಗೂ, ತನ್ನ ಮಗನಾದ ಶುಕನಿಗೂ, ಮತ್ತು ತನ್ನ ಪ್ರಿಯಶಿಷ್ಯನಾದ ನನ

ಗೂ (ವೈಶಂಪಾಯನನಿಗೂ) ಕ್ರಮವಾಗಿ ನಾಲ್ಕು ವೇದಗಳನ್ನೂ, ಐದನೆಯ ವೇದವೆನಿಸಿದ ಮಹಾಭಾರತವನ್ನೂ ಅಧ್ಯಯನಮಾಡಿಸಿದನು. ಆ ನಾಲ್ವರೂ ಮಹಾಭಾರತಕ್ಕೆ ಮೂಲವೆನಿಸಿದ ವೇದಗಳನ್ನು ಬೇರೆಬೇರೆಯಾಗಿ ಪ್ರಕಾಶಗೊಳಿಸುತ್ತ ಬಂದರು.

[*ಯೋಗೀಶ್ವರನಾದ ಪರಾಶರನು ಯಮುನಾದ್ವೀಪದ ರಮಣೀಯ ಪ್ರದೇಶದಲ್ಲಿ, ‡ ವೀರಾಸನದಿಂದ ಕುಳಿತು ಧ್ಯಾನಾರೂಢನಾದನು. ತನ್ನ ಮುಂದೆ ಬಿಳೀ ಪಟ್ಟೆಮಡಿಯಿಂದ ಮಾಡಿದ ಗುಡಾರದೊಳಗೆ, ಮೇಲಾದ ದುಪ್ಪಟಿಯನ್ನು ಹಾಸಿದ ಮಂಚದಮೇಲೆ ತನ್ನ ಯೋಗಶಕ್ತಿಯಿಂದ ಜ್ವಲಿಸುವಂತೆ ಪ್ರಕಾಶಿಸುತ್ತ ಸುಮ್ಮನೆ ಕುಳಿತಿದ್ದ ಆ ಬೆಸ್ತರ ಕನ್ಯೆಯನ್ನು ನೋಡಿದನು. ಅವಳ ವಿಷಯದಲ್ಲಿ ಹೇಗೆ ಮಾಡಿದರೆ ಯುಕ್ತವೆಂದು ತನ್ನಲ್ಲಿ ತಾನೇ ಸಮಾಧಾನಚಿತ್ತದಿಂದ ಬಾರಿಬಾರಿಗೂ ಆಲೋಚಿಸುತ್ತಿದ್ದನು. ಆಗ ಅವನ ಮನಸ್ಸಿನಲ್ಲಿ ಮುಂದೆ ಹೇಳುವ ವಿಚಾರಗಳೆಲ್ಲ ತರಂಗತರಂಗವಾಗಿ ಹೊಳೆದುವು.

" ಈಗ ನಾನು ಯಾವರೀತಿ ಮಾಡುವುದು ಸಾಧು? ಜ್ಞಾನಿಗಳಾದ ಶಿಷ್ಟರು ನಡೆಸಿಕೊಂಡುಬಂದ ಮಾರ್ಗವೇ ಶಿಷ್ಟಾಚಾರವೆನಿಸುವುದು. ಶ್ರುತಿಸ್ಮೃತಿಗಳನ್ನು ತಿಳಿದವರೇ ಜ್ಞಾನಿಗಳೆನಿಸುವರು. ಧರ್ಮಜ್ಞರಾದ ಬ್ರಾಹ್ಮಣರು ಶ್ರೌತ ಸ್ಮಾರ್ತಗಳೆಂದು ಧರ್ಮಗಳನ್ನು ಎರಡು ವಿಧವಾಗಿ ವಿಭಾಗಿಸಿರುವರು. ಯಜ್ಞ, ದಾನ, ಅಗ್ನಿಹೋತ್ರಾದಿಗಳು ಶ್ರೌತಗಳು, ಯಮನಿಯಮಗಳಿಂದ ಕೂಡಿದ ವರ್ಣಾಶ್ರಮಧರ್ಮಗಳು ಸ್ಮಾರ್ತಗಳೆನಿಸುವುವು. (ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹಗಳೆಂಬಿವು ನಿಯಮಗಳು. ಶೌಚ, ಮನಸ್ತೃಪ್ತಿ, ತಪಸ್ಸು, ವೇದಾಧ್ಯಯನ, ಈಶ್ವರಧ್ಯಾನವೆಂಬಿವು ಯಮಗಳು). ಧರ್ಮವೆಂಬುದಕ್ಕೆ 'ಧೃ' ಧಾತುವಿನ

* ಇಲ್ಲಿಂದ ಮುಂದೆ ಕುಂಡಲಿತವಾಗಿರುವ ಸತ್ಯವತೀ ವಿವಾಹವೃತ್ತಾಂತವು ಕೆಲವು ಕೋಶಗಳಲ್ಲಿ ಮಾತ್ರ ಕಾಣುತ್ತದೆ.

‡ ಎಡಬಲಪಾದಗಳು ಮೊಳಕಾಲುಗಳ ಮೇಲಿರಿಸಿ, ಕೈಗಳೆರಡನ್ನೂ ಜೋಡಿಸಿ ಮಡಿಲಲ್ಲಿರಿಸಿ ಕುಳ್ಳಿರುವುದು ವೀರಾಸನವು.

ಮೇಲೆ ಧಾರಣವೆಂಬ ಅರ್ಥವುಂಟು. ಎಂದರೆ, ಲೋಕವನ್ನು ಧರಿಸಿರತಕ್ಕದು ಧರ್ಮವು. ಧರ್ಮವೆಂದರೆ ಕೂಡಿಸುವುದೆಂದೂ ಅರ್ಥವುಂಟು. ಈ ಅರ್ಥದಮೇಲೆ ಇಷ್ಟಫಲಗಳನ್ನು ತಂದು ಕೂಡಿಸತಕ್ಕುದು ಧರ್ಮವೆಂದೂ, ಅನಿಷ್ಟಫಲವನ್ನು ಕೂಡಿಸತಕ್ಕುದು ಅಧರ್ಮವೆಂದೂ ಆಚಾರ್ಯರಿಂದ ಉಪದೇಶಿಸಲ್ಪಟ್ಟಿದೆ. ಆದುದರಿಂದ ಇಷ್ಟಫಲವನ್ನಪೇಕ್ಷಿಸತಕ್ಕವರು ಧರ್ಮವನ್ನೇ ಆಚರಿಸಬೇಕು. ಆ ಧರ್ಮಕ್ಕೆ ಲೋಪವಿಲ್ಲದಂತೆ ಈಗ ನಾನು ಇವಳಲ್ಲಿ ಸಂಬಂಧವನ್ನು ಬೆಳೆಸಿ ಇಷ್ಟಫಲವನ್ನು ಸಾಧಿಸಬೇಕಾಗಿದೆ. ಅನೇಕವಿಧದ ವಿವಾಹಭೇದಗಳಲ್ಲಿ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯವೆಂಬ ನಾಲ್ಕುಬಗೆಯ ವಿವಾಹಗಳೇ ಬ್ರಾಹ್ಮಣರಿಗೆ ಧರ್ಮವು. ಗಾಂಧರ್ವ ವಿವಾಹವೆಂಬುದು ಬ್ರಾಹ್ಮಣರಿಗೆ ಪ್ರಶಸ್ತವಲ್ಲ. ದ್ವಿಜರಲ್ಲದವರಿಗೆ (ಎಂದರೆ, ಬ್ರಹ್ಮ, ಕ್ಷತ್ರಿಯ, ವೈಶ್ಯ ವರ್ಣಗಳಲ್ಲಿ ಮೂರಕ್ಕೂ ಸೇರದವರಿಗೆ, ಗಾಂಧರ್ವ, ಆಸುರ, ರಾಕ್ಷಸವಿವಾಹಗಳು ಧರ್ಮಗಳೆನಿಸಿವೆ. ಪೈಶಾಚ ವಿವಾಹವೆಂಬುದು ಯಾರಿಗೂ ಯೋಗ್ಯವಲ್ಲ. ಪೈಶಾಚವೆಂಬ ಎಂಟನೆಯ ವಿವಾಹಕ್ರಮವು ಕೇವಲ ಅಧಮವಾದುದು. ಕೋಪಸ್ವಭಾವವುಳ್ಳವಳು, ಅಂಗಹೀನಳು, ತನಗೆ ತಾಯಿಯ ಕುಲದಲ್ಲಿಯೇ ಹುಟ್ಟಿದವಳು, ವಯಸ್ಸು ಮೀರಿದವಳು, ವೈರಾಗ್ಯವನ್ನು ಹಿಡಿದವಳು, ಬಂಜೆಯ ಲಕ್ಷಣಗಳುಳ್ಳವಳು, ಪತಿತಳು, ರಜಸ್ವಲೆಯಾಗಿರುವವಳು, ಅಪಸ್ಮಾರ ರೋಗಗಳುಳ್ಳವರ ಕುಲದಲ್ಲಿ ಹುಟ್ಟಿದವಳು, ಪಿಂಗಳವರ್ಣದ ಕೂದಲುಗಳುಳ್ಳವಳು, ಕುಷ್ಠರೋಗವುಳ್ಳವಳು, ಮೇಹವ್ರಣಗಳುಳ್ಳವಳು, ಇನ್ನೂ ಋತುಸ್ನಾನವಾಗದವಳು, ಇಂತಹ ಕನ್ಯೆಯರೊಡನೆ ಸಂಬಂಧಮಾಡಬಾರದೆಂಬುದು ಧರ್ಮಶಾಸ್ತ್ರವಿಧಿ. ಅಲ್ಲದೆ ಕನ್ಯೆಯ ತಂದೆ, ತಾಯಿ, ಒಡಹುಟ್ಟಿದವರು, ಸೋದರಮಾವನು, ಉಪಾಧ್ಯಾಯನು, ಪುರೋಹಿತನು ಇಂತವರಿಗೇ ಕನ್ಯಾದಾನಮಾಡಲು ಅಧಿಕಾರವುಂಟು. ಇವರು ಮನಸ್ಸೊಪ್ಪಿ ಕೊಟ್ಟಾಗಲೇ ಆ ಕನ್ಯೆಯನ್ನು ಪ್ರತಿಗ್ರಹಿಸಬಹುದು. ಇವರು ಕೊಡದ ಕನ್ಯೆಯನ್ನು ಪ್ರತಿಗ್ರಹಿಸಬಾರದೆಂದೂ ಧರ್ಮಶಾಸ್ತ್ರವಿಧಿಯುಂಟು. ಧರ್ಮಜ್ಞರಾದ ಋಷಿಶ್ರೇಷ್ಠರೇ ವಿವಾಹವಿಷಯವಾಗಿ ಈ ವಿಧಿಗಳನ್ನು ನಿರ್ಣಯಿಸಿರುವರು. ಈಗ ಇವಳನ್ನು ವರಿಸುವುದಕ್ಕೆ ಮೇಲೆ ಹೇಳಿದ ಯಾವ ಕ್ರಮವೂ ಧರ್ಮಯುಕ್ತ

ವಾಗಿ ತೋರುವುದಿಲ್ಲ. ಏಕೆಂದರೆ, ಇವಳನ್ನು ನನಗೆ ಕನ್ಯಾದಾನಮಾಡಿ ಕೊಡತಕ್ಕವರಾರೂ ಇಲ್ಲ. ಇವಳಿಗೆ ತಂದೆ, ತಾಯಿ, ಸಹೋದರರು, ಸೋದರಮಾವಂದಿರು ಯಾರೂ ಇಲ್ಲ. ನಾನು ಗಾಂಧರ್ವವಿವಾಹದಿಂದ ಇವಳನ್ನು ಗ್ರಹಿಸಲಾರೆನು. ವೈದಿಕಕ್ರಿಯೆಗಳೇನೂ ಇಲ್ಲದ ಗಾಂಧರ್ವ ವಿವಾಹವು ನಮ್ಮಂತವರಿಗೆ ಎತ್ತಿದುದಲ್ಲ. ಆಪತ್ಕಾಲದಲ್ಲಿ ಹೊರತು ಬೇರೆ ಸಂದರ್ಭದಲ್ಲಿ ಅದನ್ನು ನಡೆಸಲೂ ಬಾರದು. ಇವಳನ್ನು ನಾನು ವಿವಾಹ ವಾದರೆ, ಇವಳ ಗರ್ಭದಲ್ಲಿ ಹುಟ್ಟತಕ್ಕ ಪುತ್ರನು ವೇದವ್ಯಾಸನೆಂಬ ಪ್ರಸಿದ್ಧ ನಾದ ಮಹರ್ಷಿಯಾಗುವನೆಂಬ ಹೇಳಿಕೆಯುಂಟು. ವೈದಿಕಕ್ರಿಯೆಗಳೇ ನೂ ಇಲ್ಲದೆ ಹುಟ್ಟಿದ ಬ್ರಾಹ್ಮಣನು ಋಷಿಯಾಗುವುದುತಾನೇ ಹೇಗೆ? ಎಲ್ಲವೂ ಅಸಂಭಾವ್ಯವಾಗಿ ತೋರುತ್ತಿದೆ'' ಎಂದು ಆ ಪರಾಶರನು ಚಿಂತಿಸುತ್ತಿರುವಾಗ, ಇವನ ಆಲೋಚನೆಯನ್ನು ತಿಳಿದುಕೊಂಡ ಬರ್ಹಿಷ ರೆಂಬ ಪಿತೃದೇವತೆಗಳು ಆ ದ್ವೀಪಕ್ಕೆ ಬಂದರು. ಇದೇ ಸಮಯದಲ್ಲಿ ಬ್ರಹ್ಮಪುತ್ರನಾದ ವಸಿಷ್ಠನೂ ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಸೇರಿದನು. ಆ ಪಿತೃಗಳೂ, ವಸಿಷ್ಠನೂ ಸಂಧಿಸಿದರು. ವಸಿಷ್ಠನು ಆ ಪಿತೃಗಳಿಗೆ ಸುಖಾ ಗಮನವನ್ನು ಹೇಳಿ ಸಂಭಾಷಿಸುತ್ತಿರುವಾಗ, ಪಿತೃಗಳು ಅವನನ್ನು ನೋ ಡಿ “ಯೋಗೀಂದ್ರಾ! ಇದೋ! ಇವಳು (ಬೆಸ್ತರ ಹುಡುಗಿ) ಮೊದಲು ನಮ್ಮ ಮಾನಸಪುತ್ರಿ. ನಮ್ಮ ಶಾಪದಿಂದ ವಸುರಾಜನ ಮಗಳಾಗಿ ಭೂ ಮಿಯಲ್ಲಿ ಜನಿಸಿರುವಳು. ನೀನು ಸಂತಾನಕ್ಕಾಗಿ ಈ ಕನ್ಯೆಯನ್ನು ಪ್ರತಿ ಗ್ರಹಿಸಬಹುದು. ಇಷ್ಟವಿದ್ದರೆ, ಈಗಲೇ ಇವಳನ್ನು ವಿವಾಹವಾಗು'' ಎಂ ದರು. ಅದಕ್ಕಾ ವಸಿಷ್ಠನು “ಎಲೈ ದೇವತೆಗಳಿರಾ! ಮಹರ್ಷಿಗಳ ವಾ ಕ್ಯ ಸುಳ್ಳಾಗದೆಂದು ನಾನು ಪುರಾಣಗಳಲ್ಲಿ ಅನೇಕಾವರ್ತಿ ಕೇಳಿರುವೆನು. ಅದರಂತೆ ನಡೆಯಲೇಬೇಕು. ಅದಕ್ಕಾಗಿ ನಾನೊಂದು ಮಾರ್ಗವನ್ನು ಹೇಳುವೆನು. ನನ್ನ ವಂಶಸ್ಥನಾದ ಪರಾಶರನೆಂಬ ಕುಮಾರನು ಇನ್ನೂ ಬ್ರಹ್ಮಚಾರಿಯಾಗಿಯೇ ಇರುವನು. ಅವನಿಗೆ ಸಂತಾನದಲ್ಲಿಯೂ ಅಪೇ ಕ್ಷೆಯುಂಟು. ಅವನು ನಮ್ಮ ವಂಶಕ್ಕೆ ಆಧಾರನಾಗಿರುವನು. ಅವನಿಗೆ ಇವಳನ್ನು ವಿವಾಹಮಾಡಬಹುದು'' ಎಂದನು ಇಷ್ಟರಲ್ಲಿಯೇ ಪರಾಶರ ನಿಗೆ ವಿವಾಹವಾಗುವುದೆಂಬ ಸೂಚನೆಯನ್ನು ತಿಳಿದು, ನೈಮಿಶಾರಣ್ಯದಲ್ಲಿದ್ದ

ಅನೇಕಮಹರ್ಷಿಗಳೂ ಅಲ್ಲಿಗೆ ಬಂದು ಸೇರಿದರು. ಮಹಾಭಾಗೆಯಾದ ಅರುಂಧತಿಯೂ ಕೂಡ (ವಸಿಷ್ಠಪತ್ನಿ) ಪರಾಶರನ ತಾಯಿಯಾದ ಅದೃಶ್ಯಂತಿಯನ್ನೂ ಕರೆದುಕೊಂಡು ಅಲ್ಲಿಗೆ ಬಂದು ಸೇರಿದಳು. ಆಗಲೇ ಆ ದ್ವೀಪದಲ್ಲಿ ವಿಶ್ವಕರ್ಮನಿರ್ಮಿತವಾದ ದಿವ್ಯವಾದ ಪರ್ಣಶಾಲೆಯೊಂದೂ ಸಿದ್ಧವಾಯಿತು. ಅರುಂಧತಿಯು ಅದರಲ್ಲಿ ವಿವಾಹೋಚಿತಗಳಾದ ಮಂಗಳ ಸಾಮಗ್ರಿಗಳನ್ನೆಲ್ಲ ಸಿದ್ಧಪಡಿಸಿಟ್ಟಳು. ಮತ್ತು ವಧುವಾದ ಸತ್ಯವತಿಯನ್ನು ತಾನೇ ಕೈಹಿಡಿದು ಕರೆತಂದು ಹಸೆಯಮಣೆಯಮೇಲೆ ಕುಳ್ಳಿರಿಸಿದಳು. ಇಂದ್ರಾಣಿಯನ್ನೂ ಆವಾಹನಮಾಡಿದಳು. ಆಗ ಚಂದ್ರದೇವತಾತ್ಮಕವಾದ ವಿಶಾಖಾ ನಕ್ಷತ್ರದೊಡಗೂಡಿದ ಶುಕ್ಲಪಕ್ಷದ ತ್ರಯೋದಶೀತಿಥಿಯಲ್ಲಿ, ಶುಭಗ್ರಹಗಳಿಂದ ಕೂಡಿದ ಮೈತ್ರವೆಂಬೀ ಮುಹೂರ್ತವು ಬರಲು, ಅದೇ ವಿವಾಹಕ್ಕೆ ಉತ್ತಮಕಾಲವೆಂದು ವಸಿಷ್ಠನು ತಿಳಿಸಿದನು. ಆ ಯಮುನಾದ್ವೀಪದಲ್ಲಿ ಎಲ್ಲಾ ಋಷಿಗಳೊಡನೆ ಸೇರಿ, ಅಲ್ಲಿ ತನ್ನ ಶಿಷ್ಯರಿಂದ ಚತುರಶ್ರವಾದ ಸ್ಥಂಡಿಲವನ್ನು ಗೋಮಯದಿಂದ ಸಾರಿಸಿ, ಹೂ, ಹಣ್ಣು, ಅಕ್ಷತೆ, ಮಾವಿನ ಚಿಗುರು, ಮೋದಕಗಳು, ಜಲಪೂರ್ಣಕುಂಭಗಳು, ಮೊದಲಾದ ಮಂಗಳದ್ರವ್ಯಗಳಿಂದ ಅದರ ನಾಲ್ಕು ಪಕ್ಕಗಳನ್ನೂ ಅಲಂಕಾರಮಾಡಿಸಿದನು. ಆ ಸ್ಥಂಡಿಲದ ನಡುವೆ ದರ್ಭಾಸನದಲ್ಲಿ ಪರಾಶರಮುನಿಯನ್ನು ಕರೆತಂದು ಕುಳ್ಳಿರಿಸಿದನು. ಬಿಳೀ ಸಾಸಿವೆ, ಮತ್ತು ಯವಧಾನ್ಯ, ಇವುಗಳ ಕಲ್ಕಗಳಿಂದಲೂ, ಇನ್ನೂ ಎಲ್ಲಾ ಔಷಧಿರಸಗಳಿಂದಲೂ ಸಂಸ್ಕರಿಸಲ್ಪಟ್ಟ ನೀರಿನಿಂದ ಅವನಿಗೆ ಸ್ನಾನಮಾಡಿಸಿದರು. ಬಿಳುಪಾದ ವಸ್ತ್ರಗಳನ್ನು ತಂದುಡಿಸಿದರು. ಆ ಮಹರ್ಷಿಗಳೆಲ್ಲರೂ ಪುಣ್ಯಾಹವಾಚನಗಳನ್ನು ಮಾಡಿ, ಪರಾಶರಮುನಿಯಮೇಲೆ ಅಕ್ಷತೆಗಳನ್ನೆರಚಿ ಆಶೀರ್ವದಿಸಿದರು. ಆಮೇಲೆ ಆ ಪರಾಶರನು ಗಂಧಪುಷ್ಪಗಳಿಂದ ದೇಹವನ್ನಲಂಕರಿಸಿಕೊಂಡು, ಕೈಯಲ್ಲಿ ಕಳಶಿಯನ್ನು ಹಿಡಿದು, ಕಾಲುನಡೆಯಿಲ್ಲದೆ ರಥವನ್ನೇರಿ ಅಲ್ಲಿಂದ ವಧೂಗೃಹಕ್ಕೆ ಹೊರಟನು. ಅಲ್ಲಿಗೆ ಹೋದಮೇಲೆ ವಧುವಿನ ಬಂಧುಗಳೆಲ್ಲರೂ ಅವನಿಗೆ ಉಚಿತವಾದ ವರಪೂಜೆಗಳನ್ನೆಲ್ಲ ನಡೆಸಿದರು. ಇಷ್ಟರಲ್ಲಿ ಅತ್ತಲಾಗಿ ವಧುವಿಗೂ ಮಂಗಲಸ್ನಾನವು ನಡೆದಿದ್ದಿತು. ಅವಳಿಗೂ ಧೌತವಸ್ತ್ರವನ್ನುಡಿಸಿ, ಪುಷ್ಪಚಂದನಾದಿಗಳಿಂದಲಂಕರಿಸಿ, ಸಿದ್ಧಪಡಿಸಿ

ದ್ದರು. ಅರಿಸಿನ ಕುಂಕುಮವನ್ನಿಟ್ಟು, ಕಣ್ಣಿಗೆ ಕಪ್ಪನ್ನು ತಿದ್ದಿ, ಕೈಯಲ್ಲಿ ಅಂಬನ್ನು ಹಿಡಿದಿದ್ದ ಆ ಮದುಮಗಳನ್ನು ಪರಾಶರಮುನಿಗೆ ಕಾಣಿಸಿದರು. ಅವಳನ್ನು ನೋಡಿದೊಡನೆ, ಕಾಲಜ್ಞನೂ, ಸಕಲಧರ್ಮಗಳನ್ನು ತಿಳಿದವನೂ ಆದ ಪರಾಶರಮುನಿಯು ಅವಳನ್ನು ಕುರಿತು "ಪ್ರತಿಗ್ರಹವೆಂಬುದು (ತೆಗೆಯುವುದು) ದಾತೃವಿನ (ಕೊಡತಕ್ಕವನ) ಅಧೀನವೆಂದು ನಾನು ಮೊದಲಿನಿಂದಲೇ ಕೇಳಿರುವೆನು. ಆ ಪಿತೃಗಳು ಹೇಗೆ ಹೇಳಿದರೆ ಹಾಗೆ ನಡೆದುಕೊಳ್ಳಬೇಕಾದುದು ನಮ್ಮ ಕರ್ತವ್ಯವು" ಎಂದನು. ಸತ್ಯವಾದಿಯಾದ ಪರಾಶರನ ಬಾಯಿಂದ ಧರ್ಮಯುಕ್ತವಾಗಿ ಹೊರಟ ಈ ಮಾತನ್ನು ಕೇಳಿದಮೇಲೆ, ನಿಸ್ಸಂಗರೂ, ಅಭಿಮಾನಶೂನ್ಯರೂ ಆದ ಆ ಪಿತೃದೇವತೆಗಳೆಲ್ಲರೂ, ಆಗಲೇ ವಸುರಾಜನನ್ನು ಅಲ್ಲಿಗೆ ಕರೆಸಿಕೊಂಡು "ರಾಜೇಂದ್ರಾ! ಇದೋ! ಇವಳು ನಿನಗೆ ಮತ್ಸ್ಯಗರ್ಭದಲ್ಲಿ ಹುಟ್ಟಿದ ಮಗಳು. ಇವಳನ್ನು ನೀನು ಈ ಪರಾಶರಮುನಿಗೆ ವಿಶೇಷ ಧರ್ಮವನ್ನು ಹಿಡಿದು ಕನ್ಯಾದಾನಮಾಡಬೇಕು" ಎಂದರು. ಅದಕ್ಕಾ ವಸುಮಹಾರಾಜನು "ಹೌದು. ನಿಜವೇ! ಇವಳು ನನ್ನ ಮಗಳು. ದಾಶ (ಬೇಡರ) ರಾಜನಿಂದ ಬೆಳೆಸಲ್ಪಟ್ಟವಳು. ಅದು ಹೇಗಿದ್ದರೂ ನಾನು ಪ್ರಜಾಪಾಲಕನಾದ ರಾಜನಾದುದರಿಂದ, ನನ್ನ ಪ್ರಜೆಗಳನ್ನು ಅರ್ಥಿಗಳಿಗೆ ಕೊಡುವುದಕ್ಕೂ ನನಗೆ ಸ್ವಾತಂತ್ರ್ಯವುಂಟು" ಎಂದನು. ಅದಕ್ಕಾ ಪಿತೃಗಳು "ಮಹಾರಾಜಾ! ನಾವಾದರೋ ಆಶೆ ಅಭಿಮಾನಗಳೆಲ್ಲವನ್ನೂ ತೊರೆದವರು. ಕನ್ಯಾದಾನದಿಂದಾಗತಕ್ಕ ಕರ್ಮಬಂಧಕ್ಕೆ ನಾವು ಆಸೆಪಡಬೇಕಾಗಿಲ್ಲ. ಈ ಸಂಬಂಧವನ್ನು ದಕ್ಷಿಣಾಬಂಧವೆನ್ನುವರು. (ಇದು ದಾಕ್ಷಿಣ್ಯದಿಂದುಂಟಾಗುವ ಸಂಬಂಧವೆನಿಸಿದೆ.) ನೀವಿರತಕ್ಕ ಭೂಮಿಯು ಕರ್ಮಸ್ಥಾನವು. ನಮ್ಮ ಸ್ವರ್ಗವು ಭೋಗಸ್ಥಾನವು. ಈ ಭೂಮಿಯಲ್ಲಿ ಪುಣ್ಯಮಾಡಿದವರು ಸ್ವರ್ಗಕ್ಕೂ, ಪಾಪಮಾಡಿದವರು ನರಕಕ್ಕೂ ಹೋಗಿ ಆಯಾ ಫಲಗಳನ್ನನುಭವಿಸುವರು. ಪುಣ್ಯಪಾಪ ಸಂಬಂಧಗಳೆರಡೂ ದಕ್ಷಿಣಾಬಂಧವೆಂದೇ ಹೇಳಲ್ಪಡುವುದು. ಯೋಗಸಿದ್ಧರು ಈ ಬಗೆಯ ಕರ್ಮಬಂಧಕ್ಕೆ ಸಿಕ್ಕಿದರೆ ಅಧೋಗತಿಗೆ ಬರುವರು. ಅದರಂತೆಯೇ ನಮ್ಮ ಮಾನಸಪುತ್ರಿಯಾದ ಇವಳೂ ತನ್ನ ಯೋಗಶಕ್ತಿಯನ್ನು ಕಳೆದುಕೊಂಡು ಸ್ವರ್ಗಭ್ರಷ್ಟಳಾಗಿ

ನಿನಗೆ ಮಗಳಾಗಿ ಹುಟ್ಟಿದಳು. ಈ ಕುಮಾರಿಯೋ ಒಳ್ಳೇ ಗುಣವತಿ. ಪರಮಸಾಧ್ವಿ! ಈ ಕನ್ಯೆಯನ್ನು ನೀನೇ ಪರಾಶರನಿಗೆ ಭಿಕ್ಷೆಯಾಗಿ ಕೊಡು" ಎಂದು ಹೇಳಿ, ಆ ಕ್ಷಣವೇ ಅವರು ಅದೃಶ್ಯವಾಗಿ ಹೊರಟು ಹೋದರು. ಆಮೇಲೆ ವಸಿಷ್ಠನು ಯಾಜ್ಞವಲ್ಕ್ಯಮುನಿಯನ್ನು ಆಚಾರ್ಯಸ್ಥಾನದಲ್ಲಿರಿಸಿ, ವಸುರಾಜನನ್ನೂ ಕರೆಸಿಕೊಂಡು, ಎಲ್ಲಾ ಋಷಿಗಳೊಡಗೂಡಿ ಶಾಸ್ತ್ರೋಕ್ತವಾಗಿಯೇ ವಿವಾಹಕಾರ್ಯಗಳನ್ನೆಲ್ಲ ನಡೆಸಿದನು.

ಆಗ ವಸುರಾಜನು ಪರಾಶರಮುನಿಯನ್ನು ಕುರಿತು "ಓ ಮಹಾತ್ಮಾ! ಇದೋ! ನಾನು ನನ್ನ ಮಗಳನ್ನು ನಿನಗೆ ಕನ್ಯಾದಾನರೂಪವಾಗಿ ಕೊಟ್ಟಿರುವೆನು. ಇವಳನ್ನು ಪ್ರತಿಗ್ರಹಿಸು. ನಿನಗೆ ಮಂಗಳವಾಗಲಿ! ನಿನ್ನ ಕೈಯಿಂದ ಇವಳ ಕೈಯನ್ನು ಹಿಡಿ!" ಎಂದು ಹೇಳಿ, ಆ ಕನ್ಯೆಯನ್ನು ತಾನೇ ಪರಾಶರನ ಕೈಗೆ ಕೊಟ್ಟೊಡನೆ, ಪರಾಶರನು ಆಚಾರ್ಯನಾದ ಯಾಜ್ಞವಲ್ಕ್ಯನು ಹೇಳಿದಂತೆ, ತಾತ್ಕಾಲಿಕ ಮಂಗಳಕಾರ್ಯಗಳನ್ನೆಲ್ಲ ಮಾಡಿ, ತನ್ನ ಕೈಯಿಂದ ಅವಳ ಹಸ್ತವನ್ನು ಗ್ರಹಿಸಿದನು. ಸಮೃದ್ಧವಾದ ತುಪ್ಪದಿಂದ ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಹೋಮಕಾರ್ಯವೂ ನಡೆಯಿತು ವಧೂವರರು ಮೂರಾವರ್ತಿ ಅಗ್ನಿಯನ್ನು ಪ್ರದಕ್ಷಿಣೆಮಾಡಿ ಬಂದು ಪೂಜಿಸಿದರು. ಯಾಜ್ಞವಲ್ಕ್ಯಾದಿ ಮಹರ್ಷಿಗಳನ್ನೆಲ್ಲ ಉಚಿತ ದಕ್ಷಿಣೆಗಳಿಂದ ತೃಪ್ತಿಗೊಳಿಸಿದಮೇಲೆ ವಧೂವರರಿಬ್ಬರೂ ಅವರಿಗೆ ಕ್ರಮವಾಗಿ ಬಂದು ನಮಸ್ಕರಿಸಿ, ಅವರಿಂದ ಆಶೀರ್ವದಿಸಲ್ಪಟ್ಟರು. ಪರಾಶರನ ವಿವಾಹವನ್ನು ನೋಡಿ, ದೇವತೆಗಳೂ, ಮಹರ್ಷಿಗಳೂ ಸಂತೋಷದಿಂದ "ಇನ್ನು ವೇದವ್ಯಾಸನು ಜನಿಸಿದಂತೆಯೇ!" ಎಂದು ಹೇಳುತ್ತ ಹೊರಟುಹೋದರು. ಸತ್ಯವತಿಯೂ ಪರಾಶರನ ಪ್ರೀತಿಗೆ ಪಾತ್ರಳಾಗಿ ಸಂತೋಷದಿಂದಿರುತಿದ್ದಳು. ಒಡನೆಯೇ ಅವಳಲ್ಲಿ ಗರ್ಭವು ಕಾಣಿಸಿತು. ಪ್ರಸವವೂ ಆಯಿತು. ಮಹಾಮಹಿಮನಾದ ವ್ಯಾಸನು ಆ ಯಮುನಾದ್ವೀಪದಲ್ಲಿಯೇ ಜನಿಸಿದನು. ಹುಟ್ಟಿದಕೂಡಲೇ ಅವನು ಬೆಳೆಯಲಾರಂಭಿಸಿ, ಆಗಲೇ ಏಳುವರ್ಷದ ಕುಮಾರನಾದನು. ಒಡನೆಯೇ ಅವನು ಸ್ನಾನಮಾಡಿ ಬಂದು, ತಂದೆಯ ಪಾದಗಳನ್ನು ಹಿಡಿದು ನಮಸ್ಕರಿಸಿ ವಿನಯದಿಂದ

ಮುಂದೆ ನಿಂತನು. ಮತ್ತು "ಸ್ವಸ್ತಿ!" ಎಂಬ ಶಬ್ದವನ್ನು ಹೇಳಿ, ಜಲಪೂರ್ಣವಾದ ಒಂದು ಕಲಶವನ್ನು ಅವನ ಕೈಗೆ ಕೊಟ್ಟನು. ಪರಾಶರನು ಆ ಕಲಶವನ್ನು ತೆಗೆದುಕೊಂಡು ಹೋದಾಗ ವ್ಯಾಸನು ಸುಮ್ಮನೆ ನಿಂತಿದ್ದನು. ಇಷ್ಟರಲ್ಲಿಯೇ ಪರಾಶರಪತ್ನಿಯಾದ ಯೋಜನಗಂಧಿಯು ತನ್ನ ಸಾಕುತಂದೆಯಾದ ದಾಶನು (ಬೆಸ್ತನು) ಬಂದರೆ, ತನ್ನ ಕನ್ಯಾತ್ವವನ್ನು ಕಳೆದುಕೊಂಡ ತನ್ನ ಕಾರ್ಯಕ್ಕಾಗಿ ಏನು ಹೇಳುವನೋ ಎಂದು ಗಡಗಡನೆ ನಡುಗುತ್ತಿದ್ದಾಗ, ಪರಾಶರ ಮುನಿಯು ಆ ಕಲಶಜಲವನ್ನು ಅವಳಮೇಲೆ ಸುರಿಯಲು, ಅವಳು ಮೊದಲಿನಂತೆ ಕನ್ಯೆಯಾದಳು. ಆಮೇಲೆ ಅವಳು ಬಹಳ ಸಂತೋಷದಿಂದ ನಿರ್ಭಯವಾಗಿ ಮುಂದೆ ಬಂದು, ಪರಾಶರನ ಪಾದಗಳನ್ನು ಹಿಡಿದು ನಮಸ್ಕರಿಸಿ, ತನ್ನ ಪುತ್ರನಾದ ವ್ಯಾಸನನ್ನು ಪ್ರೀತಿಯಿಂದ ಕೈಹಿಡಿದು ಕರೆಯುವುದಕ್ಕೆ ಹೋದಳು. ಅವಳು ತನ್ನ ಮೈಯನ್ನು ಮುಟ್ಟಿದೊಡನೆ, ಆ ಕುಮಾರನು ಅವಳು ಹೀನಜಾತಿಯವಳೆಂದು ಅಸಹ್ಯಪಟ್ಟು, ಹುಂಕಾರದಿಂದ ಅವಳನ್ನು ಗದರಿಸುತ್ತ "ಅಮ್ಮಾ! ನೀನು ಇನ್ನುಮೇಲೆ ನನ್ನನ್ನು ಮುಟ್ಟಬೇಡ. ನೀನು ನನ್ನ ತಂದೆಯ ಸ್ಪರ್ಶದಿಂದ ತತ್ಕಾಲಕ್ಕೆ ಶುಚಿಯಾಗಿದ್ದರೂ, ಈಗ ನೀನು ಬೆಸ್ತರವಳೇ ಆದೆ! ಆದುದರಿಂದ ನನ್ನನ್ನು ಸ್ಪರ್ಶಿಸಬೇಡ! ಹೋಗು" ಎಂದನು. ಈ ಮಾತನ್ನು ಕೇಳಿದೊಡನೆ ಆಕೆಗೆ ಮಹಾವ್ಯಸನದಿಂದ ಕಣ್ಣುಗಳಲ್ಲಿ ನೀರು ತುಳುಕಿತು. ಅವಳು ತನಗಾದ ಅವಮಾನವನ್ನು ಸಹಿಸಲಾರದೆ ಮನುಷ್ಯಭಾವದಿಂದ ಕಣ್ಣೀರು ತುಂಬಿಕೊಂಡು ಪರಾಶರನ ಪಾದಗಳಲ್ಲಿ ಬಿದ್ದು ಗೋಳಾಡಿದಳು. ಆಗ ಧರ್ಮಜ್ಞನಾದ ಪರಾಶರನು ಅವಳಲ್ಲಿ ಬಹಳ ಕನಿಕರಗೊಂಡು, ತನ್ನ ಮಗನಾದ ವ್ಯಾಸನನ್ನು ಕುರಿತು "ಪುತ್ರ! ಏನಿದು? ನೀನು ಹೀಗೆ ಮಾಡಬಾರದು. ಇದು ಧರ್ಮಯುಕ್ತವೆಂದು ನನಗೆ ತೋರಲಿಲ್ಲ. ಉಪಕಾರಿಗಳಾದ ತಾಯಿತಂದೆಗಳನ್ನು ಮಕ್ಕಳು ಹೇಗಿದ್ದರೂ ದೂಷಿಸಬಾರದು. ತಂದೆತಾಯಿಗಳಿಬ್ಬರಲ್ಲಿಯೂ ಕೂಡ ತಾಯಿಯೇ ಮೇಲೆಂದು ಭಾವಿಸಬೇಕು. ಗರ್ಭದಲ್ಲಿ ಧರಿಸಿ, ಎಷ್ಟೋ ಕಷ್ಟಗಳನ್ನೆಲ್ಲ ಸಹಿಸಿಕೊಂಡ ತಾಯಿಗಿಂತ ಮಕ್ಕಳಿಗೆ ಮೇಲಾದ ವಸ್ತುವಿಲ್ಲ. ಲೋಕದಲ್ಲಿ ಬೀಜಕ್ಷೇತ್ರಗಳ ಸಂಯೋಗದಿಂದಲ್ಲವೇ ಪೈರು ಹು

ಟ್ಟಬೇಕು. ಆದರಂತೆ ಸ್ತ್ರೀಪುರುಷರ ಸಂಬಂಧದಿಂದಲೇ ಪುತ್ರನು ಜನಿಸುವನು. ಬೀಜಕ್ಷೇತ್ರಗಳು ಎಂತವೇ ಆಗಿದ್ದರೂ, ಪೈರು ಉತ್ತಮವಾಗಿ ಬೆಳೆಯುವ ಸಂಭವವುಂಟು. ಮೃಗಗಳಿಂದಲೂ, ಪಕ್ಷಿಗಳಿಂದಲೂ, ಅಪ್ಸರಸಿಯರೆಂಬ ದೇವವೇಶ್ಯೆಯರಿಂದಲೂ, ಕೊನೆಗೆ ಶೂದ್ರಸ್ತ್ರೀಯರಿಂದಲೂ ವೇದಪಾರಂಗತರಾದ ವಿಪ್ರೋತ್ತಮರೂ, ಮಹರ್ಷಿಗಳೂ ಜನಿಸಿದುದುಂಟು. ಇದಕ್ಕೆ ಎಷ್ಟೋ ನಿದರ್ಶನಗಳಿವೆ. ಋಶ್ಯಶೃಂಗನು ಹೆಣ್ಣು ಜಿಂಕೆಯಲ್ಲಿ ಹುಟ್ಟಿದವನು. ಅಗಸ್ತ್ಯ ವಸಿಷ್ಠರಿಬ್ಬರೂ ಊರ್ವಶೀಯೆಂಬ ದೇವವೇಶ್ಯೆಯಿಂದ ಜನಿಸಿದವರು. ಸೋಮಶ್ರವನು ಹೆಣ್ಣುಹಾವಿನ ಗರ್ಭದಿಂದ ಜನಿದವನು. ಅಶ್ವಿನೀದೇವತೆಗಳಿಬ್ಬರೂ ಕುದುರೆಯಿಂದ ಹುಟ್ಟಿದವರು. ಕುಮಾರಸ್ವಾಮಿಯು ಗಂಗಾತೀರದ ನೊದೆಹುಲ್ಲಿನಮೇಲೆ ಬಿದ್ದುಹೋದ ವೀರ್ಯದಿಂದ ಹುಟ್ಟಿದವನು. ಪುತ್ರಾ! ಎಷ್ಟೋ ಮಹರ್ಷಿಗಳೂ, ದೇವತೆಗಳೂ ಹೀಗೆಯೇ ಹುಟ್ಟಿರುವರು. ಆದುದರಿಂದ ಲೋಕಪ್ರವೃತ್ತಿ ಮತ್ತು ವೇದಪ್ರವೃತ್ತಿ ಇವುಗಳ ಮೂಲವನ್ನು ಕುರಿತು ಪ್ರಾಜ್ಞರಾದವರು ಔಚಿತ್ಯಾನೌಚಿತ್ಯವನ್ನು ವಿಚಾರಿಸಲಾರರು. ಅವನ್ನು ಚರ್ಚಿಸಲೂ ಬಾರದು. ಪುತ್ರಾ! ಈಗ ನಿನ್ನ ಸ್ಥಿತಿಯನ್ನೇ ಪರ್ಯಾಲೋಚಿಸಿ ನೋಡು. ನೀನು ಮೊದಲೇ ಬ್ರಹ್ಮನಿಂದ ವೇದವ್ಯಾಸನೆಂದು ಪ್ರಖ್ಯಾತನಾಗುವೆಯೆಂದು ಸೂಚಿಸಲ್ಪಟ್ಟಿರುವೆ. ಮನುಷ್ಯರಿಗೂ, ಮಹರ್ಷಿಗಳಿಗೂ ನೀನು ಧರ್ಮೋಪದೇಶಮಾಡತಕ್ಕವನೆಂಬುದೂ ಸಿದ್ಧವಾಗಿದೆ, ಆದುದರಿಂದ ನಿನ್ನ ತಾಯಿಯ ವಿಷಯವಾಗಿ ನೀನು ಅನ್ಯಥಾ ಯೋಚಿಸಬೇಕಾದುದಿಲ್ಲ. ಅವಳಾದರೂ ಸಾಮಾನ್ಯಳಲ್ಲ. ಮಹಾತ್ಮನಾದ ವಸುರಾಜನಿಂದ ಜನಿಸಿದವಳು. ಅವಳನ್ನು ನೀನು ದೂಷಿಸಬಾರದು. ಮಹಾಪ್ರಾಜ್ಞನೆನಿಸಿದ ನೀನು ನನ್ನ ಪ್ರಿಯಕ್ಕಾಗಿ ಇವಳನ್ನು ತಾಯಿಯಂತೆಯೇ ಭಾವಿಸಿ ಪ್ರೀತಿಸುತ್ತಿರಬೇಕು. ವತ್ಸಾ! ಪ್ರಜಾಹಿತಕ್ಕಾಗಿಯೇ ನೀನು ಮಹಾವಿಷ್ಣುವಿನ ಅಂಶದಿಂದ, ಮಹರ್ಷಿರೂಪದಲ್ಲಿ ಜನಿಸಿರುವೆ" ಎಂದನು. ಆಗ ವ್ಯಾಸನು ತನ್ನ ತಾಯಿಯಲ್ಲಿ ತನಗಿದ್ದ ಹೀನಭಾವವನ್ನು ಬಿಟ್ಟು, ಲೋಕಸ್ವಭಾವವನ್ನೇ ಅನುಸರಿಸಿ ಪ್ರೀತಿಯಿಂದ ತಾಯಿಯ ತೊಡೆಯಮೇಲೆ ಬಂದು ಕುಳಿತನು. ಓ ಜನಮೇಜಯರಾಜಾ! ಲೋಕದಲ್ಲಿ ಪುತ್ರಸ್ಪರ್ಶಸುಖಕ್ಕಿಂತಲೂ ತಂದೆತಾಯಿಗ

ಳಿಗೆ ಮೇಲಾದ ಸುಖವುಂಟೆ? ಆ ವ್ಯಾಸನನ್ನು ಅಪ್ಪಿಕೊಂಡೊಡನೆ ಸತ್ಯವತಿಯ ಕಣ್ಣುಗಳಲ್ಲಿ ಆನಂದಬಾಷ್ಪವು ಸುರಿಯಿತು. ತಾವರೆಯ ಎಸಳಿನಂತೆ ಕಣ್ಣುಳ್ಳ ಆ ಮಗನನ್ನು ಹಿಡಿದು ಬಾರಿಬಾರಿಗೂ ತಲೆಯನ್ನಾಘ್ರಾಣಿಸಿದಳು. ಅವಳ ಸ್ತನಗಳಲ್ಲಿ ಹಾಲು ತೊರೆಯಿಕ್ಕುತಿದ್ದಿತು. ಆಗ ಆ ವಾಸವಿಯು (ವಸುಪುತ್ರಿಯು) "ಸಂತಾನಾಪೇಕ್ಷೆಯುಳ್ಳವರಿಗೆ ಈ ಲೋಕದಲ್ಲಿ ಪುತ್ರಲಾಭಕ್ಕಿಂತಲೂ ಮೇಲಾದ ಭಾಗ್ಯವಿಲ್ಲ. ಅದರಲ್ಲಿಯೂ ಇಂತಹ ಸಂತಾನವು ಇತರರಿಗೆ ದುರ್ಲಭವೆಂದೇ ನಾನು ಭಾವಿಸುವೆನು. ನನ್ನ ಮಹತ್ತಾದ ತಪಸ್ಸಿನಿಂದಲೂ, ಯೋಗಬಲದಿಂದಲೂ, ದೇವತೆಗಳಿಗೆ ಅಮೃತವು ಸಿಕ್ಕಿದಂತೆ ಮಹಾಪ್ರಾಜ್ಞನಾದ ನೀನು ನನಗೆ ಪುತ್ರನಾಗಿ ಲಭಿಸಿದೆ. ಓ ಮುನಿಕುಮಾರಾ! ಆದುದರಿಂದ ನೀನು ನನ್ನನ್ನು ಕೈಬಿಟ್ಟು ಹೋಗಬಾರದು" ಎಂದಳು.

ಆಗ ವ್ಯಾಸನು ಪ್ರೀತಿಪುರಸ್ಸರವಾಗಿ ತಾಯಿಯನ್ನು ಕುರಿತು "ಅಮ್ಮಾ! ನೀನು ನನ್ನನ್ನು ಕೈಯಿಂದ ಸ್ಪರ್ಶಿಸಿದೆ! ನೀನು ನನ್ನನ್ನು ಆಲಿಂಗಿಸಿದೆ! ಆಗಾಗ ನೀನು ನನ್ನ ತಲೆಯನ್ನೂ ಆಘ್ರಾಣಿಸಿದೆ. ಇದರಿಂದಲೇ ನೀನು ನನ್ನಲ್ಲಿ ಪೂರ್ಣವಾದ ಪುತ್ರವಾತ್ಸಲ್ಯವನ್ನು ತೋರಿಸಿದಂತಾಯಿತು. ನಾನೂ ಸಂಪೂರ್ಣತೃಪ್ತನಾದೆನು. ಇನ್ನು ಮುಂದೆ ನಿನಗೆ ನನ್ನಿಂದ ಅವಶ್ಯಕಾರ್ಯವೇನಾದರೂ ಆಗಬೇಕಾಗಿದ್ದಾಗಮಾತ್ರ ನನ್ನನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡರೆ ಸಾಕು. ಸ್ಮರಣಮಾತ್ರದಿಂದ ನಾನು ನಿನ್ನ ಕಣ್ಣ ಮುಂದೆ ನಿಲ್ಲುವೆನು" ಹೀಗೆಂದು ಹೇಳಿ ಆ ಕುಮಾರನು ತಪಸ್ಸಿನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿದನು. ಆಮೇಲೆ ಪರಾಶರನೂ ಕೂಡ ಅವಳಿಗೆ ತಿರುಗಿ ಕನ್ಯಾತ್ವವೇ ಉಂಟಾಗಲೆಂದು ಅನುಗ್ರಹಿಸಿ ತನ್ನ ಪುತ್ರನೊಡನೆ ಹೊರಟುಹೋದನು. ಪರಾಶರನು ತನ್ನ ತಾಯಿಯಾದ ಅದೃಶ್ಯಂತಿಯಿದ್ದ ಪುಣ್ಯಾಶ್ರಮಕ್ಕೆ ಬಂದಮೇಲೆ, ಅಲ್ಲಿ ತನ್ನ ಮಗನಿಗೆ ವಿಧಿಕ್ರಮವಾಗಿ ಜಾತಕರ್ಮಾದಿ ಸಂಸ್ಕಾರಗಳೆಲ್ಲವನ್ನೂ ನಡೆಸಿದನು. ಯಾಜ್ಞವಲ್ಕ್ಯನಿಂದ ಉಪನಯನಸಂಸ್ಕಾರವನ್ನೂ ಮಾಡಿಸಿದನು. ಮೂರು ಮಾತ್ರೆಗಳುಳ್ಳ ಪ್ರಣವಾರ್ಥದೊಡನೆ (ಓಂಕಾರದೊಡನೆ) ವೇದವೇದಾಂಗಗಳನ್ನೆಲ್ಲ ಅಧ್ಯಯನ

ಮಾಡಿಸಿದನು. ವಿದ್ಯಾಭ್ಯಾಸವನ್ನು ಮುಗಿಸಿ, ಗುರುದಕ್ಷಿಣೆಯನ್ನೂ ಸಲ್ಲಿಸಿದಮೇಲೆ, ವ್ಯಾಸನು ತಪಸ್ಸಿನಲ್ಲಿ ನೆಲೆಗೊಂಡನು. ಹೀಗೆ ಪರಾಶರನಿಗೆ ಸತ್ಯವತಿಯಲ್ಲಿ ಜನಿಸಿದ ಕುಮಾರನು, ಬಾಲ್ಯದಲ್ಲಿಯೇ ಯಮುನಾದ್ವೀಪದಲ್ಲಿಡಲ್ಪಟ್ಟವನಾದುದರಿಂದ ಅವನಿಗೆ "ದ್ವೈಪಾಯನ"ನೆಂಬ ಹೆಸರು ಪ್ರಸಿದ್ಧವಾಯಿತು. ಆ ಬ್ರಹ್ಮರ್ಷಿಯು ಯುಗಯುಗಕ್ಕೂ ಧರ್ಮವು ಒಂದೊಂದು ಪಾದವಾಗಿ ತಗ್ಗುತ್ತ ಬಂದುದನ್ನೂ, ಅದಕ್ಕೆ ತಕ್ಕಂತೆ ಯುಗಯುಗಕ್ಕೆ ಅಧರ್ಮಪ್ರಾಬಲ್ಯದಿಂದ ಜನಗಳ ಆಯುಸ್ಸು, ಬಲ, ಇವೆಲ್ಲ ಕ್ಷೀಣಿಸುತ್ತ ಬಂದುದನ್ನೂ ನೋಡಿ, ಲೋಕಾನುಗ್ರಹಾರ್ಥವಾಗಿ ವೇದಗಳನ್ನು ವಿಭಾಗಿಸಿಟ್ಟನು. ಅದರಿಂದ ಅವನಿಗೆ ವೇದವ್ಯಾಸನೆಂಬ ಮತ್ತೊಂದು ಹೆಸರೂ ಬಂದಿತು. ಆಮೇಲೆ ಆ ಬ್ರಹ್ಮರ್ಷಿಯು ಸುಮಂತು, ಜೈಮಿನಿ, ಪೈಲನು, ತನ್ನ ಮಗನಾದ ಶುಕಮುನಿ, ವೈಶಂಪಾಯನನೆಂಬ ತನ್ನ ಶಿಷ್ಯರೈವರನ್ನೂ ಕರೆಸಿ, ಅವರಿಗೆ ಕ್ರಮವಾಗಿ ಋಕ್ಕು, ಯಜುಸ್ಸು, ಸಾಮ, ಅಥರ್ವಣವೆಂಬ ನಾಲ್ಕು ವೇದಶಾಖೆಗಳನ್ನೂ, ಐದನೆಯ ವೇದವಾದ ಮಹಾಭಾರತವನ್ನೂ ಅಧ್ಯಯನಮಾಡಿಸಿದನು. ಆ ಶಿಷ್ಯರಿಂದಲೇ ವೇದಸಂಹಿತೆಗಳೂ, ಭಾರತ ಸಂಹಿತೆಗಳೂ ಪ್ರಚುರಗೊಳಿಸಲ್ಪಟ್ಟುವು.

ಇದು ಹೀಗಿರಲು, ಅತ್ತಲಾಗಿ ಸತ್ಯವತಿಯೂ ಸಂತೋಷದಿಂದ ಮೊದಲಿನಂತೆ ತನ್ನ ತಂದೆಯಾದ ದಾಶರಾಜನ ಬಳಿಗೆ ಹೋಗಿ ಸೇರಿದಳು. ಆದರೆ ಅವಳ ದೇಹದ ವಾಸನೆಯು ಬದಲಾಯಿಸಿದ್ದಿತು. ಮೊದಲು ಮತ್ಸ್ಯಗಂಧವಿದ್ದ ಅವಳ ದೇಹದಿಂದ ಸುತ್ತಲೂ, ಒಂದು ಯೋಜನದೂರಕ್ಕೆ ಘಮಘಮಿಸುವ ಸುಗಂಧವು ಹೊರಡುತ್ತಿತ್ತು. ಅದನ್ನು ನೋಡಿ ದಾಶರಾಜನು ಆಶ್ಚರ್ಯಗೊಂಡು, "ಕುಮಾರೀ! ನಿನ್ನ ದೇಹದಲ್ಲಿ ಮೀನಿನ ವಾಸನೆಯಿದ್ದುದನ್ನು ನೋಡಿ ಎಲ್ಲರೂ ನಿನ್ನನ್ನು ಮತ್ಸ್ಯಗಂಧಿಯೆಂದೇ ಕರೆಯುತಿದ್ದರು. ಈಗ ನಿನ್ನ ಮೈಯಲ್ಲಿ ಈ ಸುಗಂಧವೆಲ್ಲಿಯದು? ನಿನಗೆ ಈ ಸುಂಧವನ್ನು ಕೊಟ್ಟವನಾವನು" ಎಂದನು.

ಆಗ ಸತ್ಯವತಿಯು "ಅಪ್ಪಾ! ಬೇರೇನೂ ಇಲ್ಲ. ಶಕ್ತಿಯ ಪುತ್ರನಾದ ಪರಾಶರನೆಂಬ ಋಷಿಯಂತೆ! ಅವನು ನಮ್ಮ ದೋಣಿಯಲ್ಲಿ ಪ್ರಯಾ

ಣವಾಡುತ್ತಿದ್ದನು. ನಾನು ದೋಣಿಯನ್ನು ನಡೆಸುವುದರಲ್ಲಿ ಒಳ್ಳೇ ಸುಶಿಕ್ಷಿತಳಾಗಿದ್ದುದನ್ನು ನೋಡಿ, ಆವನು ನನ್ನ ವಿದ್ಯೆಗೆ ಮೆಚ್ಚಿ, ನನಗೆ ಮತ್ಸ್ಯಗಂಧತ್ವವನ್ನು ನೀಗಿಸಿ, ಈ ಯೋಜನಗಂಧಿತ್ವವನ್ನು ಅನುಗ್ರಹಿಸಿ ದನು. ಆ ಋಷಿಯ ಅನುಗ್ರಹವು ನನ್ನ ಮೇಲೆ ಬಿದ್ದುದನ್ನು ನೋಡಿ ಜನ ರೆಲ್ಲರೂ ಸಂತೋಷಗೊಂಡರು. ಇದೇ ನನ್ನಲ್ಲಿ ಈ ಬದಲಾವಣೆಗೆ ಕಾರ ಣವು. ನೀನೇನೂ ಶಂಕಿಸಿ ಕೋಪಿಸಬೇಕಾದ ಕಾರಣವಿಲ್ಲ'' ಎಂದಳು. ಇದನ್ನು ಕೇಳಿ ದಾಶರಾಜನಿಗೆ ಅಪಾರಸಂತೋಷವಾಯಿತು. ತನ್ನ ಮಗ ಳನ್ನು ವಿಶೇಷವಾಗಿ ಕೊಂಡಾಡಿದನು.

ಪವಿತ್ರವೂ, ಉತ್ತಮವೂ ಆದ ಈ ವ್ಯಾಸಜನ್ಮವೃತ್ತಾಂತವೆಂಬ ಇತಿ ಹಾಸವನ್ನು ಕೇಳಿದವರು ಉತ್ತಮಸಂತಾನವುಳ್ಳವರಾಗುವರು.]

ಓ ಜನಮೇಜಯರಾಜಾ! ಹೀಗೆಯೇ ಅಪಾರತೇಜಸ್ವಿಯೂ, ಮ ಹಾವೀರ್ಯಶಾಲಿಯೂ, ಯಶಸ್ವಿಯೂ ಆದ ಭೀಷ್ಮನೂ ವಸುವಿನ ಅಂಶ ದಿಂದ ಶಂತನುವಿಗೆ ಗಂಗಾದೇವಿಯಲ್ಲಿ ಹುಟ್ಟಿದನು.

ಹಿಂದೆ ಮಹಾತ್ಮನೂ, ವೇದಾರ್ಥವಿತ್ತೂ ಆದ ಬ್ರಹ್ಮರ್ಷಿಯೊಬ್ಬನಿ ದ್ದನು. ಅವನು ಬಹಳ ಸಚ್ಚರಿತ್ರವುಳ್ಳವನು. ಅವನಲ್ಲಿ ಚೌರ್ಯಾದಿ ದುರ್ಗುಣಗಳು ಲೇಶಮಾತ್ರವೂ ಇಲ್ಲದಿದ್ದರೂ, ಚೋರನೆಂಬ ಶಂಕೆಯಿಂದ ಹಿಡಿಯಲ್ಪಟ್ಟು ಶೂಲಕ್ಕೆ ಪೋಣಿಸಲ್ಪಟ್ಟನು. ಅವನಿಗೆ ಅಣಿಮಾಂಡವ್ಯ ನೆಂದು ಪ್ರಸಿದ್ಧಿಯುಂಟು. ಮಹಾಯಶಸ್ವಿಯಾದ ಆ ಬ್ರಾಹ್ಮಣನು ಧರ್ಮಾ ಧಿಕಾರಿಯಾದ ಯಮದೇವನನ್ನು ನೋಡಿ “ಧರ್ಮರಾಜಾ! ಹಿಂದೊಮ್ಮೆ ನಾನು ಒಂದು ನೊಣವನ್ನು ಹಿಡಿದು ಅದಕ್ಕೆ ಮುಳ್ಳನ್ನು ಚುಚ್ಚಿದೆನು. ಇದೊಂದು ಪಾಪವನ್ನು ನಾನು ಮಾಡಿದುದಾಗಿ ನನ್ನ ನೆನಪಿಗೆ ಬರುತ್ತಿದೆ. ಅದುಹೊರತು ಬೇರೆ ಯಾವ ಪಾಪವನ್ನೂ ನಾನು ನಡೆಸಿದಂತೆ ನನ್ನ ಜ್ಞಾಪಕಕ್ಕೆ ಬರಲಿಲ್ಲ. ಆದರೆ ಅದಕ್ಕೆ ಸಾವಿರಪಾಲಿನಷ್ಟು ತಪಸ್ಸನ್ನು ನಾನು ಮಾಡಿರುವೆನು. ಅಷ್ಟೇಕೆ? ನಾನು ಮಾಡಿರುವ ಪುಣ್ಯಕಾರ್ಮಗ ಳಿಗೆ ಮಿತಿಯೇ ಇಲ್ಲ. ಹೀಗಿದ್ದರೂ ನನ್ನ ಪುಣ್ಯಫಲವೊಂದೂ ಆ ಪಾಪ ವನ್ನು ನೀಗಿಸಲಾರದೆ ಹೋಯಿತೇಕೆ? ನನ್ನ ತಪಸ್ಸುಗಳನ್ನೆಲ್ಲ ಆ ಸ್ವಲ್ಪ

ಪಾಪವೇ ಜಯಿಸಿಬಿಟ್ಟಿತೇನು ? ಓ ಧರ್ಮದೇವಾ ! ಇತರ ಪ್ರಾಣಿಹತ್ಯೆಕ್ಕಿಂತಲೂ ಬ್ರಹ್ಮಹತ್ಯೆಯು ಪ್ರಬಲಪಾತಕವಲ್ಲವೆ ? ಈಗ ನೀನು ನನ್ನನ್ನು ಕೊಲ್ಲುವುದರಿಂದ ಆ ಮಹಾಪಾಪಕ್ಕೆ ಗುರಿಯಾದೆ. ಈ ಪಾಪಕ್ಕಾಗಿ ನೀನು ಮುಂದೆ ಶೂದ್ರಯೋನಿಯಲ್ಲಿ ಹುಟ್ಟುವೆ'' ಎಂದನು.

ಓ ಜನಮೇಜಯರಾಜಾ ! ಈ ಶಾಪಕಾರಣದಿಂದ ಧರ್ಮದೇವತೆಯೇ ವಿದುರನಾಗಿ ಶೂದ್ರಯೋನಿಯಲ್ಲಿ ಹುಟ್ಟಿ ಅವನು ಧರ್ಮಾತ್ಮನೂ, ವಿದ್ವಾಂಸನೂ ಎನಿಸಿಕೊಂಡನು. ಸೂತಕುಲದವನಾಗಿದ್ದರೂ ಋಷಿಗೆ ಸಮಾನನೆನಿಸಿದ ಸಂಜಯನು ಗವಲ್ಗಣನೆಂಬವನಿಂದ ಜನಿಸಿದವನು. ಕನ್ಯಾವಸ್ಥೆಯಲ್ಲಿಯೇ ಕುಂತಿಯಲ್ಲಿ ಸೂರ್ಯನಿಂದ ಮಹಾಬಲಶಾಲಿಯಾದ ಕರ್ಣನು ಜನಿಸಿದನು. ಇವನು ಹುಟ್ಟುವಾಗಲೇ ಸಹಜವಾದ ಕವಚಕುಂಡಲಗಳೊಡನೆ ಶೋಭಿಸುತ್ತ ಜನಿಸಿದನು. ಶ್ರೀಮಹಾವಿಷ್ಣುವೂ ಲೋಕಾನುಗ್ರಹಾರ್ಥವಾಗಿ ವಸುದೇವಪುತ್ರನಾಗಿ ದೇವಕಿಯಲ್ಲಿ ಅವತರಿಸಿದನು. ತಾನು ಸರ್ವಲೋಕನಮಸ್ಕೃತನಾಗಿ, ಮಹಾಕೀರ್ತಿಯುಳ್ಳವನಾಗಿ, ತಾನೇ ಸೃಷ್ಟಿಕರ್ತನೂ, ಆದ್ಯಂತ ಶೂನ್ಯನೂ, ಸರ್ವಸಮರ್ಥನೂ, ಸ್ವಯಂಪ್ರಕಾಶನೂ ಆಗಿದ್ದರೂ. ಮನುಷ್ಯನಾಗಿ ಕೃಷ್ಣರೂಪದಿಂದ ಅವತಾರವನ್ನೆತ್ತಿದನು. ಯಾವನು ಅವ್ಯಕ್ತವೂ, ಅಕ್ಷಯವೂ ಆದ ಪರಬ್ರಹ್ಮವೆಂದೂ, ತ್ರಿಗುಣಾತ್ಮಕವಾಗ ಮೂಲಪ್ರಕೃತಿಯೆಂದೂ, ಅವ್ಯಯವಾದ ಆತ್ಮವೆಂದೂ ಕಾರ್ಯಪ್ರಕೃತಿಯಾದ ಮಹತ್ತೆಂದೂ, ಅಹಂಕಾರಾದಿ ಜಡಗಳಿಗೆ ಪ್ರಭುವೆಂದೂ, ಅಂತರ್ಯಾಮಿಯೆಂದೂ, ಸಮಸ್ತ ಶುಭಾಶುಭ ಕರ್ಮಪ್ರದನಾದುದರಿಂದ ವಿಶ್ವಕರ್ಮನೆಂದೂ, ಸತ್ಯನೆಂದೂ, ಧ್ರುವವಾದ ಅಕ್ಷರವೆನಿಸಿಕೊಂಡ ಪ್ರಣವವೆಂದೂ, ದೇಶ ಕಾಲ ವಸ್ತು ಸ್ವರೂಪಾದಿಗಳಿಂದ ಅಳೆಯಲ್ಪಡಲಾರದವನೆಂದೂ, ಅಚಲನೆಂದೂ, ಪ್ರಕಾಶಮಾನರೂಪವಾದ ಜ್ಞಾನಸ್ವರೂಪನೆಂದೂ, ಹಂಸನೆಂದೂ, ನಾರಾಯಣನೆಂದೂ, ತನಗಿಂತಲೂ ಮೇಲಾದ ಬೇರೆ ಪುರುಷನಿಲ್ಲದವನೆಂದೂ, ಅಣುವಿಗಿಂತಲೂ ಅಣುವೆಂದೂ, ವಿಕಾರರಹಿತನಾಗಿ ಯಾವುದರಲ್ಲಿಯೂ ಸಂಗವಿಲ್ಲದ ಕೇವಲ ಸ್ವರೂಪನೆಂದೂ ಹೇಯಗುಣರಹಿತನೆಂದೂ, ಸರ್ವಾತ್ಮಕನೆಂದೂ, ಅನಾದಿಯೆಂದೂ, ಏಕ

ರೂಪನೆಂದೂ, ಬಹ್ಮಸ್ವರೂಪನೆಂದೂ, ನಾನಾವಿಧವಾಗಿ ಕೀರ್ತಿಸಲ್ಪಡುವ ನೋ ಸರ್ವಜಗನ್ಮೂಲಪುರುಷನಾದ ಆ ವಿಷ್ಣುವೇ ಧರ್ಮಸಂಸ್ಥಾಪನಾರ್ಥ ವಾಗಿ ಅಂಧಕರೆಂಬ ಯಾದವ ಕುಲದಲ್ಲಿ ಕೃಷ್ಣನಾಗಿ ಅವತರಿಸಿನು. ಅಸ್ತ್ರ ವಿಶಾರದರೂ, ಮಹಾವೀರ್ಯಶಾಲಿಗಳೂ, ಸಕಲಶಾಸ್ತ್ರಜ್ಞರೂ ಆದ ಸಾತ್ಯ ಕಿ, ಕೃತವರ್ಮರೆಂಬವರು ಕ್ರಮವಾಗಿ ಸತ್ಯಕನಲ್ಲಿಯೂ, ಹೃದೀಕನಲ್ಲಿಯೂ ಜನಿಸಿದರು. ಮಹಾ ತಪಸ್ವಿಯಾದ ಭರದ್ವಾಜಮುನಿಯ ವೀರ್ಯಬಿಂದು ವು ಒಂದು ದ್ರೋಣಿಯಲ್ಲಿ ಬಿದ್ದು ಶಿಶುವಾಗಿ ಬೆಳೆದುದರಿಂದ, ದ್ರೋಣನೆಂ ಬವನಾದನು. ಗೌತಮಗೋತ್ರದ ಶರದ್ವತನೆಂಬವನಿಗೆ ನೊದೆಹುಲ್ಲಿನ ತೆನೆಯಲ್ಲಿ ಒಂದು ಹೆಣ್ಣು, ಒಂದು ಗಂಡು ಹೀಗೆ ಅವಳಿಮಕ್ಕಳು ಹುಟ್ಟಿ ದರು. ಅವರಿಗೆ ಕ್ರಮವಾಗಿ ಕೃಪಿಯೆಂದೂ, ಕೃಪನೆಂದೂ ಹೆಸರು. ಆ ಕೃಪಿಯಲ್ಲಿ ದ್ರೋಣಾಚಾರ್ಯನಿಗೆ ಮಹಾಬಲಾಢ್ಯನಾದ ಅಶ್ವತ್ಥಾಮನು ಹುಟ್ಟಿದನು. ಸಾಕ್ಷಾತ್ತಾಗಿ ಅಗ್ನಿಯಂತೆಯೇ ಬೆಳಗುತ್ತಿರುವ ಧೃಷ್ಟ ದ್ಯುಮ್ನನು ದ್ರೋಣನ ವಿನಾಶಕ್ಕಾಗಿ ದ್ರುಪದನ ಯಜ್ಞಕುಂಡದಲ್ಲಿ ಧನು ಷ್ಪಾಣಿಯಾಗಿಯೇ ಅಗ್ನಿಯಿಂದ ಜನಿಸಿದನು. ಅಸಮಾನರೂಪವತಿಯೂ ತೇಜೋವತಿಯೂ ಆದ ಕೃಷ್ಣೆಯೆಂಬ ದ್ರುಪದಪುತ್ರಿಯೂ ಅದೇ ಅಗ್ನಿವೇದಿ ಕೆಯಿಂದ ಹುಟ್ಟಿದವಳು. ಪ್ರಹ್ಲಾದಶಿಷ್ಯನಾದ ನಗ್ನಜಿತ್ತೆಂಬವನಿದ್ದನು. ಅವನ ಮಗನು ಸುಬಲನು. ಆ ಸುಬಲನು ದೇವತೆಗಳ ಕೋಪಕ್ಕೆ ಪಾತ್ರ ನಾದುದರಿಂದ, ಅವನಿಗೆ ಧರ್ಮವನ್ನು ಕೆಡಿಸತಕ್ಕ ಸಂತತಿಯುಂಟಾಯಿತು. ಅವನ ಮಗನೇ ರಾಜ್ಯತಂತ್ರನಿಪುಣನಾದ ಶಕುನಿಯೆಂಬವನು. ದುರ್ಯೋಧ ನನ ತಾಯಿಯಾದ ಗಾಂಧಾರಿಯೂ, ಅವನ ಒಡಹುಟ್ಟಿದ ಸುಬಲಪುತ್ರಿ. ಶ್ರೀಕೃಷ್ಣದ್ವೈಪಾಯನನಿಂದ (ವ್ಯಾಸನಿಂದ) ವಿಚಿತ್ರವೀರ್ಯನ ಭಾರ್ಯೆಯ ರಲ್ಲಿ ಧೃತರಾಷ್ಟ್ರನೂ, ಪಾಂಡುವೂ ಜನಿಸಿದರು. ಅದೇ ವ್ಯಾಸಮುನಿಗೆ ಶೂದ್ರಸ್ತ್ರೀ ಗರ್ಭದಿಂದ ರಾಜನೀತಿಗಳಲ್ಲಿಯೂ, ಧರ್ಮಶಾಸ್ತ್ರದಲ್ಲಿಯೂ ನಿಪುಣನೂ, ಬ್ರಹ್ಮಜ್ಞಾನಸಂಪನ್ನನೂ ಆದ ವಿದುರನು ಹುಟ್ಟಿದನು. ಪಾಂ ಡುವಿಗೆ ಇಬ್ಬರು ಪತ್ನಿಯರಿದ್ದರು. ಅವರಲ್ಲಿ ಐದುಮಂದಿ ಪುತ್ರರಾದರು. ಅವರೊಬ್ಬೊಬ್ಬರೂ ದೇವತೆಗಳಿಗೆ ಸಮಾನರೆನಿಸಿದ್ದರು. ಆ ಐವರಲ್ಲಿ ಜ್ಯೇಷ್ಠನಾದ ಯುಧಿಷ್ಠಿರನು ಗುಣದಲ್ಲಿಯೂ ಎಲ್ಲರಿಗಿಂತಲೂ ಜ್ಯೇಷ್ಠನೆನಿ

ಸಿದ್ದನು. ಆ ಐವರಲ್ಲಿ ಯುಧಿಷ್ಠಿರನು ಯಮಧರ್ಮರಾಜನಿಂದಲೂ, ಭೀಮನು ವಾಯುವಿನಿಂದಲೂ, ಅರ್ಜುನನು ಇಂದ್ರನಿಂದಲೂ ಹುಟ್ಟಿದರು. ಗುರುಶುಶ್ರೂಷಾಪರರೂ, ಅತ್ಯಂತ ಸುಂದರಾಕಾರವುಳ್ಳವರೂ ಆದ ನಕುಲ ಸಹದೇವರಿಬ್ಬರೂ ಅಶ್ವಿನೀದೇವತೆಗಳಿಂದ ಜನಿಸಿದವರು. ಒಳ್ಳೇ ಜ್ಞಾನಿಯೆನಿಸಿಕೊಂಡ ಧೃತರಾಷ್ಟ್ರನಲ್ಲಿ ದುರ್ಯೋಧನನೇ ಮೊದಲಾದ ನೂರುಮಂದಿ ಮಕ್ಕಳಾದರು. ಆ ನೂರು ಮಕ್ಕಳಲ್ಲಿ ಯುಯುತ್ಸು (ಕರಣ) ದುಶ್ಶಾಸನ, ದುರ್ಮರ್ಷಣ, ದುಸ್ಸಹ, ವಿಕರ್ಣ, ಚಿತ್ರಸೇನ, ವಿವಿಂಶತಿ, ಜಯ, ಸತ್ಯವ್ರತ, ಪುರುಮಿತ್ರರೆಂಬ ಹತ್ತುಮಂದಿಯೂ ಮತ್ತು ದುರ್ಯೋಧನನೂ, ಈ ಹನ್ನೊಂದು ಮಂದಿಯೂ ಮಹಾರಥರು. ಯುಯುತ್ಸುವೆಂಬವನು ಕ್ಷತ್ರಿಯನಿಂದ ವೈಶ್ಯಜಾತಿಯ ಸ್ತ್ರೀಯಲ್ಲಿ ಹುಟ್ಟಿದವನಾದುದರಿಂದ ಅವನನ್ನು ಕರಣನೆಂದು ಹೇಳುವುದುಂಟು. ಸುಭದ್ರೆಗೆ ಅರ್ಜುನನಿಂದ ಹುಟ್ಟಿದವನು ಅಭಿಮನ್ಯುವೆಂಬವನು. ಅವನು ಸಾಕ್ಷಾತ್ತಾಗಿ ಶ್ರೀಕೃಷ್ಣನಿಗೆ ಸೋದರಳಿಯನು. ಪಾಂಡುರಾಜನ ಪೌತ್ರನು. ದ್ರೌಪದಿಯಲ್ಲಿ ಪಂಚಪಾಂಡವರಿಗೂ ಕ್ರಮವಾಗಿ ಐದುಮಂದಿ ಮಕ್ಕಳು ಹುಟ್ಟಿ ಅವರೆಲ್ಲರೂ, ಸರ್ವಶಾಸ್ತ್ರ ವಿಶಾರದರೂ, ರೂಪವಂತರೂ ಆಗಿದ್ದರು. ಆ ಕುಮಾರರಿಗೆ ಕ್ರಮವಾಗಿ, ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನರೆಂದು ಹೆಸರು. ಭೀಮನಿಗೆ ಅರಣ್ಯದಲ್ಲಿ ಹಿಡಿಂಬೆಯೆಂಬವಳ ಸಂಬಂಧದಿಂದ ಅವಳಲ್ಲಿ ಘಟೋತ್ಕಚನೆಂಬ ಮಗನಾದನು. ದ್ರುಪದನಿಗೆ ಭೀಷ್ಮನನ್ನು ಕೊಲ್ಲತಕ್ಕ ಶಿಖಂಡಿಯೆಂಬ ಪುತ್ರನಾದನು. ಅವನು ಮೊದಲು ಹೆಂಗಸಾಗಿದ್ದು ಆಮೇಲೆ ಗಂಡಸಾದನು. ಇವನಿಗೆ ಸ್ಥೂಣನೆಂಬ ಯಕ್ಷನು ದ್ರುಪದರಾಜನ ಪ್ರಿಯಕ್ಕಾಗಿ ಪುರುಷತ್ವವನ್ನು ಕೊಟ್ಟನು. ಕೌರವರ ಯುದ್ಧದಲ್ಲಿ ಲಕ್ಷೋಪಲಕ್ಷ ರಾಜರು ಯುದ್ಧಕ್ಕಾಗಿ ಬಂದು ಕೂಡಿದರು. ಅವರ ಸಂಖ್ಯೆಯಿಷ್ಟೆಂದು ಎಣಿಸುವುದಕ್ಕಾದರೂ ಸಾಧ್ಯವಿಲ್ಲ. ಅವರಲ್ಲಿ ಒಬ್ಬೊಬ್ಬರ ಹೆಸರನ್ನೂ ಹೇಳಿ ತೀರಿಸಬೇಕಾದರೆ, ಹತ್ತುಸಾವಿರವರ್ಷಗಳ ಕಾಲವಾದರೂ ಸಾಲದು. ಈ ಭಾರತಕಥಾವಿಸ್ತಾರಕ್ಕೆ ಮುಖ್ಯ ಕಾರಣಭೂತರಾದ ಕೆಲವು ಪ್ರಧಾನಪುರುಷರ ಹೆಸರನ್ನು ಮಾತ್ರ ತಿಳಿಸಿರುವೆನು '' ಎಂದನು.

ಇದು ಅರುವತ್ತುನಾಲ್ಕನೆಯ ಅಧ್ಯಾಯವು.

ಪರಶುರಾಮನಿಂದ ಕ್ಷತ್ರಿಯಕುಲವೆಲ್ಲ ನಷ್ಟವಾದಮೇಲೆ,
ತಿರುಗಿ ಬ್ರಾಹ್ಮಣರಿಂದ ಕ್ಷತ್ರಿಯವಂಶವು ಅಭಿವೃದ್ಧಿಗೆ
ಬಂದುದು. ಆಗಿನ ಧರ್ಮಮಾರ್ಗಗಳು. ದೈತ್ಯರು
ಭೂಮಿಯಲ್ಲಿ ಕ್ಷತ್ರಿಯರಾಗಿ ಹುಟ್ಟಿದುದು. ಅ
ವರ ಭಾರವನ್ನು ತಡೆಯಲಾರದೆ ಭೂದೇವಿ
ಯು ಬ್ರಹ್ಮನಲ್ಲಿ ಪ್ರಾರ್ಥಿಸಿದುದು. ಬ್ರ
ಹ್ಮನು ದೇವತೆಗಳಿಗೆ ಭೂಮಿಯಲ್ಲಿ
ಹುಟ್ಟುವಂತೆ ನಿಯಮಿಸಿದ್ದು.
ಇಂದ್ರನು ನಾರಾಯಣನ
ಲ್ಲಿ ಪ್ರಾರ್ಥಿಸಿದುದು.

ಆಮೇಲೆ ಜನಮೇಜಯನು ವೈಶಂಪಾಯನನನ್ನು ಕುರಿತು "ವಿಪ್ರೋತ್ತಮಾ! ಈಗ ನೀನು ಸಂಕ್ಷೇಪವಾಗಿ ನಾಮನಿರ್ದೇಶಮಾಡಿದವರ ಮತ್ತು ಇನ್ನೂ ನೀನು ಹೇಳದೆ ಬಿಟ್ಟಿರುವವರ ಚರಿತ್ರೆಗಳನ್ನೆಲ್ಲ ಸವಿಸ್ತರವಾಗಿ ನನಗೆ ತಿಳಿಸಬೇಕು. ಇನ್ನೂ ಬೇರೆ ಸಾವಿರಾರು ಮಂದಿ ರಾಜರ ವಿಚಾರಗಳನ್ನೆಲ್ಲ ನಿನ್ನಿಂದ ಚೆನ್ನಾಗಿ ಕೇಳಿ ತಿಳಿಯಬೇಕೆಂಬ ಆಸೆಯು ನನಗೆ ಬಹಳವಾಗಿದೆ. ದೇವತೆಗಳಿಗೆ ಸಮಾನರಾದ ಮಹಾರಥರು ಈ ಭೂಮಿಯಲ್ಲಿ ಯಾವ ಕಾರಣಕ್ಕಾಗಿ ಜನಿಸಿದರೋ ಅದನ್ನೆಲ್ಲ ನನಗೆ ವಿಶದವಾಗಿ ತಿಳಿಸು" ಎಂದನು.

ಅದಕ್ಕಾ ವೈಶಂಪಾಯನನು "ರಾಜೇಂದ್ರಾ! ಇವೆಲ್ಲವೂ ದೇವರಹಸ್ಯವೆಂದು ನಾನು ಕೇಳಿರುವೆನು. ಆದರೂ ಬ್ರಹ್ಮದೇವನಿಗೆ ನಮಸ್ಕರಿಸಿ ನನಗೆ ತಿಳಿದಮಟ್ಟಿಗೆ ಅದನ್ನು ನಿನಗೆ ವಿವರಿಸುವೆನು.

ಪೂರ್ವದಲ್ಲಿ ಜಮದಗ್ನಿಪುತ್ರನಾದ ಪರಶುರಾಮನು ಇಪ್ಪತ್ತೊಂದು ಸಾರಿ ಸುತ್ತಿಸುತ್ತಿ ಹುಡುಕಿ ಕ್ಷತ್ರಿಯರನ್ನು ಕೊಲ್ಲುತ್ತ, ಲೋಕದಲ್ಲಿ ಆ ಕ್ಷತ್ರಿಯಕುಲವೇ ಇಲ್ಲದಂತೆ ಮಾಡಿದಮೇಲೆ, ಮಹೇಂದ್ರಪರ್ವತಕ್ಕೆ ಹೋಗಿ ಅಲ್ಲಿ ತಪಸ್ಸನ್ನಾರಂಭಿಸಿದನು. ಆಮೇಲೆ ಕ್ಷತ್ರಿಯಸ್ತ್ರೀಯರೆಲ್ಲರೂ ತಮಗೆ ಸಂತಾನಾರ್ಥವಾಗಿ ಬ್ರಾಹ್ಮಣರಲ್ಲಿ ನುರೆಹುಗಲು, ಆ ಬ್ರಾಹ್ಮಣರು ಕೇವಲ

ಜಿತೇಂದ್ರಿಯರಾಗಿ ಕಾಮವಶರಾಗದಿದ್ದರೂ, ಋತುಕಾಲಗಳಲ್ಲಿಮಾತ್ರ ಆ ಸ್ತ್ರೀಯರೊಡನೆ ಸಂಗಮಿಸಿದರು. ಇದರಿಂದ ಅನೇಕಕ್ಷತ್ರಿಯ ರಮಣಿಯರಲ್ಲಿ ಗರ್ಭವುಂಟಾಗಿ ಪುತ್ರರು ಜನಿಸಿದರು. ಹಾಗೆ ಹುಟ್ಟಿದ ಕ್ಷತ್ರಿಯ ಕುಮಾರರು ಮೊದಲಿದ್ದ ಕ್ಷತ್ರಿಯರಿಗಿಂತಲೂ ಅಧಿಕ ಪರಾಕ್ರಮಿಗಳೆನಿಸಿದ್ದರು. ಇವರಿಂದ ಮುಂದೆಮುಂದೆ ಮಕ್ಕಳು ಮುಮ್ಮಕ್ಕಳೆಲ್ಲ ಹುಟ್ಟಿ, ತಿರುಗಿ ಕ್ಷತ್ರಿಯಜಾತಿಯು ವೃದ್ಧಿಗೆ ಬಂದಿತು. ಮಹಾ ತಪಸ್ವಿಗಳೆನಿಸಿದ ಬ್ರಾಹ್ಮಣಬೀಜದಿಂದ ಕ್ಷತ್ರಿಯಸ್ತ್ರೀಯರಲ್ಲಿ ಜನಿಸಿ ವೃದ್ಧಿಹೊಂದಿದ ಈ ಹೊಸಕ್ಷತ್ರಿಯವಂಶವು, ಧರ್ಮರತರಾಗಿಯೂ, ದೀರ್ಘಾಯುಷ್ಮಂತರಾಗಿಯೂ ಇದ್ದರು. ಅವರ ಆಳ್ವಿಕೆಯಲ್ಲಿ ವರ್ಣಾಶ್ರಮಧರ್ಮಗಳೆಲ್ಲ ತಪ್ಪದೆ ನಡೆಯುತಿದ್ದುವು. ಬ್ರಾಹ್ಮಣರೂ ಸ್ವಕರ್ಮರತರಾಗಿ ಇತರ ವರ್ಣದವರಿಂದ ಗೌರವಿಸಲ್ಪಡುತಿದ್ದರು.

ಆಗ ನಾಲ್ಕುವರ್ಣದವರೂ ಬ್ರಾಹ್ಮಣ್ಯದಲ್ಲಿ ಗೌರವವನ್ನಿಟ್ಟು ಆದರಿಸುತಿದ್ದರು. ಮನುಷ್ಯರು ಋತುಕಾಲಗಳಲ್ಲಿ ಹೊರತು, ಬೇರೆ ಕಾಲಗಳಲ್ಲಿ ಪತ್ನೀಸಂಗಮವನ್ನು ಮಾಡುತ್ತಿರಲಿಲ್ಲ. ಅಲ್ಲದೆ, ಕೇವಲ ಕಾಮವನ್ನೇ ಮುಖ್ಯವಾಗಿಟ್ಟುಕೊಂಡೂ ಭೋಗಕ್ಕೆ ಆಸೆಪಡುತ್ತಿರಲಿಲ್ಲ. ಓ ಜನಮೇಜಯರಾಜಾ! ತಿರ್ಯಗ್ಜಾತಿಯಲ್ಲಿ ಹುಟ್ಟಿದ ಎಲ್ಲಾ ಪ್ರಾಣಿಗಳೂ ಕೂಡ, ಋತುಕಾಲದಲ್ಲಿಯೇ ಹೆಣ್ಣು ಗಂಡುಗಳೆರಡೂ ಸೇರುವುವು. ಇತರ ಕಾಲಗಳಲ್ಲಿ ಸಿಕ್ಕಿದಹಾಗೆ ಆ ಅಜ್ಞಪ್ರಾಣಿಗಳು ಕೂಡ ಪ್ರವರ್ತಿಸುವುದಿಲ್ಲ. ಯುಕ್ತಾಯುಕ್ತ ವಿವೇಚನೆಯುಳ್ಳ ಮನುಷ್ಯರು ಆ ಕಟ್ಟುಪಾಡಿಗೆ ಒಳಪಟ್ಟಿರಬೇಕೆಂಬುದನ್ನು ಹೇಳಬೇಕಾದುದೇನು? ಹಾಗೆ ನಡೆದುಕೊಳ್ಳಬೇಕಾದುದೇ ಸರಿಯಾದ ಮಾರ್ಗವು. ಮತ್ತು ಕ್ಷೇಮಕರವು. ಅಂತಹ ಧರ್ಮಬಲದಿಂದಲೇ ಅನೇಕಸಂತತಿಗಳು ಅನೇಕಶತವರ್ಷಗಳ ಜೀವಿಸುತಿದ್ದರು. ಮತ್ತು ಆಗ ಎಲ್ಲಾ ಪ್ರಜೆಗಳೂ ಆಧಿ ವ್ಯಾಧಿ ಭಯಗಳೊಂದೂ ಇಲ್ಲದೆ ಸದಾ ಸಂತೋಷಿಗಳಾಗಿರುತಿದ್ದರು.

ಓ ಜನಮೇಜಯರಾಜಾ! ಅದರಿಂದಾಚೆಗೆ ಕ್ಷತ್ರಿಯಸಂತತಿಯವರು ಮೊದಲಿನಂತೆಯೇ ಪ್ರಬಲರಾಗಿ ಪರ್ವತಾರಣ್ಯಗಳಿಂದಲೂ, ಗ್ರಾಮನಗರ

ಗಳಿಂದಲೂ ಕೂಡಿದ ಸಮುದ್ರಾಂತವಾದ ಸಮಸ್ತ ಭೂಮಿಯನ್ನೂ ವಶ ಮಾಡಿಕೊಂಡು ಆಳುತ್ತ ಬಂದರು. ಎಲ್ಲರೂ ಧರ್ಮನಿರತರಾಗಿಯೇ ಪ್ರಜೆ ಗಳನ್ನು ಪಾಲಿಸುತಿದ್ದರು. ಆಗ ಬ್ರಾಹ್ಮಣಾದಿ ಚತುರ್ವರ್ಣದವರೂ, ಅನ್ಯೋ ನ್ಯವಾಗಿ ನಿತ್ಯಸಂತೋಷಿಗಳಾಗಿ ರಾಜರನ್ನೇ ಪರದೈವವೆಂದು ಭಾವಿಸಿ ಗೌರವಿಸುತಿದ್ದರು. ಅರಸರೂ ಪ್ರಜೆಗಳಮೇಲೆ ನಿಗ್ರಹಾನುಗ್ರಹಗಳನ್ನು ತೋರಿಸುವುದರಲ್ಲಿ, ಕೋಪವನ್ನಾಗಲಿ, ಪಕ್ಷಪಾತಬುದ್ಧಿಯನ್ನಾಗಲಿ ಮುಂ ದಿಟ್ಟುಕೊಳ್ಳದೆ, ದಂಡನೆಗೆ ಯೋಗ್ಯರಾದವರಿಗೆ ಅವರವರ ತಪ್ಪಿಗೆ ತಕ್ಕ ದಂಡನೆಯನ್ನೇ ವಿಧಿಸುತಿದ್ದರು. ಹೀಗೆ ರಾಜರು ಧರ್ಮದಿಂದ ಪ್ರಜಾಪಾಲನ ವನ್ನು ಮಾಡುತ್ತಿರುವಾಗ, ವರ್ಷಾಧಿಪತಿಯೆನಿಸಿಕೊಂಡ ದೇವೇಂದ್ರನೂ ಕೂಡ, ಆಯಾ ದೇಶಗಳಿಗೆ, ಮತ್ತು ಆಯಾ ಕಾಲಕ್ಕೆ ಬೇಕಾದಂತೆ ಮಳೆ ಯನ್ನು ಸುರಿಸಿ, ಲೋಕದ ಎಲ್ಲಾ ಪ್ರಾಣಿಗಳನ್ನೂ ತೃಪ್ತಿಗೊಳಿಸುತಿದ್ದನು. ಆಗಿನ ಕಾಲದಲ್ಲಿ ಅಲ್ಪಾಯುಸ್ಸಿನಲ್ಲಿ ಯಾರೂ ಸಾಯುತ್ತಿರಲಿಲ್ಲ. ಸರಿ ಯಾದ ಯೌವನವು ಬಾರದ ಸ್ತ್ರೀಯರನ್ನು ಯಾರೂ ಸಂಗಮಿಸುತ್ತಿರಲಿಲ್ಲ. ಹೀಗೆ ಆ ಕಾಲದಲ್ಲಿ ಈ ಭೂಮಿಯು ಪೂರ್ಣಾಯುಷ್ಯವುಳ್ಳ ಪ್ರಜೆಗಳಿಂದ ಲೇ ತುಂಬಿದ್ದಿತು. ಸಾಗರಾಂತವಾದ ಸಮಸ್ತ ಭೂಮಿಯೂ ನಿತ್ಯಸಂತೋ ಷಭರಿತವಾಗಿದ್ದಿತು. ಕ್ಷತ್ರಿಯರು ಆಗಾಗ ಭೂರಿದಕ್ಷಿಣೆಗಳುಳ್ಳ ಮಹಾ ಯಜ್ಞಗಳನ್ನು ನಡೆಸಿ, ಭೂಲೋಕದಲ್ಲಿ ಅನ್ನದಾನಾದಿಗಳಿಂದ ಪ್ರಜೆಗಳಿ ಗೂ, ಸ್ವರ್ಗದಲ್ಲಿ ಹವಿಸ್ಸುಗಳಿಂದ ದೇವತೆಗಳಿಗೂ ತೃಪ್ತಿಯನ್ನುಂಟುಮಾ ಡುತಿದ್ದರು.

ಬ್ರಾಹ್ಮಣರಲ್ಲಿ ಒಬ್ಬೊಬ್ಬರೂ ವೇದವೇದಾಂಗಗಳನ್ನೂ, ಉಪನಿಷ ತ್ತುಗಳನ್ನೂ ಅಧ್ಯಯನಮಾಡುತ್ತ, ಸ್ವಕರ್ಮದಲ್ಲಿ ನಿರತರಾಗಿದ್ದರು. ವೇ ದವಿತ್ತುಗಳಾದ ಬ್ರಾಹ್ಮಣರು ವೇದವಿಕ್ರಯವನ್ನು (ಎಂದರೆ ದ್ರವ್ಯಕ್ಕಾಗಿ ವೇದಗಳನ್ನು ಹೇಳಿಕೊಡುವುದು) ಮಾಡುತ್ತಿರಲಿಲ್ಲ. ಶೂದ್ರರ ಮುಂದೆ (ದುಡ್ಡಿಗಾಗಿ) ವೇದಗಳನ್ನೋದುತ್ತಲೂ ಇರಲಿಲ್ಲ.

ವೈಶ್ಯರು ಕಾಲಕಾಲಕ್ಕೆ ಕೃಷಿಕಾರ್ಯಗಳನ್ನು ನಡೆಸುತ್ತಿದ್ದರು. ಒಳ್ಳೇ ಪ್ರಾಯವುಳ್ಳ ಎತ್ತುಗಳನ್ನೇ ಕೃಷಿಕಾರ್ಯಕ್ಕಾಗಿ ಉಪಯೋಗಿಸುತಿದ್ದರು

ವಯಸ್ಸು ಕಳೆದು ಅಥವಾ ದುರ್ಬಲದೇಹವುಳ್ಳ ಎತ್ತುಗಳಮೇಲೆ ನೊಗವನ್ನೇರಿಸುತ್ತಿರಲಿಲ್ಲ. ಕೆಲಸಮಾಡಿ ಜೀರ್ಣವಾದ ಎತ್ತುಗಳನ್ನು ಓಡಿಸಿಬಿಡದೆ ಮನೆಯಲ್ಲಿಯೇ ಇಟ್ಟುಕೊಂಡು ಸುಖವಾಗಿ ಪೋಷಿಸುತಿದ್ದರು. ಕರುಗಳಿಗೆ ಹುಲ್ಲು ಮೇಯುವುದಕ್ಕೆ ಶಕ್ತಿಯಿಲ್ಲದೆ ಇನ್ನೂ ಅವು ಹಾಲನ್ನೇ ಕುಡಿಯುವ ಸ್ಥಿತಿಯಲ್ಲಿದ್ದಾಗ, ಜನರು ಹಸುಗಳನ್ನು ಕರೆಯುತ್ತಿರಲಿಲ್ಲ. ವರ್ತಕರು ವಸ್ತುಗಳನ್ನು ವಿಕ್ರಯಿಸುವಾಗ, ತೂಕದಲ್ಲಿಯಾಗಲಿ, ಅಳತೆಯಲ್ಲಿಯಾಗಲಿ ಸ್ವಲ್ಪವೂ ಮೋಸಮಾಡುತ್ತಿರಲಿಲ್ಲ. ಆಗಿನ ಕಾಲದಲ್ಲಿ ಎಲ್ಲಾ ವರ್ಣದ ಜನರೂ ಧರ್ಮದಲ್ಲಿಯೇ ದೃಷ್ಟಿಯಿಟ್ಟು, ಧರ್ಮದಲ್ಲಿಯೇ ನಿರತರಾಗಿ, ತಮ್ಮತಮ್ಮ ಕರ್ಮಗಳನ್ನು ಧರ್ಮಕ್ಕೆ ಕಟ್ಟುಬಿದ್ದೇ ನಡೆಸುತಿದ್ದರು. ಹೀಗೆ ಆ ಕಾಲದಲ್ಲಿ ಎಲ್ಲಾ ವರ್ಣದವರೂ, ಧರ್ಮಪರರಾಗಿದ್ದುದರಿಂದ ಧರ್ಮಲೋಪಕ್ಕಾಗಲಿ, ಅಧರ್ಮಾಭಿವೃದ್ಧಿಗಾಗಲಿ ಎಲ್ಲಿಯೂ ಅವಕಾಶವಿರಲಿಲ್ಲ. ಆ ಕಾಲದಲ್ಲಿ ಗೋವುಗಳಿಗೂ, ಸ್ತ್ರೀಯರಿಗೂ ಸಕಾಲಕ್ಕೆ ಪ್ರಸವವಾಗುತ್ತಿದ್ದಿತು. ಸಸ್ಯವರ್ಗಗಳೂಕೂಡ ಋತುಧರ್ಮವನ್ನನುಸರಿಸಿ, ಆಯಾ ಕಾಲಕ್ಕೆ ತಪ್ಪದೆ ಫಲಪುಷ್ಪಗಳನ್ನು ಸಮೃದ್ಧಿಯಾಗಿ ಕೊಡುತಿದ್ದುವು. ಹೀಗೆ ಆಗಿನ ಕೃತಯುಗದಲ್ಲಿ ಧರ್ಮವು ಚೆನ್ನಾಗಿ ನಡೆದುಬಂದುದರಿಂದ, ಭೂಮಿಯೆಲ್ಲವೂ ಪ್ರಾಣಿಗಳಿಂದಲೂ, ಜನಗಳಿಂದಲೂ ಸಮೃದ್ಧವಾಗಿದ್ದಿತು. ಹೀಗೆ ಮನುಷ್ಯಲೋಕವು ಸರ್ವವಿಧದಲ್ಲಿಯೂ ತೃಪ್ತಿಕರವಾಗಿ ಅಭಿವೃದ್ಧಿಗೆ ಬರುತ್ತಿದ್ದಕಾಲದಲ್ಲಿ, ರಾಜಸ್ತ್ರೀಯರ ಗರ್ಭದಿಂದ ದೈತ್ಯಾಂಶವುಳ್ಳ ಸಂತತಿಗಳು ಜನಿಸಲಾರಂಭಿಸಿದುವು. ಇದಕ್ಕೆ ಕಾರಣವೇನೆಂಬುದನ್ನೂ ತಿಳಿಸುವೆನು ಕೇಳು.

ದೇವಾಸುರ ಯುದ್ಧದಲ್ಲಿ, ಆಗಾಗ ಅನೇಕ ದೈತ್ಯರು ದೇವತೆಗಳಿಂದ ಪರಾಜಿತರಾಗಿ, ತಮ್ಮ ಐಶ್ವರ್ಯವನ್ನೂ, ಪದವಿಯನ್ನೂ ಕಳೆದುಕೊಂಡ ಮೇಲೆ, ಅವರಿಗೆ ಅಲ್ಲಿ ನಿಲ್ಲುವುದಕ್ಕೆ ತಕ್ಕ ನೆಲೆಯಿಲ್ಲದಂತಾಯಿತು. ಹೀಗೆ ಬಹಳ ಶೋಚನೀಯಸ್ಥಿತಿಗೆ ಬಂದ ಆ ದೈತ್ಯರು, ಭೂಲೋಕದಲ್ಲಿಯಾದರೂ ತಮ್ಮ ನಿರಂಕುಶಾಧಿಕಾರವನ್ನು ಸಂಪಾದಿಸಬೇಕೆಂದು ಬಯಸಿ, ಈ ಭೂಮಿಯಲ್ಲಿ ನಾನಾಯೋನಿಗಳಲ್ಲಿ ಜನ್ಮವನ್ನೆತ್ತಿದರು. ಹಸು, ಕುದುರೆ,

ಕತ್ತೆ, ಒಂಟೆ, ಎಮ್ಮೆ, ಮಾಂಸಭಕ್ಷಕ ಪ್ರಾಣಿಗಳು, ಆನೆ, ಜಿಂಕೆ, ಮೊದಲಾದ ನೀಚೋಚ್ಚಜಾತಿಯ ಪ್ರಾಣಿಗಳೊಳಗೆಲ್ಲ ಬೇರೆಬೇರೆ ರೂಪಗಳಿಂದ ಹುಟ್ಟುತ್ತ ಬಂದರು.

ಓ ಜನಮೇಜಯರಾಜಾ! ಈ ಭೂಮಿಯೆಂಬುದು ಎಲ್ಲಕ್ಕೂ ಆಧಾರವಾದುದು. ಯಾವುದನ್ನಾದರೂ ಭರಿಸತಕ್ಕುದು. ಹಾಗಿದ್ದರೂ ಅದುವರೆಗೆ ನಾನಾರೂಪಗಳಿಂದ ಹುಟ್ಟಿಯೂ, ಇನ್ನೂ ಮೇಲೆಮೇಲೆ ಹುಟ್ಟುತ್ತಲೂ ಇರುವ ಆ ದೈತ್ಯರ ಭಾರವನ್ನು ಭೂಮಿಯು ತಡೆದು ನಿಲ್ಲಲಾರದೆ ಹೋಯಿತು. ಇದರಮೇಲೆ ದೈತ್ಯಾಂಶದಿಂದಲೇ ಹುಟ್ಟಿದ ಅನೇಕಕ್ಷತ್ರಿಯರು ರಾಜರಾಗಿ ಪ್ರಭುತ್ವಕ್ಕೆ ಬಂದರು. ಸ್ವರ್ಗಭ್ರಷ್ಟರಾದ ದೈತ್ಯರೂ, ದಾನವರೂ ಅಧಿಕಾರಕ್ಕೆ ಬಂದಮೇಲೆ, ತಮ್ಮ ಬಲದಿಂದಲೂ, ಐಶ್ವರ್ಯದಿಂದಲೂ ಮದೋನ್ಮತ್ತರಾಗಿ, ನಾನಾರೂಪಗಳಿಂದ ಕ್ರಮಕ್ರಮವಾಗಿ ಸಮುದ್ರಾಂತವಾದ ಸಮಸ್ತ ಭೂಮಿಯನ್ನೂ ವ್ಯಾಪಿಸಿಬಿಟ್ಟರು. ಇವರು ಶತ್ರುಗಳನ್ನು ಕ್ರೂರವಾಗಿ ಕೊಲ್ಲುತ್ತಿದ್ದುದುಮಾತ್ರವಲ್ಲದೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರನ್ನೂ, ಇತರಪ್ರಾಣಿಗಳನ್ನೂ ನಿಷ್ಕಾರಣವಾಗಿ ಪೀಡಿಸುತ್ತ ಬಂದರು. ನಿಷ್ಕಾರಣವಾಗಿ ಕಂಡಕಂಡ ಪ್ರಾಣಿಗಳನ್ನು ಹೆದರಿಸುವುದು, ಹೊಡೆದುಕೊಲ್ಲುವುದು. ಭಂಗಗೊಳಿಸುವುದು, ಈ ರೀತಿಯಾಗಿ ಹಿಂಸಿಸುತ್ತಿದ್ದರು. ಸಾವಿರಾರುಮಂದಿ ದುಷ್ಟಕ್ಷತ್ರಿಯರು ಭೂಮಿಯನ್ನೆಲ್ಲ ಸುತ್ತುತಿದ್ದರು.

ಇದಲ್ಲದೆ ಇವರು ವಿವಿಕ್ತವಾದ ಋಷ್ಯಾಶ್ರಮಗಳಿಗೆ ಹೋಗಿ, ಅಲ್ಲಿ ಕೇವಲ ಶಾಂತರಾಗಿ, ತಪಸ್ಸಿನಲ್ಲಿದ್ದ ಮಹರ್ಷಿಗಳನ್ನೆಲ್ಲ ನಿಷ್ಕಾರಣವಾಗಿ ಪೀಡಿಸಿ ಅವಮಾನಗೊಳಿಸುತಿದ್ದರು. ವೀರ್ಯಮದದಿಂದ ಕೊಬ್ಬಿದ ಆ ರಾಜರಿಗೆ ಬ್ರಾಹ್ಮಣರೆಂದರೆ ಆಗದು. ಸ್ವಲ್ಪವೂ ಕನಿಕರವಿಲ್ಲದೆ ಅವರನ್ನು ಬಾಧಿಸುತಿದ್ದರು. ಹೀಗೆ ಮದಾಂಧರಾದ ದೈತ್ಯರಿಂದ ಭೂಮಿಯೆಲ್ಲವೂ ಆವರಿಸಲ್ಪಟ್ಟು, ಪ್ರಜೆಗಳಲ್ಲಿ ಶಾಂತಿಯು ಕೆಟ್ಟುಹೋಗಿ, ಭೂಮಿಗೂ ಬಾಧೆಯು ಹೆಚ್ಚಾಯಿತು. ಭೂಮಿಗೆ ಆಧಾರಗಳೆನಿಸಿದ ಅಷ್ಟದಿಗ್ಗಜಗಳು, ಆದಿಶೇಷನು, ಕುಲಪರ್ವತಗಳು, ಇವೆಲ್ಲವೂ ಕೂಡ ದುಷ್ಟಕ್ಷತ್ರಿಯ ಭಾರ

ದಿಂದ ಬಳುಕುತಿದ್ದ ಭೂಮಿಯು ಭಾರವನ್ನು ಭರಿಸಲಾರದೆಹೋದುವು. ಆಗ ಭೂದೇವಿಯು ಆ ಭಾರಕ್ಕೆ ಹೆದರಿ ಸೃಷ್ಟಿಕರ್ತನಾದ ಬ್ರಹ್ಮದೇವನಲ್ಲಿ ಮರೆಹೊಕ್ಕು ಪ್ರಾರ್ಥಿಸುವುದಕ್ಕಾಗಿ ಬ್ರಹ್ಮಸಭೆಗೆ ಬಂದಳು. ಅವರ ವೈಭವವನ್ನು ಕೇಳಬೇಕೆ? ಸಭಾಮಧ್ಯದಲ್ಲಿ ದೇವತಾಸಾರ್ವಭೌಮನಾದ ಬ್ರಹ್ಮದೇವನು ದಿವ್ಯಾಸನದಲ್ಲಿ ಕುಳಿತಿರುವನು. ಅನೇಕ ದೇವತೆಗಳೂ, ಬ್ರಾಹ್ಮಣರೂ, ಮಹರ್ಷಿಗಳೂ ಸುತ್ತಲೂ ಸೇವಾಸಕ್ತರಾಗಿ ನೆರೆದಿರುವರು. ಗಂಧರ್ವರೂ, ಅಪ್ಸರಸ್ಸುಗಳೂ ತಮ್ಮ ದಿವ್ಯ ಗಾನಗಳಿಂದ ಹೊಗಳುಭಟರಂತೆ ಮುಂದೆ ಕೈಕಟ್ಟಿ ನಿಂತು, ಲೋಕಕರ್ತನೂ, ಅವ್ಯಯನೂ ಆದ ಆ ಬ್ರಹ್ಮದೇವನನ್ನು ನಾನಾವಿಧವಾಗಿ ಸ್ತುತಿಸುತ್ತಿರುವರು. ಹೀಗೆ ಮಹಾವೈಭವದಿಂದಿದ್ದ ಬ್ರಹ್ಮನಲ್ಲಿಗೆ ಶರಣಾರ್ಥಿನಿಯಾಗಿ ಬಂದ ಭೂದೇವಿಯು ವಿನಯದಿಂದ ಆ ಬ್ರಹ್ಮನಿಗೆ ನಮಸ್ಕರಿಸಿ, ಎಲ್ಲಾ ಲೋಕಪಾಲಕರೂ ಸುತ್ತಲೂ ನೆರೆದು ಕೇಳುತ್ತಿರುವಹಾಗೆಯೇ, ತನ್ನ ಕಷ್ಟವನ್ನು ವಿಜ್ಞಾಪಿಸತೊಡಗಿದಳು.

ಓ ಜನಮೇಜಯರಾಜಾ! ಆ ಬ್ರಹ್ಮದೇವನಾದರೋ ಲೋಕಕ್ಕೆಲ್ಲ ಆದಿಕರ್ತನೆನಿಸಿದವನು. ಜಗತ್ತನ್ನು ತಾನೇ ಸೃಷ್ಟಿಸಿದವನು. ದೇವಮನುಷ್ಯಾದಿ ಸಕಲ ಪ್ರಾಣಿಗಳ ಅಂತರಂಗದಲ್ಲಿಯೂ ಅಡಗಿದ್ದು, ಅವರ ಪೂರ್ವೋತ್ತರ ಭಾವನೆಗಳನ್ನೆಲ್ಲ ಚೆನ್ನಾಗಿ ಅರಿಯಬಲ್ಲವನು. ಅಂತವನಿಗೆ ತಿಳಿಯದ ಸಂಗತಿಯು ಲೋಕದಲ್ಲಿ ಯಾವುದುತಾನೇ ಉಂಟು? ಸರ್ವಜ್ಞನೂ, ಸರ್ವರಿಗೂ ನಿಯಾಮಕನೂ ಆದ ಆ ಬ್ರಹ್ಮದೇವನಿಗೆ, ಭೂದೇವಿಯು ತನ್ನಲ್ಲಿಗೆ ಬಂದ ಕಾರಣವೇನೆಂಬುದು ಮೊದಲೇ ತಿಳಿದಿದ್ದಿತು. ಸರ್ವಶಕ್ತನೂ, ಲೋಕಪ್ರಭುವೂ ಆದ ಪರಮೇಷ್ಠಿಯು ಭೂಮಿಯನ್ನು ಕಂಡೊಡನೆ “ ಎಲೆ ವಸುಂಧರೇ! ನೀನು ನನ್ನಲ್ಲಿಗೆ ಯಾವ ಉದ್ದೇಶದಿಂದ ಬಂದೆಯೋ ಅದನ್ನು ನಾನು ಬಲ್ಲೆನು. ಇದಕ್ಕೆ ಮೊದಲೇ ನಾನೇ ನಿನ್ನ ಕಾರ್ಯಕ್ಕಾಗಿ ದೇವತೆಗಳನ್ನು ಕಳುಹಿಸುವುದಾಗಿದ್ದೆನು. ಇದೋ! ಈಗಲೇ ಕಳುಹಿಸಿಕೊಡುವೆನು. ಇನ್ನು ನೀನು ನಿನ್ನ ಸ್ಥಾನಕ್ಕೆ ಹೋಗಿಸೇರು ” ಎಂದು ಸಮಾಧಾನಹೇಳಿ ಕಳುಹಿಸಿಬಿಟ್ಟನು.

ಜನಮೇಜಯರಾಜಾ! ಹೀಗೆ ಸೃಷ್ಟಿಕರ್ತನಾದ ಬ್ರಹ್ಮನು ಭೂಮಿಯನ್ನು ಕಳುಹಿಸಿಬಿಟ್ಟಮೇಲೆ ಇತ್ತಲಾಗಿ ತನ್ನ ಸುತ್ತಲೂ ನೆರೆದಿದ್ದ ದೇವಗಣಗಳನ್ನು ನೋಡಿ, "ಎಲೈ ದೇವತೆಗಳಿರಾ! ಈಗ ಭೂಲೋಕದಲ್ಲಿ ಕ್ಷತ್ರಿಯರೂಪದಿಂದ ಹುಟ್ಟಿರುವ ನಿಮ್ಮ ವೈರಿಗಳಾದ ದೈತ್ಯ ದಾನವರ ಹೆಮ್ಮೆಯನ್ನು ಮುರಿದು, ಅವರಿಂದ ಉಂಟಾಗಿರುವ ಭೂಭಾರವನ್ನು ತಗ್ಗಿಸುವುದಕ್ಕಾಗಿ, ನೀವೂ ನಿಮ್ಮ ದೇವತಾಸ್ವರೂಪವನ್ನು ಮರೆಸಿಕೊಂಡು ನಿಮ್ಮ ನಿಮ್ಮ ಅಂಶಗಳಿಂದ ಬೇರೆಬೇರೆಯಾಗಿ ಭೂಮಿಯಲ್ಲಿ ಜನ್ಮವನ್ನೆತ್ತಬೇಕು" ಎಂದನು. ಆಮೇಲೆ ಗಂಧರ್ವರನ್ನೂ, ಅಪ್ಸರಸ್ಸುಗಳನ್ನೂ ಕರೆದು, "ನೀವೂ ಹಾಗೆಯೇ ನಿಮ್ಮ ಸ್ವಸ್ವಾಂಶದಿಂದ ನಿಮ್ಮ ಇಷ್ಟಬಂದಂತೆ ಭೂಮಿಯಲ್ಲಿ ಹುಟ್ಟಿ, ದೇವತೆಗಳ ಕಾರ್ಯದಲ್ಲಿ ಸಹಾಯಕರಾಗಿರಿ" ಎಂದನು.

ಇಂದ್ರಾದಿ ದೇವತೆಗಳೆಲ್ಲರೂ ಬ್ರಹ್ಮನು ತಮಗೆ ಹೇಳಿದ ಹಿತವಾದಗಳನ್ನು ಸಂತೋಷದಿಂದ ಅಂಗೀಕರಿಸಿ, ತಮ್ಮತಮ್ಮ ಅಂಶಗಳಿಂದ ಭೂಮಿಯಲ್ಲಿ ಅವತರಿಸಲು ನಿರ್ಧರಮಾಡಿಕೊಂಡರು. ಹೀಗೆ ಅವರೆಲ್ಲರೂ ಭೂಲೋಕಕ್ಕೆ ಹೋಗಲು ನಿಶ್ಚಯಮಾಡಿಕೊಂಡಮೇಲೆ, ಈ ಪ್ರಯತ್ನವನ್ನು ಕುರಿತು ಭಗವಂತನಾದ ಶ್ರೀಮನ್ನಾರಾಯಣನ ಅನುಜ್ಞೆಯನ್ನು ಪಡೆಯಬೇಕೆಂದು ತೋರಿದುದರಿಂದ, ಇತರ ದೇವತೆಗಳೊಡನೆ ಸೇರಿ ದೇವೇಂದ್ರನು, ಶತ್ರುಸಂಹಾರಕನೂ, ವೈಕುಂಠವಾಸಿಯೂ ಆದ ಶ್ರೀಮಹಾವಿಷ್ಣುವಿನ ಸಾನ್ನಿಧ್ಯಕ್ಕೆ ಬಂದು ಸೇರಿದನು. ಅಲ್ಲಿ ಭಗವಂತನ ಅಪ್ರಾಕೃತ ದಿವ್ಯ ಸೌಂದರ್ಯವನ್ನು ಕೇಳಬೇಕೆ? ಜ್ವಲಿಸುತ್ತಿರುವ ಸುದರ್ಶನಚಕ್ರದಿಂದಲೂ, ನಂದಕವೆಂಬ ಗದೆಯಿಂದಲೂ ಶೋಭಿತವಾದ ಕೈಗಳು! ನಡುವಿನಲ್ಲಿ ಪೀತಾಂಬರವೆಂಬ ಸರಿಗೆಯ ಪಟ್ಟೆಮಡಿ! ಕಾಲಮೇಘದಂತೆ ಶ್ಯಾಮಲವಾದ ದೇಹಕಾಂತಿ! ಮೈಯಲ್ಲಿ ಶ್ರೀವತ್ಸವೆಂಬ ಅಸಾಧಾರಣವಾದ ಮಚ್ಚೆಯ ಗುರುತು! ನಾಭಿಯಲ್ಲಿ ನಾಳಸಹಿತವಾಗಿ ನೀಡಿದ ತಾವರೆ ಹೂ! ಇಂತಹ ದಿವ್ಯಾದ್ಭುತ ಸೌಂದರ್ಯದಿಂದೊಪ್ಪುತ್ತ, ದೇವದೇವೋತ್ತಮನೂ, ಸೃಷ್ಟಿಕರ್ತನಾದ ಬ್ರಹ್ಮನಿಗೂ ನಿಯಾಮಕನೂ, ಸಮಸ್ತ ಪ್ರಾಣಿಗಳ ಇಂದ್ರಿ

ಯುಗಳನ್ನೂ ನಡೆಸತಕ್ಕ ನಾಥನೂ, ಸಕಲ ದೇವತಾ ಪೂಜಿತನೂ ಆದ ಪುರುಷೋತ್ತಮನನ್ನು ಕಂಡು, ಇಂದ್ರಾದಿದೇವತೆಗಳು ಭೂಮಿಯೊಳಗಿನ ಸಮಸ್ತಕಂಟಕಗಳನ್ನೂ ನೀಗಿಸಿ, ಕ್ಷೇಮವನ್ನುಂಟುಮಾಡುವುದಕ್ಕಾಗಿ ನಿಜಾಂಶದಿಂದ ಅವತರಿಸಬೇಕೆಂದು ಪ್ರಾರ್ಥಿಸಿಕೊಂಡರು.

ಭಗವಂತನಾದ ಶ್ರೀಮಹಾವಿಷ್ಣುವೂ ಕೂಡ, ಪ್ರಸನ್ನಕಟಾಕ್ಷದಿಂದ ಅವರನ್ನು ಅನುಗ್ರಹಿಸಿ "ತಥಾಸ್ತು" "ಹಾಗೆಯೇ ಆಗಲಿ" ಎಂದು ಉತ್ತರವನ್ನು ಕೊಟ್ಟು ಕಳುಹಿಸಿಬಿಟ್ಟನು.

ಇದು ಅರುವತ್ತೈದನೆಯ ಅಧ್ಯಾಯವು.

**ಇಲ್ಲಿಗೆ ಅಂಶಾವತರಣಪರ್ವವು ಮುಗಿದುದು.**



People's Printing and Publishing House, Ltd., Madras.